ನೆಮ್ಮದಿಯ ನಾಳೆ ನಮ್ಮದು

# ಹೊಸತು



ನವಕರ್ನಾಟಕ ಪ್ರಕಾಶನ

ನವೆಂಬರ್ ೨೦೦೪

ಬೆಲೆ : ರೂ. ೧೦

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ಜಿ. ಎಂ. ಬೊಮ್ನಳ್ಳಿ
ಎನ್. ಆರ್. ಬೊಮ್ನಳ್ಳಿ, ಸ್ಯಾಮ್, ರವಿಕುಮಾರ್ ಅಜ್ಜೀಪುರ

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ನಮ್ಮ ರಾಜ್ಯದ ಚಲನಚಿತ್ರದ ಉದ್ಯಮವು ಸ್ಥಿರವಾಗಿ ತನ್ನ ಕಾಲ ಮೇಲೆ ನಿಲ್ಲಲು ಇನ್ನೂ ಕಲಿತಿಲ್ಲವೆಂಬುದು ಈಚಿನ ದುರ್ಘಟನೆಗಳಿಂದ ತಿಳಿಯಬರುತ್ತದೆ. ಕನ್ನಡದ ಬಗೆಗಿನ ಜಾಗೃತಿಯೆಂದರೆ ಉದ್ಯೋಗ-ಶಿಕ್ಷಣ-ಆಡಳಿತ, ಈ ಮೂರು ಕ್ಷೇತ್ರಗಳಲ್ಲೂ ಆಗಬೇಕೆಂದು ಇತ್ತೀಚೆಗೆ ಶ್ರೀ ಬರಗೂರು ರಾಮಚಂದ್ರಪ್ಪನವರು ವಿಶ್ಲೇಷಿಸಿ ಹೇಳಿದ್ದು ಸಿನಿಮಾ ಮಂದಿಗೆ ತಿಳಿಯುವುದಿಲ್ಲವೋ ಏನೋ ! ಭಾಷೆಗೂ ಬದುಕಿಗೂ ನೇರ ಸಂಬಂಧ ಏರ್ಪಟ್ಟಾಗ ಜನರು ಭಾಷೆಗೆ ಅವಶ್ಯಕವಾಗಿ ಮಾನ್ಯತೆ ನೀಡುತ್ತಾರೆಂದು ಸಹ ಶ್ರೀ ಬರಗೂರರು ತಿಳಿಸಿಕೊಟ್ಟರು. ಇದರ ಪರಿವೆಯೇ ಇಲ್ಲದೆ ಕನ್ನಡ ಚಲನಚಿತ್ರಗಳಿಗೆ ಮಾರುಕಟ್ಟೆ ದೊರಕಿಸಿಕೊಳ್ಳುವ ಯತ್ನ ಎಷ್ಟು ಸಫಲವಾಗಬಹುದೆಂಬುದು ವಿಚಾರ ಮಾಡಬೇಕಾದ ವಿಷಯ. ಬೇರೆ ಭಾಷೆಯ ಚಿತ್ರಗಳನ್ನು ಅವು ಬಿಡುಗಡೆ ಹೊಂದಿದ ಏಳು ವಾರಗಳ ನಂತರವೇ ಕರ್ನಾಟಕದಲ್ಲಿ ಪ್ರದರ್ಶಿಸಬೇಕೆಂಬ ನಿಯಮವನ್ನು ಜಾರಿಗೊಳಿಸಿದರೆ ಕನ್ನಡ ಚಲನಚಿತ್ರಗಳನ್ನು ನೋಡಲು ಜನ ಚಿತ್ರಮಂದಿರ ಗಳಲ್ಲಿ ಕಿಕ್ಕಿರಿದು ತುಂಬುತ್ತಾರೆಂಬ ನಿರೀಕ್ಷೆ ಬಾಲಿಶವಾಗಿ ತೋರುತ್ತದೆ. ಮೊದಲಿಗೆ, ಅಂತಹ ಕಾನೂನು ಸಕ್ರಮವೇ ಎಂಬ ಪ್ರಶ್ನೆ ಇದೆ. ಎರಡನೆಯದಾಗಿ, ವ್ಯಾಪಾರದಿಂದ ಲಾಭ ಗಳಿಸಲು ಹೊರಟಿರುವ ಒಂದು ಖಾಸಗಿ ಉದ್ಯಮಕ್ಕೆ ಬೆಂಬಲವಾಗಿ ನಿಲ್ಲಲು, ರಾಜ್ಯ ಸರ್ಕಾರವು ಅದೇ ಉದ್ಯಮದ ಇನ್ನೊಂದು ವಿಭಾಗಕ್ಕೆ ಅಡ್ಡಿಯುಂಟುಮಾಡುವುದು ಸಾಧ್ಯವಾಗುತ್ತದೆಯೆ ? ಚಿನ್ನದ ಗಣಿಯನ್ನು ಮುಚ್ಚಿದಾಗ ನಿಷ್ಕ್ರಿಯವಾಗಿದ್ದ ಸರ್ಕಾರ ಈಗ ಕನ್ನಡ ಚಲನಚಿತ್ರೋದ್ಯಮಕ್ಕೆ ಏನೋ ಆಪತ್ತು ಬಂದಿದೆಯೆಂದು ಅದಕ್ಕೆ ಊರುಗೋಲು ಕೊಡಲು ಮುಂದಾಗುತ್ತದೆಯೆ ?

ಬೇರೆ ಭಾಷೆಗಳ ಜನರು ನಮ್ಮೊಡನೆ ಇರುವಾಗ ಅವರಿಗೆ ಅವರ ಭಾಷೆಯ ಚಿತ್ರಗಳನ್ನು ನೋಡಕೂಡದೆಂಬ ನಿಯಮ ಮಾಡಲಾದೀತೆ? ಬೇರೆಲ್ಲರಿಗೂ ಒಂದು ಕಾನೂನು, ಚಿತ್ರೋದ್ಯಮದವರಿಗೇ ಒಂದು ಕಾನೂನು ಹೇಗೆ ಸಾಧ್ಯ ? ನೂರಾರು ಉದ್ಯಮಗಳು ಮುಚ್ಚಿ ಹೋಗಿ ಕೆಲಸಗಾರರು ಬೀದಿಪಾಲಾದಾಗ ಈ ಸಿನಿಮಾ ಮಂದಿ ಅವರ ಪರವಾಗಿ ನಿಲ್ಲುವುದಿರಲಿ, ಅವರನ್ನು ಕುರಿತ ಒಂದು ಸಿನಿಮಾ ಸಹ ಮಾಡಲಿಲ್ಲವಲ್ಲ! ಈಗ ಚಿತ್ರೋದ್ಯಮ ಕೇಳುತ್ತಿರು ವಂತೆ ಬೇರೆ ವಿಭಾಗದವರೂ ಕೇಳಬೇಕು. ಉದಾಹರಣೆಗೆ, ಬಟ್ಟೆ ತಯಾರಕರು. "ನಾವು ತಯಾರಿಸಿದ ಬಟ್ಟೆಯೆಲ್ಲಾ ಮಾರಾಟವಾದ ನಂತರ ಬೇರೆ ರಾಜ್ಯಗಳ ಕಾರ್ಖಾನೆಗಳ ಬಟ್ಟೆಯನ್ನು ಮಾರುಕಟ್ಟೆಗೆ ಬಿಡಿ" ಎಂದೇನಾದರೂ ಅವರು ಹೇಳಿದರೆ ಹೇಗಿರುತ್ತದೆ ? ಚಿತ್ರೋದ್ಯಮ ದಲ್ಲಿರುವಂತೆ ಅಲ್ಲಿಯೂ ಬಂಡವಾಳ ಹೂಡಿರುವವರಿದ್ದಾರೆ, ಕೆಲಸಗಾರರಿದ್ದಾರೆ. ಅವರಿಗಿಲ್ಲದ ರಕ್ಷಣೆಯು ಬಣ್ಣದ ಪ್ರಪಂಚಕ್ಕೆ ಮಾತ್ರ ದೊರೆಯಬೇಕೆನ್ನುವುದರ ಔಚಿತ್ಯವೇನು ? ಜೊತೆಗೆ, ಚಲನಚಿತ್ರ ನೋಡಬೇಕೆಂದು ಯಾರನ್ನಾದರೂ ಬಲವಂತ ಮಾಡಲು ಸಾಧ್ಯವೆ? ತನ್ನ ಗುಣಮಟ್ಟ ಹೆಚ್ಚಿಸಿಕೊಂಡು ಜನರನ್ನು ಆಕರ್ಷಿಸುವ ಸಾಮರ್ಥ್ಯ ಚಿತ್ರೋದ್ಯಮದಲ್ಲಿ ಉಡುಗಿ ಹೋಯಿತೆ ? ಯಾರೋ ಖ್ಯಾತ ಚಿತ್ರನಟ ಅಥವಾ ಚಿತ್ರನಟಿ ಹೇಳಿದರೆಂದು ಜನ ಕನ್ನಡ ಚಲನಚಿತ್ರ ನೋಡಲು ನುಗ್ಗುತ್ತಾರೆಯೆ ? ಇದು ಮೂಲತಃ ಉದ್ಯಮ. ನಾಟಕ ಕಂಪನಿಗಳು ಎಷ್ಟು ಮುಚ್ಚಿಹೋದವು ? ಆಗೆಲ್ಲಾ ಸರ್ಕಾರ ಅವಕ್ಕೆ ಆಧಾರ ನೀಡಿತೆ ? ಕಲ್ಲು ತೂರುವ ಚಾಕಚಕ್ಯತೆಯು ಉದ್ಯಮದ ಕ್ಷೀಣಿಸುವಿಕೆಗೆ ಪರಿಹಾರವೆಂದು ಭಾವಿಸುವವರ ಬುದ್ಧಿವಂತಿಕೆಯು ಉದ್ಯಮಕ್ಕೆ ಆಘಾತ ಉಂಟುಮಾಡಬಹುದೇ ವಿನಾ ಸುಭದ್ರತೆ ಕಲ್ಪಿಸಿಕೊಡುವುದಿಲ್ಲ.

* * *

ಮಾನ್ಯ ಬಿ. ಎಸ್. ಯಡಿಯೂರಪ್ಪನವರು ಇತ್ತೀಚೆಗೆ ತಮ್ಮ ಹುಟ್ಟುಹಬ್ಬವನ್ನು ಅದ್ದೂರಿಯಿಂದ ಆಚರಿಸಿಕೊಂಡು ತಮ್ಮ ರಾಜಕೀಯ ಭವಿಷ್ಯವನ್ನು ಗಟ್ಟಿಮಾಡಿಕೊಳ್ಳುವುದರಲ್ಲಿ ತಕ್ಕಮಟ್ಟಿನ ಯಶಸ್ಸು ಪಡೆದರು. ತಮ್ಮ ಪಕ್ಷಕ್ಕೆ ಇಂತಹ ಹೊಸ ಸಂಸ್ಕೃತಿಯೊಂದನ್ನು ಕಲ್ಪಿಸಿಕೊಟ್ಟ ಶ್ರೀಮಂತಿಕೆ ಅವರದು. ಇದನ್ನು ದೊಡ್ಡದು ಮಾಡಿ ಖಂಡಿಸಹೊರಡುವುದು ಸಲ್ಲದು. ಏಕೆಂದರೆ ಶ್ರೀ ಯಡಿಯೂರಪ್ಪನವರು ಅತ್ಯಂತ ದೊಡ್ಡ ವ್ಯಸನದಲ್ಲಿ ಮುಳುಗಿದ್ದಾರೆ ಮತ್ತು 'ಹೊಸತು' ಅವರ ವ್ಯಥೆಗೆ ಗೌರವ ನೀಡುತ್ತದೆ. ಅದೆಂತಹ ದಾರುಣ ಪ್ರಸಂಗ ! ಮನೆಯಲ್ಲಿ ಯಾರೊಬ್ಬರೂ ಇಲ್ಲದಾಗ ಇಂತಹ ದುರಂತ ಸಂಭವಿಸಿಬಿಟ್ಟದ್ದು ನಿಜಕ್ಕೂ ಒಂದು ಮರ್ಮಾಘಾತ. ಆದಾಗ್ಯೂ ಒಂದು ಸಣ್ಣ ಪ್ರಶ್ನೆಯನ್ನು ನಾವೆಲ್ಲಾ ಹಾಕಿಕೊಳ್ಳಬೇಕು. ನೀರಿನ ಅಭಾವವನ್ನು ಎದುರಿಸಲು ಅದರ ಶೇಖರಣೆಗಾಗಿ ಎಷ್ಟು ಪ್ರಮಾಣದ ಸಂಪುಗಳನ್ನು ಕಟ್ಟಿಕೊಳ್ಳಬೇಕು ? ಅದು ನೀರು ಶೇಖರಣೆಯೋ ದೊಡ್ಡ ಬಾವಿಯ ರಚನೆಯೋ ? ಚಿಕ್ಕ ಸಂಪಿನಲ್ಲಿ ಸಾವು ಸಂಭವಿಸುವುದಿಲ್ಲ. ನೀರನ್ನು ಮಿತಿಮೀರಿ ಬಳಸುವ ಮಂದಿ ಬೆಂಗಳೂರಿನಂತಹ ನಗರಗಳಲ್ಲಿ ಬಹಳ ಇದ್ದಾರೆ. ಕೆಲವರಂತೂ ಅವರ ಮನೆಯ ಮುಂದಿನ ರಸ್ತೆ ತೊಳೆಯಲು ಪ್ರತಿದಿನ ಅರ್ಧ ಟ್ಯಾಂಕರ್ ನೀರನ್ನು ಸುರಿಯುತ್ತಾರೆ. ಇನ್ನಾವುದೋ ಮೂಲೆಯಲ್ಲಿ ಅರ್ಧ ಬಕೆಟ್ ನೀರಿಲ್ಲದೆ ಜನ ಪರಿತಪಿಸುತ್ತಿರುತ್ತಾರೆ. ಎಲ್ಲೆಂದರಲ್ಲಿ ಕೊಳವೆ ಬಾವಿ ತೆಗೆಯುವುದನ್ನು ನಿಷೇಧಿಸಬೇಕಾಗಿರುವಂತೆ ಖಾಸಗಿ ಸಂಪುಗಳ ಪರಿಮಾಣವನ್ನೂ ನಿಗದಿಗೊಳಿಸಬೇಕಾದ ಅವಶ್ಯಕತೆ ಇದೆ. ಮಾನ್ಯ ಯಡಿಯೂರಪ್ಪನವರ ವ್ಯಥೆಯು ಈ ದಿಕ್ಕಿನಲ್ಲಿ ಅವರನ್ನು ಕಾರ್ಯಪ್ರವೃತ್ತರನ್ನಾಗಿಸಿದರೆ ಶ್ರೀಮತಿ ಯಡಿಯೂರಪ್ಪ ನವರು ಘೋರ ಆಕಸ್ಮಿಕದಲ್ಲಿ ಅಸುನೀಗಿದ್ದನ್ನು ಸಹಿಸಿಕೊಳ್ಳಲು ಅವರಿಗೆ ಸಾಧ್ಯವಾದೀತು. ಇಂತಹ ದುರಂತ ಮತ್ತೆಲ್ಲೂ ಸಂಭವಿಸಕೂಡದು.



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ-೪ ನವೆಂಬರ್ ೨೦೦೪

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


**ಸಂಪಾದಕೀಯ**

# ಅನುಪಮ ಪ್ರಸಂಗ

**ಕೇಂ**ದ್ರ ಚಲನಚಿತ್ರ ಸೆನ್ಸಾರ್ ಮಂಡಲಿಯಿಂದ ಅನುಪಮ ಖೇರ್ ಅವರನ್ನು ವಜಾ ಮಾಡಿದ ಮೇಲೆ ಅವರು ಸಿನಿಮೀಯವಾಗಿ ಪ್ರತಿಕ್ರಿಯಿಸಿ ಮಾನನಷ್ಟ ಮೊಕದ್ದಮೆಗಳನ್ನು ಹಾಕುವ ಬೆದರಿಕೆ ಒಡ್ಡಿದ್ದಾರೆ. ಕಮ್ಯುನಿಸ್ಟರಂತೆ ಆರೆಸ್ಸೆಸ್‌ನವರೂ ಸಾಮಾನ್ಯವಾಗಿ ತಮ್ಮ ಬದ್ಧತೆಯನ್ನು ಮುಚ್ಚಿಡುವ ಪದ್ಧತಿ ಇಲ್ಲ. ಖೇರ್ ಅವರಿಗೆ ಆರೆಸ್ಸೆಸ್ ದೃಷ್ಟಿಕೋನ ಮಾನ್ಯ, ಆದರೆ ಹಾಗೆಂದು ಬೇರೆಯವರು ಗುರುತಿಸಬಾರದೆಂಬುದು ಅವರ ಆಗ್ರಹ. ಹಾಗೆ ಬಹಿರಂಗವಾಗಿ ಗುರುತಿಸಿಕೊಳ್ಳದಿರಲು ಅವರಿಗೆ ವಿಶಿಷ್ಟ ಕಾರಣಗಳಿರಬಹುದು. ಅವು ಸಾರ್ವಜನಿಕರಿಗೆ ಪ್ರಸ್ತುತವಲ್ಲ. ತಮ್ಮ ಹೃದಯವನ್ನು ಬಲಭಾಗಕ್ಕೆ ವರ್ಗಾಯಿಸಿಕೊಂಡು ಮತೀಯ ಭಾವನೆಗಳನ್ನು ಪ್ರಚುರಪಡಿಸಲು ಯಾರೂ ಅವರಿಗೆ ತಡೆಯೊಡ್ಡಿಲ್ಲ. ವಾಜಪೇಯಿ ಸರ್ಕಾರವು ತಮ್ಮನ್ನು ಸೆನ್ಸಾರ್ ಮಂಡಲಿಗೆ ನೇಮಿಸಿದ್ದುದರಿಂದ ಆ ಸರ್ಕಾರ ತೆರಳಿದಾಗ ಇವರೂ ಸಭ್ಯತೆಯಿಂದ ತೆರಳಬಹುದಿತ್ತು. ಹಾಗೆ ಮಾಡದೆ ಇವರು ಕುರ್ಚಿಗೆ ಅಂಟಿಕೊಂಡು ತಮ್ಮ ಮತೀಯ ಪ್ರಣಾಲಿಕೆಗೆ ಚಾಲನೆ ಕೊಡುವುದನ್ನು ಮುಂದುವರೆಸಿದ್ದರು. ಗುಜರಾತಿನ ಗಲಭೆಗಳನ್ನು ವಿಶ್ಲೇಷಿಸಿ ಟೀಕಿಸುವ ಡಾಕ್ಯುಮೆಂಟರಿ 'ಫೈನಲ್ ಸಲ್ಯೂಷನ್ಸ್'ಅನ್ನು ಸಹ ತಮ್ಮ ಸಮಿತಿ ತಡೆಹಿಡಿಯಲಿಲ್ಲವಾದ್ದರಿಂದ ತಾವು ವಸ್ತುನಿಷ್ಠರಾಗಿಯೇ ಕಾರ್ಯ ನಿರ್ವಹಿಸಿದುದಾಗಿ ಖೇರ್ ನುಡಿದಿದ್ದಾರೆ. ಇತ್ತೀಚೆಗೆ ಆ ಚಿತ್ರಕ್ಕೆ ಮಾನ್ಯತೆ ನೀಡಿದ್ದು ನಿಜ; ಆದರೆ ಎಷ್ಟು ಕಾಲದ ನಂತರ ? ಕೇಂದ್ರದಲ್ಲಿ ಹೊಸ ಸರ್ಕಾರ ಬಂದ ಎಷ್ಟೋ ತಿಂಗಳುಗಳ ನಂತರ. ಚಿತ್ರ ಸಿದ್ಧವಾಗಿದ್ದು ವಾಜಪೇಯಿ ಸರ್ಕಾರವಿನ್ನೂ ಅಸ್ತಿತ್ವದಲ್ಲಿದ್ದಾಗ. ಆಗ ಅದಕ್ಕೆ ಮಾನ್ಯತೆ ನೀಡಲಿಲ್ಲವಾಗಿ ಬೆಂಗಳೂರು ಸೇರಿದಂತೆ ಅನೇಕ ನಗರಗಳಲ್ಲಿ ಅದರ ಪ್ರದರ್ಶನಕ್ಕೆ ಬಜರಂಗ ದಳದ ಉಪದ್ರವಿಗಳು ಅಡ್ಡಿಯುಂಟುಮಾಡಿದ್ದರು. ಇಂತಹ ಪ್ರಸಂಗಗಳು ಇನ್ನೂ ಹಲವಾರಿವೆ. ಹಾಗಿರುವಾಗ ಅವರಿಗೆ ಅರ್ಧಚಂದ್ರ ಪ್ರಯೋಗ ಮಾಡಿದ್ದು ತರವಲ್ಲವೆಂದು ಕನಲಿದರೆ ಅದು ಸಿನಿಮೀಯ ನಟನೆ ಮಾತ್ರವೇ ಆಗಿರುತ್ತದೆ.

ಭಾರತೀಯ ಜನತಾ ಪಕ್ಷದ ಧುರೀಣರಿಗೆ ತಾವು ಹಾಗೂ ತಮ್ಮ ಪರಿವಾರದವರು ಎಸಗಿದ ಕುಕೃತ್ಯಗಳನ್ನು ಚಾಪೆಯಡಿ ತಳ್ಳಿಬಿಡುವ ಪ್ರವೃತ್ತಿ ಅಗಾಧವಾಗಿದೆ. ಜನರೂ ಅವನ್ನು ಮರೆತುಬಿಟ್ಟಿರುತ್ತಾರೆಂದು ಅವರ ಎಣಿಕೆ. ಮಾಧ್ಯಮದವರು ಕೆಲವರು ಈ ಧುರೀಣರ ಅನುಯಾಯಿಗಳಾದ್ದರಿಂದ ಅವಕ್ಕೆ ಪ್ರಚಾರ ದೊರೆಯುವುದಿಲ್ಲ. ಉದಾಹರಣೆಗೆ, ಈಚಿನ ಪೆಟ್ರೋಲ್ ಬಂಕ್ ಹಗರಣವನ್ನು ನೋಡಬಹುದು. ಲಾಲೂಪ್ರಸಾದರ ಮೇವು ಹಗರಣವನ್ನು ಸದಾ ನೆನಪಿಸುವ ಮಾಧ್ಯಮಗಳು ಪೆಟ್ರೋಲ್ ಬಂಕ್‌ಗಳನ್ನು ಪಡೆದವರ ಮತ್ತು ಕೊಡಿಸಿದವರ ಬಗ್ಗೆ ಏನನ್ನೂ ಹೇಳಬಯಸುವುದಿಲ್ಲ. ನಮ್ಮ ರಾಜ್ಯದಲ್ಲೇ ಅನಂತಕುಮಾರ್ ಪಕ್ಷದ ಮೂವತ್ತಕ್ಕೂ ಹೆಚ್ಚು ಜನಕ್ಕೆ ಬಂಕುಗಳು ಮಂಜೂರಾಗಿದ್ದವು, ಈಗ ರದ್ದಾಗಬೇಕಾಗಿದೆ. ಎಲ್ಲರೂ ಆ ಪಕ್ಷದವರ ಪತ್ನಿಯರು, ಮಕ್ಕಳು, ಸೋದರಿಯರು. ಸುಸಂಸ್ಕೃತರ ಪಕ್ಷವೇ ಇದು ? ೧೯೭೭ರ ಚುನಾವಣೆಯ ನಂತರ ಜನತಾ ಪಕ್ಷ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿತ್ತು. ಅದರಲ್ಲಿ ವಾಜಪೇಯಿ-ಅಡ್ವಾನಿ ಪರಿವಾರ ದೊಡ್ಡ ಪ್ರಮಾಣದಲ್ಲಿ ಪ್ರಾತಿನಿಧ್ಯ ಪಡೆದಿತ್ತು. ಜಾರ್ಜ್ ಫರ್ನಾಂಡಿಸ್ ಸಹ ಇದ್ದರು. ಈ ಪ್ರಭೃತಿಗಳೆಲ್ಲಾ ಸೇರಿ ಐದಾರು ಚುನಾಯಿತ ರಾಜ್ಯಗಳ ಸರ್ಕಾರಗಳನ್ನು ವಜಾ ಮಾಡಬೇಕೆಂದು ಅಂದಿನ ಹಂಗಾಮಿ ರಾಷ್ಟ್ರಾಧ್ಯಕ್ಷ ಬಿ.ಡಿ. ಜತ್ತಿಯವರ ಮೇಲೆ ಒತ್ತಡ ಹೇರಿದರು. ಅವರು ಕೂಡಲೆ ಮಣಿಯದಿದ್ದಾಗ ಪರಿವಾರದ 'ಸಭ್ಯ' ಯುವಕರ ತಂಡವೊಂದು ಅವರಿಗೆ ಚಪ್ಪಲಿ ಹಾರ ಹಾಕಹೊರಟಿದ್ದರು. ನಂತರ ಜತ್ತಿ ಅವರು ಅಡ್ವಾನಿ ಹೇಳಿದಂತೆ ನಡೆದುಕೊಂಡು ನಿರ್ಜೀವಿ ಅಧ್ಯಕ್ಷನೆಂಬ ಬಿರುದು ಪಡೆದರು. ಅನುಪಮ ಖೇರರಿಗೆ ಯಾರೂ ಅಂತಹ ಮಾಲೆಯನ್ನು ಹಾಕಿ ನಿರ್ಗಮಿಸುವಂತೆ ಮಾಡಿಲ್ಲ ಮತ್ತು ಮೂಲೆಗೂ ತಳ್ಳಿಲ್ಲ. ಗೌರವಯುತವಾಗಿ ರಾಜಿನಾಮೆ ಕೊಡದಿದ್ದುದರಿಂದ ಅವರನ್ನು ಕೆಳಗಿಳಿಸಿ ಬೇರೆಯವರ ನೇಮಕ ಮಾಡಲಾಗಿದೆ, ಅಷ್ಟೆ. ಅಡ್ವಾನಿ ಪರಿವಾರವು ಹಾಕಿಕೊಳ್ಳಬೇಕಾದ ಪ್ರಶ್ನೆಗಳು ಅನೇಕವಿವೆ. ಉದಾಹರಣೆಗೆ, ಪ್ರಸಾರ ಭಾರತಿಯ ಅಧ್ಯಕ್ಷ ಎಂ.ವಿ. ಕಾಮತ್ ಇನ್ನೂ ಏಕೆ ತೊಲಗಿ ಹೋಗಿಲ್ಲ? ಅವರ ಈಚಿನ ಬರಹಗಳು ಎಷ್ಟು ವಿಷಪೂರಿತವಾಗಿವೆಯೆಂಬುದನ್ನು ಗಮನಿಸಿದರೆ ಅವರನ್ನು ಯಾವ ಜವಾಬ್ದಾರಿ ಸ್ಥಾನದಲ್ಲೂ ಉಳಿಸಿಕೊಳ್ಳಬಾರದೆನಿಸುತ್ತದೆ. ಅವರ ಪಡೆಯನ್ನು ದುರ್ದರ್ಶನ ಮತ್ತು ಆಕಾಶವಾಣಿಯಲ್ಲಿ ಎಷ್ಟು ತುಂಬಿದ್ದಾರೆಂದರೆ ಈಗಲೂ ವಾಜಪೇಯಿ ಕಾಲದ ಪ್ರಚಾರ ವೈಖರಿ ಈ ಮಾಧ್ಯಮಗಳಲ್ಲಿ ಉಳಿದುಕೊಂಡಿದೆ. ಕಾಮತರನ್ನು ವಜಾ ಮಾಡಬೇಕಾದ್ದು ಖೇರರನ್ನು ಪದಚ್ಯುತರನ್ನಾಗಿಸಿದ್ದಕ್ಕಿಂತಲೂ ಹೆಚ್ಚು ತುರ್ತಿನ ಅಗತ್ಯವಾಗಿದೆ. ಇಡೀ ರಾಷ್ಟ್ರದ ಪುಸ್ತಕ ಭಂಡಾರಗಳಿಗೆ ಪುಸ್ತಕಗಳನ್ನು ಕೊಳ್ಳುವ ರಾಜಾ ರಾಮಮೋಹನ ರಾಯ್ ಯೋಜನೆಯಲ್ಲಿ ಕಳೆದೆರಡು ವರ್ಷಗಳಲ್ಲಿ ಅಪ್ಪಟ ರದ್ದಿಯನ್ನು ತುಂಬಲು ಸಹಾಯ ನೀಡಿದ ಸಮಿತಿ ನೇಮಕಗೊಂಡಿದ್ದುದು ಮುರಳಿ ಮನೋಹರ ಜೋಶಿಯವರ ನೇತೃತ್ವದಲ್ಲಿ. ಆ ಸಮಿತಿಯಲ್ಲಿ ಬೆಂಗಳೂರಿನ ಇಬ್ಬರು ವಿದ್ವಾಂಸರೂ ಇದ್ದುದು ಅವರ ಆರೆಸ್ಸೆಸ್ ಹಿನ್ನೆಲೆಯಿಂದಾಗಿ ಎಂಬುದರ ಬಗ್ಗೆ ಯಾರಿಗೂ ಅನುಮಾನವಿಲ್ಲ. ವಸ್ತುನಿಷ್ಠ ಧ್ಯೇಯದ ಅವಶ್ಯಕತೆ ಇರುವ ಯಾವುದೇ ಸಮಿತಿಗೂ ಅಂತಹವರ ನೇಮಕ ಕೂಡದೆಂಬುದು ತಾರ್ಕಿಕವಾಗಿದೆ. ಸಿಮ್ಲಾದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಒಂದು ಸಂಸ್ಥೆ ಇದೆ. ಗೋಪಾಲಕೃಷ್ಣ ಅಡಿಗರಂಥವರು ಹಿಂದೆ ಅಲ್ಲಿ ಅಧ್ಯಯನಕ್ಕೆ ಹೋಗಿದ್ದರು; ಅದೂ ಫೆಲೋಶಿಪ್ ಪಡೆದು. ಆ ಸಂಸ್ಥೆಯ ಕಳೆದ ಐದು ವರ್ಷಗಳ ಕಾರ್ಯಾಚರಣೆಯಲ್ಲಿ ನೂರಾರು ಹೊಲಸಿನ ಪ್ರಸಂಗಗಳು ಜರುಗಿವೆಯೆಂದು ವರದಿಯಾಗಿದೆ. ಬೆಂಗಳೂರಿನ ಒಬ್ಬ ಸಂಸ್ಕೃತ ಪ್ರಾಧ್ಯಾಪಕರು ಆ ಸಂಸ್ಥೆಯ ಆಡಳಿತ ಮಂಡಲಿಗೆ ಜೋಶಿಯವರಿಂದ ನೇಮಕಗೊಂಡಿದ್ದರು; ಪಾಂಡಿತ್ಯದ ಕಾರಣದಿಂದಲ್ಲ, ಆರೆಸ್ಸೆಸ್‌ನವರೆಂಬ ಕಾರಣದಿಂದ. ಆ ಸಂಸ್ಥೆಯ ಎಲ್ಲ ಪ್ರಕರಣಗಳೂ ತನಿಖೆಗೊಳಗಾಗಬೇಕು ಮತ್ತು ಜೋಶಿಯಿಂದ ನೇಮಕಗೊಂಡಿದ್ದವರನ್ನು ವಜಾ ಮಾಡಬೇಕೆಂದು ಹೇಳಿದರೆ ತಪ್ಪೇನು? ಅನುಪಮ ಖೇರರ ಅಬ್ಬರ ಇಂತಹ ಪ್ರಸಂಗಗಳನ್ನೆಲ್ಲಾ ಮುಚ್ಚಿಹಾಕುವ ಮತ್ತು ತಮ್ಮ ಪ್ರಣಾಲಿಕೆಯನ್ನು ಲಂಬಿಸುವ ಹುನ್ನಾರ.

ಅಡ್ವಾನಿ ಪರಿವಾರಕ್ಕೆ ದೇಶದ ಕಾನೂನು ಅನ್ವಯವಾಗಕೂಡದೆಂಬ ನಿಲುವು ಉಮಾ ಭಾರತಿಯವರ ಹುಬ್ಬಳ್ಳಿ ಗಲಭೆಗಳ ಸಂದರ್ಭದಲ್ಲಿ ಇತ್ತೀಚೆಗೆ ಪ್ರತಿಪಾದಿತವಾಗಿತ್ತು. ಈಗ ಕಾರ್ಕಳದ ಶಾಸಕ ಸುನಿಲ್ ಕುಮಾರರ ಸರದಿ. ಬಜರಂಗ ದಳದ ನಾಯಕರಾಗಿ ಪ್ರಚೋದನಕಾರಿ ಮಾತುಗಳನ್ನಾಡಿದ್ದರೆಂಬ ಆಪಾದನೆ ಅವರ ಮೇಲಿದೆ. ನ್ಯಾಯಾಲಯವು ಅವರನ್ನು ಬಂಧಿಸಬೇಕೆಂದು ಆಜ್ಞೆ ನೀಡಿದೆ. ಭಾರತೀಯ ಜನತಾ ಪಕ್ಷವು ಅದನ್ನು ಪ್ರತಿಭಟಿಸುತ್ತದೆಯೆಂದು ಹೇಳಲಾಗಿದೆ. ಅಡ್ವಾನಿ ಪಕ್ಷದ

ಪ್ರಕಾರ ದೇಶದ ಕಾನೂನಿನನ್ವಯ ಯಾರನ್ನಾದರೂ ನಕ್ಸಲೀಯರೆಂದು ಹೇಳಿ ಕೊಚ್ಚಿಹಾಕಬಹುದು, ಆದರೆ ಪರಿವಾರದವರಿಗೆ ಯಾವ ಕಾನೂನು ಸಹ ಅನ್ವಯವಾಗುವಂತಿಲ್ಲ. ಇದು ಅನುಪಮವಾದ ದುಷ್ಟವಾದ. ಅನುಪಮ ಖೇರರ ಅಬ್ಬರವೂ ಅದೇ ಸಾಲಿಗೆ ಸೇರುತ್ತದೆ. ಅಮೆರಿಕಾದ ರಾಯಭಾರಿ ಅಸ್ಸಾಂನ ಮುಖ್ಯಮಂತ್ರಿಗೆ ಪತ್ರ ಬರೆದು ತನ್ನ ಮೂಗು ತೂರಿಸಲು ಹೊರಟಿದ್ದನ್ನು ಸಮರ್ಥಿಸುವ ಅದ್ವಾನಿಯವರಿಗೆ ರಾಷ್ಟ್ರದ ಬಗ್ಗೆ ಹೆಮ್ಮೆಯೂ ಇಲ್ಲ, ತಮ್ಮ ಅಮೆರಿಕಾ ಬಾಲಬಡುಕುತನದ ಬಗ್ಗೆ ನಾಚಿಕೆಯೂ ಇಲ್ಲ. ಅವರ ಪಕ್ಷದಲ್ಲಿ ಎಲ್ಲವೂ ಅನುಪಮವಾದುದೇ!

ಅವರನ್ನು ಹಿಂದೆ ಹಾಕಲು ಸ್ಪರ್ಧಿಗಿಳಿದಿರುವವರು ಜಾರ್ಜ್ ಫರ್ನಾಂಡಿಸ್ ಮತ್ತು ಜಯಾ ಜೇಟ್ಲಿ. ಅವರಿಬ್ಬರೂ ಈಗ ಮಯನ್ಮಾರಿನಲ್ಲಿ ಪ್ರಜಾಪ್ರಭುತ್ವದ ಸ್ಥಾಪನೆಗೆ ಆದ್ಯತೆ ನೀಡುವ ಕ್ರಿಯೆಯಲ್ಲಿ ಮುಳುಗಿದ್ದಾರೆ. ಮಯನ್ಮಾರಿನ ಪರಿಸ್ಥಿತಿಯಿಂದಾಗಿ ಭಾರತದ ಭದ್ರತೆಗೆ ಧಕ್ಕೆ ಉಂಟಾಗುತ್ತದೆಯೆಂದು ಅವರು ಹೇಳಿದ್ದಾರೆ. ತಾವು ರಕ್ಷಣಾ ಸಚಿವರಾಗಿದ್ದ ವರ್ಷಗಳಲ್ಲಿ ಜಾರ್ಜ್ ಕಣ್ಣಿಗೆ ಮಯನ್ಮಾರ್ ಬೀಳಲಿಲ್ಲ. ಅಮೆರಿಕಾ ರಾಯಭಾರಿಯ ಪತ್ರಕ್ಕೂ ಜಾರ್ಜ್ ಕೇಂದ್ರೀಕರಿಸುತ್ತಿರುವ ವಿಷಯಕ್ಕೂ ಸಂಬಂಧವಿದೆ. ಅಂದರೆ, ಅದ್ವಾನಿ ಅಮೆರಿಕಾ ರಾಯಭಾರಿಯ ವಂದಿಮಾಗಧನಾದರೆ ತಾನು ಅಮೆರಿಕಾದ ಕಾಲಾಳಾಗಿ ಸೇವೆ ಸಲ್ಲಿಸಲು ಹಿಂಜರಿಯುವುದಿಲ್ಲವೆಂಬುದು ಜಾರ್ಜ್ ಘೋಷಣೆ. ತೆಹೆಲ್ಕಾ ಶೋಧನೆಗೆ ಹೊಸ ತಿರುವು ನೀಡಲಾಗಿರುವ ಇಂದಿನ ಸಂದರ್ಭದಲ್ಲಿ ಜಾರ್ಜ್ ಅನುಪಮ ಕ್ರಮವೊಂದನ್ನು ಆರಿಸಿಕೊಳ್ಳಬೇಕಾದ್ದು ಸಹಜವಾಗಿಯೇ ಇದೆ. ಆದರೆ ಸಾರ್ವಜನಿಕರು ಕಣ್ಣುಮುಚ್ಚಿ ಕೂತಿಲ್ಲ ಮತ್ತು ಅವರ ಮಿದುಳಿನಲ್ಲಿ ಕಸ ತುಂಬಿಕೊಂಡಿಲ್ಲ.

[signature]

## ಕೇವಲ ಪಕ್ಷ ಪಲ್ಲಟ ಸಾಮಾಜಿಕ ಪರಿವರ್ತನೆಯಲ್ಲ

ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯು - ಅಂದರೆ ಅಮೆರಿಕ ಮತ್ತು ಯೂರೋಪ್ ಮಾದರಿಯ ಬಹುಪಕ್ಷೀಯ ರಾಜಕೀಯ ವ್ಯವಸ್ಥೆಯಲ್ಲಿ - ಹೆಚ್ಚೆಂದರೆ ಪಕ್ಷಗಳೇ ಅಲ್ಲದೆ ರಾಷ್ಟ್ರದ ಪ್ರಧಾನಿ, ಅಧ್ಯಕ್ಷರು ಮುಂತಾದವರನ್ನು ಚುನಾವಣೆಯ ಮೂಲಕ ಆಯ್ಕೆ ಮಾಡಬಹುದು ಅಥವಾ ಬದಲಾಯಿಸಬಹುದೇ ವಿನಃ ಆ ಪ್ರಕ್ರಿಯೆಯಿಂದಲೇ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಗಳನ್ನು ಜಾರಿಗೆ ತರಲು ಸಾಧ್ಯವಾಗುತ್ತಿಲ್ಲ. ಬುಷ್ ಆದರೂ ಬರಲಿ ಕೆರ್ರಿಯಾದರೂ ಬರಲಿ ಅಮೆರಿಕದ ಸಾಮ್ರಾಜ್ಯ ದಾಹ, ವಿಶ್ವದ ಯಜಮಾನನಾಗುವ ದುಸ್ಸಾಹಸದ ಪ್ರವೃತ್ತಿಯೇನೂ ಬದಲಾಗುವುದಿಲ್ಲ. ಬ್ರಿಟನ್‌ನಲ್ಲಿ ಕಾರ್ಮಿಕರ ಪಕ್ಷದ ಪ್ರತಿನಿಧಿಯೆಂದು ಹೇಳಿಕೊಂಡು ಬಂದ ಬ್ಲೇರ್, ಮಾರ್ಗರೆಟ್ ಥ್ಯಾಚರ್‌ಅನ್ನು ನಾಚಿಸುವ ರೀತಿಯಲ್ಲಿ ಆಂತರಿಕ ಹಾಗೂ ವಿದೇಶಾಂಗ ನೀತಿಗಳನ್ನು ಅನುಸರಿಸಿದ್ದಾನೆ. ಆರ್ಥಿಕ ಸುಧಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣದ ಅಧ್ವರ್ಯು ಮನಮೋಹನರನ್ನು ನಾಚಿಸುವಷ್ಟು ಪರಿಣಾಮಕಾರಿಯಾಗಿ ಅದೇ ನೀತಿಗಳನ್ನು ವಾಜಪೇಯಿ ಕಾರ್ಯಗತಗೊಳಿಸಿದರೆ, ಈಗ ಪುನಃ ಅದೇ ಮನ ಮೋಹನರು ಅಧಿಕಾರದ ಚುಕ್ಕಾಣಿ ಹಿಡಿದಿದ್ದಾರೆ. ಮೂಲಭೂತ ಬದಲಾವಣೆ ಆಗಬೇಕಾದರೆ, ಒಂದು ವೇಳೆ ಸಂವಿಧಾನದ ತಿದ್ದುಪಡಿಯೇ ಆಗಬೇಕೆಂದರೆ, ಜನಪ್ರತಿನಿಧಿ ಸಭೆಗಳು ಅದರ ಚುನಾಯಿತ ಪ್ರತಿನಿಧಿಗಳು ಸಂವಿಧಾನದ ವಿಧಿಗಳತ್ತ ಬೊಟ್ಟು ಮಾಡುತ್ತ ನ್ಯಾಯಾಧೀಶರ ಮೇಲೆ ಎಲ್ಲ ಪರಿವರ್ತನೆಯ ಹೊಣೆಯನ್ನು ಹೇರಿ ಗರಬಡಿದವರಂತೆ ಕುಳಿತಿರುವ ಇಂದಿನ ವಾಸ್ತವ ನಮ್ಮ ದೇಶದ್ದು. ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಗೆ ಕಾಯಕ ಮಾಡದೆ, ಒಂದಿಷ್ಟು ರೂಢಮೂಲ ವಿಚಾರಗಳಿಂದ ಕಸಿಯಾಗದೆ ಸಮಸ್ಯೆ ಪರಿಹಾರವಾಗುವುದಿಲ್ಲ. ಅಲ್ಲಿಯವರೆಗೆ ಜನತೆಗೆ ಸಿಕ್ಕುವುದು ಯಾವುದೋ ಎರಡು ಪಕ್ಷಗಳ ಭ್ರಷ್ಟ ರಾಜಕೀಯ, ಒಬ್ಬರ ಮೇಲೆ ಒಬ್ಬರು ರಾಡಿ ಎರಚುವುದು, ಅಧಿಕಾರ ಯಾರಿಗೆ ಎಂಬ ಚರ್ಚೆಯೇ ವಿನಃ ಯಾತಕ್ಕೆ ಎಂಬುದು ಇಲ್ಲವಾಗುತ್ತದೆ.

ಈ ನಿಟ್ಟಿನಲ್ಲಿ ನಮ್ಮ ಮುಂದಿರುವ ಉದಾಹರಣೆಯೆಂದರೆ, ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಭಾಜಪ ಕೋಮುವಾದೀ ಧೋರಣೆಗಳನ್ನು ತೂರಿಸಿ ಇಡಿ ವ್ಯವಸ್ಥೆಯನ್ನು ಬುಡಮೇಲು ಮಾಡಿರುವುದು ಈಗಾಗಲೇ ವ್ಯಾಪಕ ಚರ್ಚೆಗೆ ಅವಕಾಶ ಮಾಡಿಕೊಟ್ಟಿದೆ. ಆದರೆ ಭಾಜಪ ಅಧಿಕಾರಕ್ಕೆ ಬರುವುದಕ್ಕೆ ಮುಂಚೆಯೂ ಯಾವ ಯಾವ ಅಧಿಕಾರಿ ಶಿಕ್ಷಣ, ವಿದೇಶಾಂಗ ಅಥವಾ ಸಂಸ್ಕೃತಿ ಇಲಾಖೆ ಮುಂತಾದ ಕ್ಷೇತ್ರಗಳನ್ನು ನಿಯಂತ್ರಿಸುವನೋ, ಅವನವನ ವೈಯಕ್ತಿಕ ಒಲವುಗಳು ಇವುಗಳ ಮೇಲೆ ಪರಿಣಾಮ ಬೀರಿ ಕೋಮುವಾದದ ನೆಲೆ, ಇತಿಹಾಸದ ವಿಕೃತೀಕರಣ ಆಗಾಗ್ಗೆ ತಲೆಹಾಕಿದ್ದುಂಟು. ೧೯೭೭ರಷ್ಟು ಹಿಂದೆಯೇ ಅಂದಿನ ಜನಸಂಘದ ಮಂತ್ರಿಗಳು ಸಮಾಚಾರ ಮತ್ತು ವಾರ್ತಾ ಇಲಾಖೆ ಹಾಗೂ ಶಿಕ್ಷಣ ಇಲಾಖೆ ಮತ್ತು ಸ್ವಲ್ಪಮಟ್ಟಿಗೆ ವಿದೇಶಾಂಗ ಇಲಾಖೆಗಳಿಗೂ ಲಗ್ಗೆ ಹಾಕಿ ತಮ್ಮದೇ ಧೋರಣೆಗಳನ್ನು ಕಾರ್ಯರೂಪಕ್ಕೆ ತರಲು ಸಮರ್ಥರಾದ ಅಧಿಕಾರಿಗಳನ್ನು ನಿಯಮಿಸಿ, ಸಾಂಸ್ಥಿಕ ರಚನೆಗಳನ್ನು ಸ್ಥಾಪಿಸಿದ್ದುಂಟು. ಆದರೆ ನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಸರ್ಕಾರವಾಗಲೀ, ಸಂಯುಕ್ತರಂಗ ಸರ್ಕಾರಗಳಾಗಲೀ ಒಂದೆರಡು ಸಣ್ಣ ಕಟಕಿ ಮಾತುಗಳನ್ನು ಆಡುವುದು ಬಿಟ್ಟರೆ, ರೂಢಮೂಲವಾಗಿ ಕೋಮುವಾದವನ್ನು ಕಿತ್ತೊಗೆಯುವ ಕೆಲಸವನ್ನೇನೂ ಮಾಡಲಿಲ್ಲ. ಬಹುಶಃ ಅವರಿಗೂ ಈ ಹಿಂದೂ ರಾಷ್ಟ್ರೀಯತೆ ಬಣ್ಣ ಬಳಿದ ಕೋಮುವಾದದ ಬಗ್ಗೆ ಒಳಗೊಳಗೇ ಸಹಮತ ವಿದ್ದಿರಬೇಕು. ಈ ಪ್ರಕ್ರಿಯೆಯಲ್ಲಿ ಅನೇಕ ಕ್ಷೇತ್ರಗಳಲ್ಲಿ ಕೋಮುವಾದವು ಒಳಹೊಕ್ಕು ಸಾಕಷ್ಟು ವರ್ಷಗಳೇ ಕಳೆದಿವೆ. ಈಗ ಅರ್ಜುನಸಿಂಗರು ಅದೆಲ್ಲವನ್ನೂ ಸರಿಪಡಿಸುವುದಾಗಿ ಡಂಗುರ ಸಾರಿದ್ದಾರೆ. ಆದರೆ ಆಗುತ್ತಿರುವುದಾದರೂ ಏನು? ಎನ್‌ಡಿಎ ಸರ್ಕಾರವು ಹಿಂದಿನ ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿದ್ದ ವ್ಯವಸ್ಥೆಯನ್ನು ಕದಡಿದಂತೆಯೇ, ಅರ್ಜುನಸಿಂಗರೂ ಯಾವ ಕಾರಣವನ್ನೂ ನೀಡದೆ, ಹಲವು ಬಾರಿ ಕೇವಲ ಜಿದ್ದು ತೀರಿಸಿಕೊಳ್ಳುವವರಂತೆ ವ್ಯಕ್ತಿಗತ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿರುವಂತಿದೆ. ಸರ್ಕಾರದ ನೀತಿ ನಿರೂಪಣೆಗಳನ್ನು ತತ್ವಾಧಾರಿತವಾಗಿ ನಡೆಸುವಾಗಲೂ ಆ ಬಗೆಯ ಕಾರ್ಯಾಚರಣೆಯು ವ್ಯಕ್ತಿಗತ ಅಥವಾ ಮನಸೋ ಇಚ್ಛೆ ಎನ್ನಿಸಿಕೊಳ್ಳುವುದರ ಬದಲು ಅದನ್ನು ಸಾಂಸ್ಥಿಕ, ಮುಕ್ತ, ಪಾರದರ್ಶಕತೆಯ ಆಧಾರದ ಮೇಲೆ ಜರುಗುವಂತೆ ಮಾಡುವುದು ಮತ್ತು ಆ ಮೂಲಕ ಒಂದು ಸುಭದ್ರ ವ್ಯವಸ್ಥೆಯನ್ನು ಸ್ಥಾಪಿಸುವುದು ಅಗತ್ಯವಾಗಿದೆ. ಭಾಜಪ ಅಧಿಕಾರಕ್ಕೆ ಬಂದಾಗಲೂ ಅಂಥ ವ್ಯವಸ್ಥೆಯನ್ನು ಮತ್ತೊಮ್ಮೆ ಕಿತ್ತೊಗೆಯುವುದೇನೂ ಸುಲಭವಾಗುವುದಿಲ್ಲ. ಇಲ್ಲದಿದ್ದರೆ ಅರ್ಜುನಸಿಂಗರಿಗೂ, ಮುರಳೀಮನೋಹರ ಜೋಶಿಯವರಿಗೂ ಕಾರ್ಯವೈಖರಿಯಲ್ಲಿ ಏನೂ ವ್ಯತ್ಯಾಸವಿಲ್ಲದೆ ಹೋಗುತ್ತದೆ. ಅಂಥ

೩೦ನೇ ಪುಟಕ್ಕೆ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೬೮೭

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೫೦೨




**ಅಕ್ಟೋಬರ್ ಸಂಚಿಕೆ**

ಅಕ್ಟೋಬರ್ ೨೦೦೪ರ ಪತ್ರಿಕೆ ಚೆನ್ನಾಗಿದೆ, ಓದಬೇಕೆನಿಸುತ್ತದೆ. ವಿಚಾರಾತ್ಮಕ ಲೇಖನಗಳು, ಸ್ವಾರಸ್ಯಕರ ಕಥೆಗಳು, ಜಾಗೃತಿ ಹಾಗೂ ಅರಿವು ಮೂಡಿಸುವಂತಹ ಲೇಖನಗಳು ಹಾಗೂ ಹನಿ, ಮಿನಿ, ಕವನಗಳಿಂದ ಕೂಡಿದೆ. ನಾಡಿನ ಹೆಸರಾಂತ ಲೇಖಕರ, ಕವಿಗಳ, ಸಾಹಿತಿಗಳ, ಲೇಖನಗಳ ಕೊನೆಯಲ್ಲಿ ಅವರ ವಿಳಾಸ ಕಾಣಿಸಿರುವುದು ಎಲ್ಲರೂ ಮೆಚ್ಚುವಂತಹದ್ದು.

ಲಕ್ಷ್ಮೇಶ್ವರ **ಬಸವರಾಜ ಶಿ. ಬಾಳೇಶ್ವರಮಠ**

**ಅತ್ಯುತ್ತಮ ವೈಚಾರಿಕ ಲೇಖನ**

ವಿಶ್ವಾರಾಧ್ಯ ಸತ್ಯಂಪೇಟೆ ಅವರ 'ವಾಸ್ತು ಎಂಬ ಅವಾಸ್ತವಿಕ ಭೂತ!' ಲೇಖನ ಓದಿ ನನ್ನ ಮನಸ್ಸಿನಲ್ಲಿ ಹೊಂಚು ಹಾಕುತ್ತಿದ್ದ ಗೊಂದಲಗಳನ್ನು ಗಾಳಿಗೆ ತೂರಿಬಿಟ್ಟೆ. ಇತ್ತೀಚೆಗೆ ನಾನೊಂದು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೆ. ಅಲ್ಲಿ ೨-೩ ಮಂದಿ ಪ್ರಖ್ಯಾತರೆಂದು ಹೇಳಿಕೊಂಡ ವಾಸ್ತು ಶಾಸ್ತ್ರಜ್ಞರು, ಮುಖ್ಯ ಅತಿಥಿಗಳು ಬಂದಿದ್ದರು. ೫೦೦-೬೦೦ ಜನ ಅಲ್ಲಿ ನೆರೆದಿದ್ದು ವಾಸ್ತು ಶಾಸ್ತ್ರಜ್ಞರ ಭಾಷಣ, ನಂಬಿಕೆ ಹುಟ್ಟಿಸುವಂಥ ಮಾತುಗಳನ್ನು ಕೇಳಿ ಅವರ ವಿಳಾಸ, ದೂರವಾಣಿ ನಂಬರ್‌ಗಳನ್ನು ಎಲ್ಲರೂ ಖುದ್ದಾಗಿ ಪಡೆದು ಕೊಂಡರು. ಈ ಬಗ್ಗೆ ನಂಬಿಕೆ ಇಲ್ಲದ ನನಗೆ ಜನರ ಮರುಳುತನ ನೋಡಿ ಗೊಂದಲ ಉಂಟಾಯಿತು. ಶ್ರೀಯುತರ ಲೇಖನ ನನ್ನ ವೈಚಾರಿಕ ಪ್ರಜ್ಞೆಗೆ ಸಂಪೂರ್ಣ ಇಂಬು ನೀಡಿದೆ.

ಚಿಕ್ಕಮಗಳೂರು **ಜಗದೀಶ್ ಭಕ್ತನಕಟ್ಟೆ**

ಕಾಲದ ಒಡಲಿನಲ್ಲಿ ಹುಟ್ಟಿಕೊಂಡ ಸಾಹಿತ್ಯ ಮತ್ತು ಐತಿಹಾಸಿಕ ಘಟನೆಗಳು ಇವುಗಳ ಹಿನ್ನೆಲೆಯಲ್ಲಿ ಹೈದರಾಬಾದು ಕರ್ನಾಟಕದ ಚಿತ್ರಣ, ಕವಿ ಅಂದಂದಿನ ಕಾಲಕ್ಕನುಗುಣವಾಗಿ ಸಮಾಜದ ಕೂಸಾಗಿ ತಾನು ಪ್ರಭಾವಿತನಾದ ಹಿನ್ನೆಲೆಯಲ್ಲಿ ಸಾಹಿತ್ಯದ ಸೃಷ್ಟಿಗೆ ಕಾರಣವಾಗುತ್ತಾನೆ ಎನ್ನುವ ಅಂಶವು ಸಾಹಿತ್ಯಕ್ಕೂ ಹಾಗೂ ಚರಿತ್ರೆಗೂ ಇರುವ ಒಳಸಂಬಂಧದ ಬಗೆಗಿನ ವಿಚಾರಗಳು ಸ್ವಾಗತಾರ್ಹವಾಗಿವೆ. ಈ ಹಿನ್ನೆಲೆಯಲ್ಲಿ ಡಾ॥ ಅಮರೇಶ ನುಗಡೋಣಿಯವರ ಲೇಖನ ಚೆನ್ನಾಗಿ ಮೂಡಿಬಂದಿದೆ.

ರಾಯಚೂರು **ಗೋವರ್ಧನರೆಡ್ಡಿ ದಿನ್ನಿ**

ಅಕ್ಟೋಬರ್ ಸಂಚಿಕೆಯ ಜಯ ಯಾಜಿ ಅವರ 'ಮತ್ತೆ ಬಂದೀತೆ ಆ ದಿನಗಳು' ಚೆನ್ನಾಗಿದೆ. ಕತೆ ಹೆಣೆಯುವುದರಲ್ಲಿ ಜಯ ಸಿದ್ಧಹಸ್ತರು ಎನ್ನುವಂತೆ ಇದೆ. ಖಂಡಿತಾ ಆ ದಿನಗಳು ನಮಗೆ ಮತ್ತೆ ಬಾರದು. ಗುಬ್ಬಿಗಳಂತೂ ಬಹಳಷ್ಟು ಮಟ್ಟಿಗೆ ನಗರಗಳಿಂದ ಗಡಿ ಪಾರಾದಂತೆ ಆಗಿದೆ. ಮುದ್ದು ಹಕ್ಕಿಗಳ ಕಣ್ಮರೆಗೆ ನಾವೇ ಕಾರಣರು. ಹೆಂಚಿನ ಮನೆಗಳು ಇಲ್ಲವಾದುದು, ಮನೆ ಗೋಡೆಗೆ ನೇತು ಹಾಕುವ ಫೋಟೋಗಳು ನಾಪತ್ತೆಯಾದುದ್ದು, ಕಾಂಕ್ರೀಟ್ ಕಾಡಿನ ಬೆಳವಣಿಗೆ ಹಕ್ಕಿಗಳಿಗೆ ಕಾಳೇ ಸಿಕ್ಕದಂತಹ ವಾತಾವರಣ ಎಲ್ಲಿಯೂ ಗುಬ್ಬಿ ಕಾಣದಂತಾಗಲು ಕಾರಣವಾಗಿವೆ. ಜಯ ಅವರಿಗೆ, ಪ್ರಕಟಿಸಿದ ನಿಮಗೆ ಧನ್ಯವಾದಗಳು.

ಮೈಸೂರು **ಕೊ. ಸು. ನರಸಿಂಹಮೂರ್ತಿ**




ಕೆ. ಎಸ್. ಪಾರ್ಥಸಾರಥಿ ಅವರ 'ಗಾಂಧಿ ವಾದದಲ್ಲಿ ಅಹಿಂಸೆಯ ಕಲ್ಪನೆ' ಉತ್ತಮ ಲೇಖನ ವಾಗಿತ್ತು. 'ಅಹಿಂಸೆ' ಎಂಬ ಪದವು ಎಲ್ಲವನ್ನೂ ಎಲ್ಲರನ್ನೂ ಗೆಲ್ಲುವ 'ಮಂತ್ರ'ವಾಗಿದೆ. ಅಹಿಂಸೆಯ ಮಹತ್ವವನ್ನು ತಿಳಿಸುವ ಈ ಲೇಖನ ಇಂದಿನ ಚರ್ಚೆಗಳಿಗೆ ಉಪಯುಕ್ತವಾಗಿದೆ. ಸ. ರಘುನಾಥ ಅವರ 'ಯಾಕಪ್ಪ' ಕತೆ ಉತ್ತಮವಾಗಿತ್ತು. ಛಲದಿಂದ ಶಾಲೆಗೆ ಹೋಗುವ ಕೃಷ್ಣನ ಹಠ ಮೆಚ್ಚುವಂಥದ್ದು. ಇದೊಂದು ಉತ್ತಮ ಕತೆ. ಡಾ॥ ರಹಮತ್ ತರೀಕೆರೆ ಅವರ 'ಮತ್ತೊಬ್ಬ ಗುರುವಿನ ನಿರ್ಗಮನ' ಓದಿ ತುಂಬಾ ದುಃಖವಾಯಿತು. ಸಾಹಿತಿ ಪುಣೇಕರ ಅವರ ಕುರಿತ ಬರಹ ನಿಜಕ್ಕೂ ಅರ್ಥಪೂರ್ಣವಾಗಿದೆ. ಪುಣೇಕರ ಅವರಿಗೆ ನೀಡಿದ ಒಂದು ಶ್ರದ್ಧಾಂಜಲಿಯ ರೂಪದಲ್ಲಿದೆ. ಅರುಣ ಜೋಳದ ಕೂಡ್ಲಗಿ ಅವರ 'ಬರದ ಹನಿಗಳು' ಚೆನ್ನಾಗಿತ್ತು.

ಶಿವಮೊಗ್ಗ **ಪಿ. ಗೋವಿಂದರಾಜ್**

ವಿಚಾರಗಳು ವಿವಾದಗಳು ಸಮಸ್ಯೆಗಳು ಅಮಾನುಷ ಕೃತ್ಯಗಳು ಮೂಢನಂಬಿಕೆಗಳು ಹಾಗೂ ಹುಂಬತನಗಳು ಕಾಲಕಾಲಕ್ಕೆ ವೃದ್ಧಿಸಿ ಮರೆಯಾಗುತ್ತಿದ್ದರೂ ಅವುಗಳ ಸತ್ಯಾಸತ್ಯತೆಯ ಅರಿವನ್ನು ಮೂಡಿಸುವ ಕಾರ್ಯದಲ್ಲಿ ಪತ್ರಿಕೆಗಳ ಪಾತ್ರ ಅತ್ಯಂತ ಶ್ರೇಷ್ಠ ಹಾಗೂ ಪವಿತ್ರವಾದುದು ಎಂಬುದನ್ನು ನಿರೂಪಿಸಿರುವ 'ಹೊಸತು' ಸಂಚಿಕೆ ಇದಾಗಿದೆ. ರಾಜಕಾರಣಿಗಳ ಮೂರ್ಖತನದ ಪರಮಾವಧಿಯಿಂದ ಉಂಟಾಗಿರುವ ಗಿಡ ಮತ್ತು ಜಲ ವಿವಾದಗಳು ಗಾಂಧೀಜಿ ಚಿಂತನೆಗಳು ನೇಪಥ್ಯಕ್ಕೆ ಸೇರುತ್ತಿರುವಾಗ ನಮ್ಮನ್ನು ಚಿಂತನೆಗೆ ಹಚ್ಚಿದೆ. ಗಾಂಧಿ ಮತ್ತು ಅಹಿಂಸೆಗಳ ಚಿಂತನೆ, ವಾಸ್ತು ಕುರಿತ ಲೇಖನ ಪರಿಣಾಮಕಾರಿ ಯಾಗಿವೆ. ಗಾಂಧಿ ನಾಡಿನ ಹಿಂಸಾಚಾರದ ಹಾಗೂ ಅಟ್ಟಹಾಸದ ಸತ್ಯಸಂಗತಿಗಳ ಗೋಧ್ರಾ ವಿಚಾರ ಮತ್ತು ಖಗೋಳದ ಭಾಗವಾದರೂ ಅರಿವಿಲ್ಲದಂತಿರುವ ಆಕಾಶದ ಪರಿಚಯ ಎಲ್ಲವನ್ನೂ ಅತ್ಯಂತ ಸಮರ್ಪಕ ರೀತಿಯಲ್ಲಿ ಓದುಗರ ಮನಮುಟ್ಟಿಸುವುದರಲ್ಲಿ ಅತ್ಯಂತ ಯಶಸ್ವಿಯಾಗಿದೆ.

ಬೆಂಗಳೂರು **ನರೇಂದ್ರ ಸಿರಕಜೆ**

'ಯಾಕಪ್ಪ' ಕತೆಯನ್ನು ಓದಿ ತುಂಬಾ ಸಂತೋಷವಾಯಿತು. ಈ ಕಥೆಯಲ್ಲಿ ಬರುವ ಕೃಷ್ಣನ ಓದಿನ ಅಭಿಲಾಷೆಯನ್ನು ಪ್ರತಿಯೊಬ್ಬ ವಿದ್ಯಾರ್ಥಿಯೂ ಗ್ರಹಿಸಲೇಬೇಕು. ಬಡತನದ ಬೇಗೆಯಲ್ಲಿ ಬೇಯುತ್ತಿದ್ದರೂ 'ಓದು' ಎನ್ನುವ ಪಯಣದಲ್ಲಿ ತನ್ನದೇ ಆದ ಜೀವನ ಶೈಲಿಯಲ್ಲಿ ಬದುಕಬೇಕೆಂಬ ಆಸೆ ಮೆಚ್ಚುವಂಥಾದ್ದು. ಇದು ಎಲ್ಲ ತಂದೆ ತಾಯಿಯರು ತಮ್ಮ ಮಕ್ಕಳ ಅಭಿಲಾಷೆಗೆ ಸ್ಫೂರ್ತಿ ನೀಡುವ ಬರವಣಿಗೆಯಾಗಿದೆ. ಈ ಕಥೆಯ ಮೂಲಲೇಖಕರಿಗೂ ಹಾಗೂ ಅನುವಾದಕರಿಗೂ ನನ್ನ ಧನ್ಯವಾದಗಳು.

ಹುಣಶ್ಯಾಳ **ಎಸ್. ಎಸ್. ತೋಟದ**

**ಸೆಪ್ಟೆಂಬರ್ ಸಂಚಿಕೆ**

ಶ್ರೀ ಶಂಕರಯ್ಯಾ ಆರ್. ಘಂಟಿ ಅವರ 'ಬೀದಿರಂಗ-ಬದ್ದನಟ' ಲೇಖನ ತುಂಬಾ ಚೆನ್ನಾಗಿತ್ತು. ಲೇಖಕರಿಗೆ ಧನ್ಯವಾದಗಳು. ಇದೇ ರೀತಿ ಹೊಸ ಹೊಸ ಲೇಖನಗಳು ಮೂಡಿ ಬರಲೆಂದು ಹಾರೈಸುವೆ.

ಹುಣಶ್ಯಾಳ **ಎಸ್. ಎಮ್. ತೋಟದ**

ಡಾ॥ ಬಿ. ಎಸ್. ಶೈಲಜಾ ಅವರ 'ಮಂಗಳೂರಿನ ಇಲಿಗಳು ಮತ್ತು ಕೋಸಯ್ಯನ ಕುಟುಂಬ' ವಿಭಿನ್ನ ರೀತಿಯ ಬರಹವಾಗಿದೆ. ಓದಿ ಖುಷಿ ಆಯ್ತು. ಇಲಿಗಳ ಕಾಟದಿಂದ ಕೋಸಯ್ಯನ ಕುಟುಂಬ ಹೇಗೆ ಅಭಿವೃದ್ಧಿ ಹೊಂದಿತು ಎಂಬ ನಿರೂಪಣೆ ಇಷ್ಟವಾಯ್ತು. ರಾಮಚಂದ್ರ ಭಾವೆ ಅವರ 'ದೇವರು' ಚಿಂತನೆಗೆ ಸಾಮಗ್ರಿ ಒದಗಿಸಿತು. ಹಲವರ ಕಲ್ಪನೆಯ 'ದೇವರು' ಎಂದರೆ ಯಾರು ಎಂಬ ಪ್ರಶ್ನೆಗೆ ಈ ಲೇಖನ ಉತ್ತರದಂತಿತ್ತು. ಎನ್. ಗೀತಾ ಅವರ 'ಸ್ತ್ರೀವಾದಿ ನೆಲೆ ಯೊಂದರ ಅನಾವರಣ' ತುಂಬಾ ಉಪಯುಕ್ತವಾಗಿದೆ. ಅಲ್ಲದೆ ಸ್ತ್ರೀಯ ವಿವಿಧ ಮುಖಗಳ ಪರಿಚಯ, ಸ್ತ್ರೀಯ ಹಕ್ಕುಗಳ ಕುರಿತ ಚರ್ಚೆ, ಉತ್ತಮ ಮಟ್ಟದ್ದಾಗಿದೆ. ಸ್ತ್ರೀ ಶಕ್ತಿದೇವತೆ, ಈಗ ವಿವಿಧ ರಂಗಗಳಲ್ಲಿ ಸ್ತ್ರೀಯರದೇ ಮೇಲುಗೈ. 'ಸ್ತ್ರೀ'ಯರ ಕೈಗನ್ನಡಿ ಈ ಲೇಖನವಾಗಿದೆ. ಡಾ॥ ಎನ್. ಎಸ್. ಲೀಲಾ ಅವರ 'ಜಿರಳೆ ಮಹಾ ತರಳೆ' ಓದಿ ಜಿರಳೆಯ ಬಗ್ಗೆ ತಿಳಿಯಿತು. ಜಿರಳೆ ಎಂದರೆ

ಬಹಳ ಅಲರ್ಜಿ ಆಗುತ್ತದೆ. ಜಿರಳೆಗೂ ಕೂಡ ಒಂದು ಸ್ಥಾನಮಾನವಿದೆ ಎಂದೂ ಬರಹ ಓದಿ ತಿಳಿಯಿತು. ಉತ್ತಮ ಕವನ-ಕತೆ ಸಮಕಾಲೀನ ಬರಹಗಳನ್ನು ಹೊತ್ತು ತರುವ 'ಹೊಸತು'ಗೆ ಅಭಿನಂದನೆಗಳು.

*ಶಿವಮೊಗ್ಗ* **ಪಿ. ಗೋವಿಂದರಾಜ್**

**'ಬೀದಿರಂಗ ಬದ್ಧನಟ' ಲೇಖನಕ್ಕೆ ಪ್ರತಿಕ್ರಿಯೆ**

ಪ್ರಗತಿಪರ ವಿಶ್ವದ ಸಾಂಸ್ಕೃತಿಕ ರೂವಾರಿ ಮಕ್ಸಿಮ್ ಗೋರ್ಕಿಯವರ ಸಾಹಿತಿಗಳೆ, ಕವಿಗಳೆ, ಕಲಾವಿದರೆ, ವಿಜ್ಞಾನಿಗಳೆ, ಸಮಾಜ ಚಿಂತಕರೆ, ಈಗ ಹೇಳಿ, ಕೋಮುವಾದಿಗಳ ಕೈಯಲ್ಲಿ ಉರಿವ ಕೊಳ್ಳಿಗಳಾಗಿ ದೇಶವನ್ನೇ ಸುಡಬಯಸುತ್ತೀರೋ? ಇಲ್ಲಾ ಬದುಕಿಗಾಗುತ್ತಿರುವ ಅನ್ಯಾಯದ ವಿರುದ್ಧ ಸಿಡಿದೆದ್ದು ಬೀದಿಗಿಳಿದು ಸಮಾಜದ ಬೆಳಕಾಗುತ್ತೀರೋ? ಎನ್ನುವ ಮಾತು ತುಂಬಾ ಪ್ರಸ್ತುತ. ಪ್ರಗತಿಪರ ಕಲಾ ತಂಡಗಳು ಸಿದ್ಧಾಂತ, ಆಚರಣೆ, ಅಹಂಗಳ ತಾಕಲಾಟಗಳಲ್ಲಿ ಅವರ ಕಡು ವೈರಿಗಳು ಬಲಾಢ್ಯರಾಗಲು ಪರೋಕ್ಷವಾಗಿ ತಾವೇ ಕಾರಣರಾಗಿಬಿಡುತ್ತಾರೆ. ಇದಕ್ಕೆ ಅವೇ ಹೊಣೆಗಾರರಾಗ ಬೇಕಾಗುತ್ತದೆ.

ಶ್ರೀ ಶಂಕರಯ್ಯಾ ಘಂಟಿಯವರು ತಮ್ಮ ಲೇಖನ ದಲ್ಲಿ ನಟನ ನಿಷ್ಠೆ, ಬದ್ಧತೆ, ಅನಿವಾರ್ಯತೆಗಳ ಬಗ್ಗೆ ತಿಳಿಸಿದ್ದಾರೆ. ಆದರೆ, ಒಂದು ಪ್ರಗತಿಪರ ತಂಡವು ಸಾಂಸ್ಕೃತಿಕ ಉತ್ಸವ ಹಮ್ಮಿಕೊಂಡಾಗ ನಾಮಾಂಕಿತ ತಂಡಗಳು ಅದರಲ್ಲಿ ಭಾಗವಹಿಸುವ ಔದಾರ್ಯವನ್ನು ಕಳೆದುಕೊಂಡು ಬೀದಿ ನಾಟಕಗಳ ಮೂಲ ಆಶಯವನ್ನೇ ಮರೆತರೆ ಕೋಮುವಾದಿಗಳ ಹಾದಿ ಸುಗಮವಾಗುವುದಿಲ್ಲವೆ? ಆಸೆ, ಆಮಿಷಗಳು ಕಲಾವಿದರನ್ನು ದಿನೇ ದಿನೇ ದಿಕ್ಕು ತಪ್ಪಿಸಿ ಅವರು ಬಲ ಪಂಥೀಯ ಚಟುವಟಿಕೆಗಳಲ್ಲಿ ತಮ್ಮ ಅರಿವಿಲ್ಲದೆಯೇ ಭಾಗಿಗಳಾಗುವಂತಾಗಲು ಕಾರಣವಾಗಿದೆ. ಅಂತಹ ಕಲಾವಿದರೆಲ್ಲರಿಗೂ ಹಾಳು ಹದಗೆಡುತ್ತಿರುವ ಈ ವ್ಯವಸ್ಥೆಯ ವಿರುದ್ಧ ಸಿಡಿದೇಳುವಂತೆ ಒಂದುಗೂಡಿಸುವ ನಿಟ್ಟಿನಲ್ಲಿ ಎಲ್ಲಾ ಸಮಾನಮನಸ್ಕರೂ ಸೇರಿ ವಿಶಾಲ ತಳಹದಿಯ ಆಧಾರದ ಮೇಲೆ ಕ್ರಾಂತಿಕಾರಿ ಸಾಂಸ್ಕೃತಿಕ ಚಳುವಳಿಯನ್ನು ರೂಪಿಸುವುದು ಈ ಗಳಿಗೆಯ ಅನಿವಾರ್ಯತೆಯಾಗಿದೆ.

*ಬೆಂಗಳೂರು* **ವೀರೇಶ್ ಬಳ್ಳಾರಿ**

**ದೇವರು**

ರಾಮಚಂದ್ರ ಭಾವೆ ಅವರು 'ದೇವರು' ಕುರಿತ ತಮ್ಮ ಹಲವಾರು ವಿಚಾರಗಳನ್ನು ಮನೋಜ್ಞವಾಗಿ ಪ್ರತಿಬಿಂಬಿಸಿದ್ದಾರೆ. ದೇವರ ಬಗ್ಗೆ ಬಂದ ಕಲ್ಪನೆಗೆ ಬಾಲ ನಿರ್ಮಿಸಿದ ಮಾನವ, ದೇವರ ಮೇಲಿಟ್ಟ ದಟ್ಟ ನಂಬಿಕೆ, ಮೂಢನಂಬಿಕೆ, ನಾಸ್ತಿಕ-ಆಸ್ತಿಕನ ಮಾನಸಿಕ ವೈರುಧ್ಯ ಗಳನ್ನು ದಲಿತ ಹೆಣ್ಣು, ಕವಿ ಮತ್ತು ಭಕ್ತ ಎಂದು ಮೂರು ಸ್ತರಗಳಲ್ಲಿ ಪ್ರಭೇದಿಸಿ, ಕಾಲ್ಪನಿಕ ಮತ್ತು ವೈಚಾರಿಕ ಎರಡೂ ರೀತಿಯ ಮಾನಸಿಕ ಪದರಗಳ ಮೇಲೆ ಬೆಳಕು ಚೆಲ್ಲುವ ಲೇಖಕರ ಪ್ರಯತ್ನ ಮೆಚ್ಚುವಂಥದ್ದೇ.

*ರಾಯಚೂರು* **ಗೋವರ್ಧನರೆಡ್ಡಿ ದಿನ್ನಿ**

**ಆಗಸ್ಟ್ ಸಂಚಿಕೆಯ ಲೇಖನದ ಬಗ್ಗೆ**

ಬ್ರಾಂಡೊ ನನ್ನ ಅತ್ಯಂತ ಮೆಚ್ಚಿನ ನಟ. ತಿರುಪೆ ಬೇಡಿಯೋ, ಕದ್ದೋ ಏನೋ ಹೇಗೋ ಮಾಡಿ ದುಡ್ಡು ಹೊಂದಿಸಿ ಬ್ರಾಂಡೋನ ಚಿತ್ರಗಳನ್ನು ಎಷ್ಟು ಬಾರಿ ಸಾಧ್ಯವೊ ಅಷ್ಟು ಸಾರಿ ನೋಡುತ್ತ ಆ ಮಹಾನ್ ನಟನ ಅನೇಕ (ಅನ್ಯರಿಂದಾಗದ) ಚಲನವಲನೆಗಳು, ಕಣ್ಣುಗಳ ತಿರುವು, ಸಂಭಾಷಣೆಗೆ ಜೀವತುಂಬಿ ಹೇಳುವ ರೀತಿ ಇವೆಲ್ಲವನ್ನೂ ಬೆರಗಿನಿಂದ ನೋಡುತ್ತಿದ್ದೆ. ನನಗೆ ನನ್ನ ಹರೆಯದಲ್ಲಿ ಆದ impacting ಅನುಭವ ಸ್ಮರಣೀಯ. ಈ ಲೇಖನದಲ್ಲಿ ಕಾಣಿಸಿರುವ ಬಹುತೇಕ ಬ್ರಾಂಡೋ ಚಿತ್ರಗಳನ್ನು ಹತ್ತಾರು ಸಾರಿ ನೋಡಿರುವುದರ ಜೊತೆ ಅವನ ಬಗ್ಗೆ ಎಲ್ಲಿ ಎಂಥ ಸಣ್ಣ ಮಾಹಿತಿ ಕಂಡರೂ ಆಸ್ಥೆಯಿಂದ ಓದಿದ್ದೇನೆ – ಅಲ್ಲಲ್ಲ ಅಭ್ಯಸಿಸಿದ್ದೇನೆ.

ನಿಜ, ಅವನ ಬದುಕು ದುರಂತಮಯವಾಗಿತ್ತು. ಅದಕ್ಕೆ ಹೊರಗಿನ ಕಾರಣಗಳಿರುವಂತೆ ತನ್ನಲ್ಲೇ ಇದ್ದ ಆಂತರಿಕ ತುಮುಲಗಳೂ ಕಾರಣವಾಗಿದ್ದವು. ಸಿನಿಮಾರಂಗದೊಳಗಿನ ಸ್ವಾರ್ಥ, ಪ್ರತಿಷ್ಠೆ, ವಂಚನೆ, ಒಳಜಗಳಗಳ ಮೂಲಕ ಬ್ರಾಂಡೊ ಅನುಭವಿಸಿದ ನೋವು ಬೇಸರಗಳನ್ನು ತನ್ನಲ್ಲೇ ನುಂಗಿಕೊಂಡಿದ್ದ; ಹಾಗೆಯೇ, ಸಾಮಾಜಿಕ ರಾಜಕೀಯ ವಾತಾವರಣವೂ ಅವನ ಮೇಲೆ ಅಷ್ಟಿಷ್ಟು ಪ್ರಭಾವ ಬೀರಿತ್ತು. ಅದೆಲ್ಲವನ್ನೂ ತನ್ನದೇ ರೀತಿಯಲ್ಲಿ ತಿಳಿಯುತ್ತ, ಚಿತ್ರರಂಗದಲ್ಲಿ ಮೆರೆಯುತ್ತ ಸಾಮಾಜಿಕ ದೌರ್ಜನ್ಯಗಳ ವಿರುದ್ಧ ಸೆಟೆದು ನಿಲ್ಲುತ್ತ ಒಂದು ವಿಚಿತ್ರ ರೀತಿಯ ಬದುಕನ್ನು ಬಾಳುವ ಅನಿವಾರ್ಯತೆಗೆ ಸಿಲುಕಿದ್ದ.

ಈ ವಿಷಯಗಳನ್ನು ಎರಡು ಪುಟಗಳ ಈ ಚಿಕ್ಕ ಲೇಖನದಲ್ಲಿ ತುಂಬಾ ಚೆನ್ನಾಗಿ ಅಡಕಗೊಳಿಸಿ ಚಿತ್ರಿಸಲಾಗಿದೆ. ಇದು ಬ್ರಾಂಡೋನ ವ್ಯಕ್ತಿತ್ವದ ವಿವಿಧ ಮಗ್ಗುಲುಗಳನ್ನು ಪರಿಚಯಿಸುವ ಒಳ್ಳೆಯ ಪ್ರಯತ್ನ.

ಇಲ್ಲಿ ಮತ್ತೊಂದು ಮಾತು ಹೇಳಬೇಕಾದ್ದು – ಬ್ರಾಂಡೊ 'ನಾಟಕದ ನಟ'ನಾಗಿ, ರಂಗಭೂಮಿಯಲ್ಲಿ ಶಿಕ್ಷಣ ಪಡೆದು, ಪ್ರದರ್ಶನ-ಪ್ರತಿಕ್ರಿಯೆ-ಪರಿಣಾಮಗಳನ್ನು ಬೌದ್ಧಿಕವಾಗಿ ತನ್ನದಾಗಿಸಿಕೊಂಡು ಆ ನಂತರ ಸಿನಿಮಾ ರಂಗಕ್ಕೆ ಹೋದದ್ದು.

ಅವನ ರಂಗಭೂಮಿಯ ಹಿನ್ನೆಲೆಯ ಚಲನಚಿತ್ರಗಳಲ್ಲಿ ತಾನೊಬ್ಬ ಅದ್ಭುತ ನಟ ಎಂಬ ಛಾಪು ಹಾಕುವುದು ಬ್ರಾಂಡೋಗೆ ಸಾಧ್ಯವಾಗಿಸಿತು. ಅದು ನನ್ನ ನಂಬಿಕೆಯೂ ಹೌದು. ಜೀವಂತ ಕಲೆ ಅನ್ನಿಸಿದ ರಂಗಭೂಮಿಯಲ್ಲಿ ಬೆಳಗಿದ ನಕ್ಷತ್ರಗಳೇ ನಿಜವಾದ ಸ್ಟಾರ್ಸ್! ಅವರಿಗೆ ಸಾಧ್ಯವಾಗುವುದು ಚಿತ್ರರಂಗದಲ್ಲಿ ಸ್ವಶಕ್ತಿಯಿಂದ ಚಂದ್ರನ ಹಾಗೆ ಬೆಳಗುವುದು... A moon among the glittering stars.

ಎಸ್. ಸುರೇಂದ್ರ ಅವರ ಈ ಲೇಖನವು ಮಾಹಿತಿಪೂರ್ಣವೂ, ಸ್ವಾರಸ್ಯಕರವೂ ಆಗಿದೆ.

*ಬೆಂಗಳೂರು* **ಎಚ್. ಜಿ. ಸೋಮಶೇಖರರಾವ್**



**ಹೊಸತು**

## ವಿಶೇಷ ಸಂಚಿಕೆ – ಜನವರಿ ೨೦೦೫

ಲೋಕಾಯುಕ್ತರಾದ ನ್ಯಾಯಮೂರ್ತಿ ಶ್ರೀ ವೆಂಕಟಾಚಲ ಅವರು ಆಗಾಗ್ಗೆ ಪತ್ರಿಕೆಗಳಲ್ಲಿ ಸಮಾಚಾರ ಮಾಡುತ್ತಿರುವುದನ್ನು 'ಹೊಸತು' ಓದುಗರಾದ ನೀವು ಗಮನಿಸಿರುತ್ತೀರಿ. ನಮ್ಮ ರಾಜ್ಯದ ಸರ್ಕಾರಿ ವಲಯದ ಭ್ರಷ್ಟಾಚಾರದ ವ್ಯಾಪ್ತಿ ಎಷ್ಟು ಅಗಾಧವಾಗಿದೆಯೆಂದು ಈ ವರದಿಗಳಿಂದ ಹಾಗೂ ಸ್ವಂತದ ಅನುಭವಗಳಿಂದ ತಿಳಿದಿರುತ್ತದೆ. ಖಾಸಗಿ ಕ್ಷೇತ್ರದಲ್ಲೂ ಭ್ರಷ್ಟಾಚಾರವಿಲ್ಲವೆಂದೇನೂ ಇಲ್ಲ. ಹಾಗೆ ನೋಡಿದರೆ ಭ್ರಷ್ಟಾಚಾರವು ಖಾಸಗಿ ವಿಷಯವೇ ಆಗಿದೆ; ಸ್ವಂತದ ಕೆಲಸ ಮಾಡಿಸಿಕೊಳ್ಳುವ ವಿಧಾನವಾಗಿ ಮತ್ತು ಸ್ವಂತದ ಜೇಬು ತುಂಬಿಕೊಳ್ಳುವುದಕ್ಕಾಗಿ. ಈ ನಿಟ್ಟಿನಲ್ಲಿ ಪತ್ರಿಕೆಯ ಜನವರಿ ೨೦೦೫ರ ವಿಶೇಷ ಸಂಚಿಕೆಯಲ್ಲಿ **ಪ್ರಕಟಣೆಗಾಗಿ ಓದುಗರ ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತೇವೆ. ಆಯ್ದ ಕೆಲವು ಪ್ರತಿಕ್ರಿಯೆಗಳನ್ನು ಪ್ರಕಟಿಸುವ ಉದ್ದೇಶವಿದೆ.** ಪ್ರತಿಕ್ರಿಯೆಯು ಕೆಳಗಿನ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿರಬೇಕು, ಮತ್ತು ಅದು ನವೆಂಬರ್ ೨೦ರೊಳಗೆ ನಮ್ಮ ಕೈಸೇರಬೇಕಾದ್ದು ಅಗತ್ಯ. ಪ್ರತಿಕ್ರಿಯೆ ೨೫೦ ಪದಗಳನ್ನು ಮೀರದಂತಿರಲಿ. ನಿಮ್ಮ ಸಹಕಾರಕ್ಕಾಗಿ ಕೃತಜ್ಞತೆ ಸಲ್ಲಿಸುತ್ತೇವೆ. **-ಸಂಪಾದಕರು**

*೧. ಲೋಕಾಯುಕ್ತರು ಸುದ್ದಿ ಮಾಡಿದಾಗ ನಿಮ್ಮ ತಕ್ಷಣದ ಅನಿಸಿಕೆಗಳೇನು?*

*೨. ತಮ್ಮ ಕಾರ್ಯಾಚರಣೆಯು ಫಲಪ್ರದವಾಗಲು ಲೋಕಾಯುಕ್ತರು ಅನುಸರಿಸಬಹುದಾದ ವಿಧಾನಗಳು ಯಾವುವು?*

*೩. ನಿಮ್ಮ ಪ್ರಕಾರ ಭ್ರಷ್ಟಾಚಾರಕ್ಕೆ ಮೂಲಕಾರಣಗಳೇನು ಮತ್ತು ಅದನ್ನು ತಡೆಗಟ್ಟಲು ಜನರು ಏನು ಮಾಡಬಹುದು?*

*೪. ನೀವು ನೀಡುವ ಸಲಹೆಯನ್ನು ಕಾರ್ಯಗತಗೊಳಿಸುವುದರಲ್ಲಿ ಸ್ವತಃ ನೀವು ಹೇಗೆ ಭಾಗಿಗಳಾಗಬಲ್ಲಿರಿ?*

*೫. "ಭ್ರಷ್ಟರನ್ನು ಹಿಡಿದು ಬಡಿಯಿರಿ" ಎಂದು ಒರಿಸ್ಸಾದ ಮಾಜಿ ಮುಖ್ಯಮಂತ್ರಿ ಬಿಜೂ ಪಟ್ನಾಯಕ್ ಹೇಳಿದ್ದರು. (ಆದರೆ ಯಾರೂ ಯಾರನ್ನೂ ಬಡಿಯಲಿಲ್ಲ). ಇಂತಹ ಕ್ರಮಗಳು ಯಾವುವು ಮತ್ತು ಅವು ಪರಿಣಾಮಕಾರಿಯೆ? ಹೇಗೆ?*

*೬. ರಾಜಕಾರಣಿ ಮತ್ತು ರಾಜಕಾರಣಿಯಲ್ಲದ ವ್ಯಕ್ತಿ, ಇಬ್ಬರೂ ಒಬ್ಬರಿಗೊಬ್ಬರು ಆಸರೆಯಾಗಿ ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಾರೆಯೆ? ನಿಮ್ಮ ಉತ್ತರಕ್ಕೆ ಸಮರ್ಥನೆ ಏನು?*

# ಕನ್ನಡ ರಾಷ್ಟ್ರೀಯತೆ ಪರಿಕಲ್ಪನೆ ಇಂದಿನ ಅಗತ್ಯವೇ ?

ಬಿ. ಎಂ. ಪ್ರದೀಪ್ ಕುಮಾರ್

ಇತ್ತೀಚೆಗೆ ಕೇಂದ್ರದಲ್ಲಿ ಅಧಿಕಾರ ಹಿಡಿದ ಯುಪಿಎ ತನ್ನ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಸಂವಿಧಾನ ಗುರುತಿಸಿದ ಎಲ್ಲ ಭಾಷೆಗಳಿಗೂ ರಾಷ್ಟ್ರೀಯ ಭಾಷೆಯ ಸ್ಥಾನಮಾನ ಕೊಡುವುದನ್ನು ಪರಿಶೀಲಿಸಲು ಸಮಿತಿಯೊಂದನ್ನು ರಚಿಸುವ ಆಶ್ವಾಸನೆ ಕೊಟ್ಟಿದೆ. ಜೊತೆಗೆ ತಮಿಳು ಭಾಷೆಗೆ ಕ್ಲಾಸಿಕಲ್ ಭಾಷೆಯ ಸ್ಥಾನಮಾನ ಕೊಡುವ ಬಗೆಗೂ ಆಶ್ವಾಸನೆ ನೀಡಿದೆ. ಇವೆರಡೂ ಸ್ವಾಗತಾರ್ಹವೇ. (ಇದೀಗ ತಮಿಳಿಗೆ ಕ್ಲಾಸಿಕಲ್ ಭಾಷೆಯ ಸ್ಥಾನ ನೀಡಿದ್ದು ಆಗಿದೆ). ತಮಿಳು ಪುರಾತನ ಭಾರತೀಯ ಭಾಷೆಗಳಲ್ಲೊಂದು. ಆದರೆ ಅದರಂತೆ ಇತರ ಪುರಾತನ ಭಾರತೀಯ ಭಾಷೆಗಳೂ ಇರಬಹುದಲ್ಲವೆ ? ನಮ್ಮ 'ಕವಿರಾಜಮಾರ್ಗ' ಇಡೀ ಜಗತ್ತಿನ ಆದಿಸಾಹಿತ್ಯ ಮೀಮಾಂಸೆಗಳಲ್ಲಿ ಒಂದು ಹಾಗೂ ಸಂಸ್ಕೃತ, ಪ್ರಾಕೃತ, ಪಾಳಿ, ಗ್ರೀಕ್, ಲ್ಯಾಟಿನ್, ಚೈನೀಸ್, ಪರ್ಶೋ-ಅರೇಬಿಕ್ ಹೊರತುಪಡಿಸಿದರೆ ಈ ಮಟ್ಟದ ಪ್ರಬುದ್ಧ ಚಿಂತನೆಗಳು ದೊರೆಯುವುದು ತಮಿಳು ಹಾಗೂ ಕನ್ನಡದಲ್ಲಿ ಮಾತ್ರ ಎನ್ನುತ್ತಾರೆ ಡಿ. ಆರ್. ನಾಗರಾಜ್. ಹಾಗಾದರೆ ಕನ್ನಡಕ್ಕೂ ಆ ಸ್ಥಾನ ದಕ್ಕಬಹುದಾಗಿತ್ತಲ್ಲವೆ ? ಅಲ್ಲದೆ, ಈ ಕ್ಲಾಸಿಕಲ್ ಭಾಷೆಯ ಸ್ಥಾನಮಾನ ಕೊಡುವ ಬಗೆಗೆ ಯುಪಿಎ ಮಾನದಂಡವೊಂದನ್ನು ಸೂಚಿಸುವ ಅಗತ್ಯವಿತ್ತು. ಇಲ್ಲವಾದಲ್ಲಿ ಇದು ಕೇವಲ ರಾಜಕೀಯ ಒತ್ತಡದಿಂದ ಆದುದು ಎಂಬ ಆರೋಪದಿಂದ ಯುಪಿಎ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅದೇನೆ ಇರಲಿ, ಸಂವಿಧಾನದ ಎಂಟನೆಯ ಶೆಡ್ಯೂಲ್‌ನಲ್ಲಿರುವ ಎಲ್ಲಾ ಭಾಷೆಗಳಿಗೂ ರಾಷ್ಟ್ರ ಭಾಷೆ ಸ್ಥಾನ ಕೊಡುವ ಆಶ್ವಾಸನೆ ಎನ್‌ಡಿಎ ಅಜೆಂಡಾದಲ್ಲಿಯೂ ಇತ್ತು. ಅದೂ ಸಹ ಈ ಬಗೆಗೆ ಅಧ್ಯಯನಕ್ಕಾಗಿ ಸಮಿತಿಯೊಂದನ್ನು ರಚಿಸುವ ಆಶ್ವಾಸನೆ ಕೊಟ್ಟಿತ್ತು. ಈ ಎಲ್ಲ ಆಶ್ವಾಸನೆಗಳು ಪ್ರಾಮುಖ್ಯತೆ ಪಡೆದುಕೊಳ್ಳುವುದು ಭಾರತೀಯ ಭಾಷೆಗಳ ಬೆಳವಣಿಗೆಯು ನಮ್ಮ ಶಿಕ್ಷಣ ಮತ್ತು ಸಂಸ್ಕೃತಿ ಬೆಳೆಯಲು ಅನಿವಾರ್ಯ ಹಾಗೂ ಜನ ಸಮೂಹದ ಸೃಜನಾತ್ಮಕ ಶಕ್ತಿ ಬಿಡುಗಡೆ ಆಗ ಮಾತ್ರ ಸಾಧ್ಯ ಎಂಬ ತಾತ್ವಿಕ ಹಿನ್ನೆಲೆಯಲ್ಲಿ. ಬುದ್ಧಿಜೀವಿಗಳು ಹಾಗೂ ಜನರ ಮಧ್ಯೆ ಇರುವ ಕಂದರ ಹಿಗ್ಗದಂತೆ ತಡೆಯಲು ಅಗತ್ಯ ಎಂದು ವಾದಿಸಲಾಗಿರುವ ಈ ಜನಭಾಷೆಗಳ ಪರ ನಿಲುವನ್ನು ಚರ್ಚಿಸಲು ಇಂಗ್ಲಿಷ್ ಪತ್ರಿಕೆಗಳಿಗೆ ಹಿಂಜರಿಕೆ ಇರಬಹುದು. ಬಹುಶಃ ತಾವೇ ಮುಂದೆ ಅಪ್ರಸ್ತುತವಾಗುವ ಭಯ ಇದಕ್ಕೆ ಒಂದು ಕಾರಣವಿರಲೂಬಹುದು. ಆದರೆ ಕನ್ನಡದಂತಹ ಪ್ರಾಂತೀಯ ಭಾಷಾ ಪತ್ರಿಕೆಗಳಿಗೆ ಏನಾಗಿದೆ ?

ಈ ಜನಭಾಷೆಗಳ ಪರ ನಿಲುವನ್ನು ಯಾವ ಭಾಷಾದ್ವೇಷವಾಗಲೀ ಒಳ್ಳೆಯದಲ್ಲ ಅಥವಾ ಭಾಷಾ ದುರಭಿಮಾನ ಒಳ್ಳೆಯದಲ್ಲ ಎನ್ನುವ ಮೂಲಕ ತಿರುಚುವ ಪ್ರಯತ್ನವನ್ನೂ ಮಾಡಲಾಗುತ್ತಿದೆ. ನಮಗೆ ಬೇರೆ ಭಾಷೆಗಳು ಜ್ಞಾನಕಿಂಡಿಗಳಾಗಿ ಖಂಡಿತ ಬೇಕು. ಆ ಭಾಷೆಗಳಲ್ಲಿರುವ ಜ್ಞಾನ, ಮೌಲಿಕ ಸಾಹಿತ್ಯ ನಮಗೆ ಬರಬೇಕಿದೆ. ಹಾಗೆಯೇ ನಮ್ಮಲ್ಲಿ ಮೌಲಿಕವಾದುವು ಇತರರಿಗೆ ಹೋಗಬೇಕಾದ ಅಗತ್ಯವೂ ಇದೆ. ಆದರೆ ಮಧ್ಯಮ ವರ್ಗದ ಅಂತರ್ಯದಲ್ಲಿ ಆಳವಾಗಿ ಬೇರೂರಿರುವ ಇಂಗ್ಲಿಷ್ ಬಗೆಗಿನ ಮೋಹ ಹಾಗೂ ನೆಲೆ ಮಾಡಿಕೊಂಡಿರುವ ತಮ್ಮದೇ ಭಾಷೆಯ ಬಗೆಗಿನ ಬೆಳೆಸಿಕೊಂಡಿರುವ ಕೀಳರಿಮೆಗಳು ನಮ್ಮ ಮುಂದಿರುವ ಸವಾಲುಗಳಾಗಿವೆ. ಈ ಬಗೆಗೆ ಕನ್ನಡ ಪರ ನಿಲುವು ತೆಗೆದುಕೊಂಡ ಹಲವು ದಿಗ್ಗಜರು ಆರೋಗ್ಯಕರ ನಿಲುವನ್ನೇ ಪ್ರತಿಪಾದಿಸಿದ್ದಾರೆ. ಕನ್ನಡವನ್ನು ಕಿರಣ ಕೇಂದ್ರ ಕಾಜಾಗಿಸುವ ಆಲೂರರು ಮರಾಠಿ ಗ್ರಂಥಾಲಯವನ್ನು ಉಳಿಸುವ ಪ್ರಯತ್ನ ಮಾಡುತ್ತಾರೆ. ವಾಸ್ತವದಲ್ಲಿ ಕನ್ನಡ ಭಾಷೆಯ ಬಗೆಗಿರುವ ಕಾಳಜಿ ಜಾಗೃತವಾಗಬೇಕಾಗಿರುವುದು ಅನ್ಯ ಭಾಷೆಗಳ, ಭಾಷಿಗರ ದ್ವೇಷದ ಆಧಾರದ ಮೇಲಲ್ಲ. ಬದಲಾಗಿ ನಮ್ಮದೇ ಭಾಷೆಯ ಉಳಿವಿನ ಅಗತ್ಯ ಹಾಗೂ ಅದರ ಅಳಿವಿನ ಪರಿಣಾಮಗಳ ಮನನದಿಂದಾಗಿಯೇ.

**ಕನ್ನಡ ಉಳಿಯಬೇಕಾದ ಅಗತ್ಯವಾದರೂ ಏನು ?**

ಕನ್ನಡದ ಉಳಿವಿನ ಅಗತ್ಯ ಹಾಗೂ ಅಳಿವಿನ ಪರಿಣಾಮಗಳನ್ನು ವಿಭಜಿಸಿ ನೋಡಲು ಸಾಧ್ಯವಾಗುವುದಿಲ್ಲ. ಈ ಕಾರಣಕ್ಕೆ ಪ್ರಶ್ನೆಯನ್ನು ಬೇರೆ ರೀತಿಯಿಂದ ಕೇಳಿಕೊಳ್ಳೋಣ. ನಮ್ಮ ಭಾಷೆಯನ್ನು ಬಿಟ್ಟು ಬೇರೆ ಉತ್ಕೃಷ್ಟ ಭಾಷೆಯನ್ನು ಕಲಿತುಬಿಡೋಣವೇ ? ಸರ್ವಶ್ರೇಷ್ಠ ಭಾಷೆ ಯಾವುದು ? ಇಂಗ್ಲಿಷ್ ಅಲ್ಲದೆ ಬೇರೆ ಯಾವುದಿರಲು ಸಾಧ್ಯ ? ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವ ಭರದಲ್ಲಿ ಇದು ನಿಜವೇ ಎಂದು ಕೇಳಿಕೊಳ್ಳುವ ವ್ಯವಧಾನವೂ ನಮಗಿಲ್ಲ. ಶಿಕ್ಷಣ ತಜ್ಞರು ಹೇಳುವ ಮತ್ತು ಗಾಬರಿ ಹುಟ್ಟಿಸುವ ಪರಿಣಾಮಗಳೆಡೆ ನಮಗೆ ಲಕ್ಷ್ಯವೂ ಇಲ್ಲ. ಅವರು ಹೇಳುತ್ತಿರುವುದು ಸರಳವಾಗಿಯೇ ಇದೆ. ಶಿಕ್ಷಣ ಮಕ್ಕಳ ಬೌದ್ಧಿಕ ಬೆಳವಣಿಗೆಯನ್ನು ನಿರ್ದೇಶಿಸುತ್ತದೆಯಲ್ಲವೆ ? ಇಂತಹ ಶಿಕ್ಷಣ, ಕಲಿಕೆ ಪರಿಸರದ ಅಥವಾ ಸುತ್ತಮುತ್ತಲಿನ ಸಮಾಜದ ಭಾಷೆಗಿಂತ ಭಿನ್ನವಾಗಿದ್ದಲ್ಲಿ ಮಕ್ಕಳ ಅಭಿವ್ಯಕ್ತಿಯ ಶಕ್ತಿಯನ್ನು ಅದು ಕುಂಠಿತಗೊಳಿಸುತ್ತದೆ. ಯಾವ ಇಂಗ್ಲಿಷ್ ಮಾಧ್ಯಮದಲ್ಲಿ ಮಕ್ಕಳು ಕಲಿಯುತ್ತಾರೆಯೋ ಆ ಭಾಷೆಯಲ್ಲಿ ಪರಿಸರದಲ್ಲಿ ಅಭಿವ್ಯಕ್ತಿಸಲು ಅವಕಾಶವಿರುವುದಿಲ್ಲ. ಪರಿಸರದ ಭಾಷೆಯಾದ ಕನ್ನಡದಲ್ಲಿ ಅಭಿವ್ಯಕ್ತಿಸಲು ಅವರಿಗೆ ಅಗತ್ಯ ಸಿದ್ಧತೆ ಇರುವುದಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಮಕ್ಕಳ ಸೃಜನಶೀಲತೆಯನ್ನು ಬೆಳೆಸಬೇಕಾದ ನಮ್ಮ ಶಿಕ್ಷಣ ವಾಸ್ತವದಲ್ಲಿ ಅದನ್ನು ಕುಂಠಿತಗೊಳಿಸುತ್ತದೆ.

ಭಾಷೆಯೊಂದು ನೂರಾರು ಪೀಳಿಗೆಗಳ ಪ್ರಯತ್ನದಿಂದಾಗಿ, ಬಳಕೆಯಿಂದಾಗಿ ಬೆಳೆಯುತ್ತದೆ. ಅದು ಆ ಸಮಾಜದ ಸಂಸ್ಕೃತಿಯ ಭಾಗ. ಮಾನವ ಮಾನವನಾಗುವೆಡೆಯಲ್ಲಿ ಭಾಷೆಯ ಕೊಡುಗೆ ಅನನ್ಯವಾದುದು. ಅದು ಪರಂಪರಾಗತ ಜ್ಞಾನವನ್ನು ಹಿಡಿದಿರಿಸಿ, ಮುಂದುವರಿಸಿಕೊಂಡು ಹೋಗುವ ಒಂದು ಸಾಧನ. ವಾಸ್ತವದಲ್ಲಿ ಅದು ಸಾಧನ ಮಾತ್ರವಲ್ಲ ಸಂಸ್ಕೃತಿಯೊಂದಿಗೆ ಅನನ್ಯವಾಗಿ ಬೆಸೆದುಕೊಂಡಿರುತ್ತದೆ ಸಹ. ಭಾಷೆಯ ಬೆಳವಣಿಗೆ ಮಾನವ ಸಮಾಜದ ಪ್ರಯತ್ನವೂ ಹೌದು. ಇಂತಹ ಭಾಷೆ ಮಾಯವಾದ ಸಂದರ್ಭಗಳು ಇತಿಹಾಸದಲ್ಲಿ ಇಲ್ಲವೆಂದೇನೂ ಅಲ್ಲ. ಅದು ಸಾಧ್ಯವಾಗುವುದು ಆಯಾ ಭಾಷೆಗಳ ಜನರು ತಮ್ಮ ಭಾಷೆ ಕೀಳು ಎಂದು ಭಾವಿಸಿ ಅದನ್ನು ಬಿಟ್ಟು ಬೇರೆ ತಾವು ಉತ್ತಮ ಎಂದು ಭಾವಿಸಿದ ಭಾಷೆಯನ್ನು ರೂಢಿಸಿಕೊಂಡ ಸಂದರ್ಭಗಳೂ ಇವೆ. ಇಂತಹ ಬದಲಾವಣೆ ಸಾರ್ವತ್ರಿಕ ಸಾಮಾಜಿಕ ಕೀಳರಿಮೆಯ ಭಾಗವಾಗಿಯೇ ಬೆಳೆದಾಗ ಮಾತ್ರ ಸಾಧ್ಯವಾಗುತ್ತದೆ. ಈಗಾಗಲೇ ನಮ್ಮ ಸಮಾಜದಲ್ಲಿ ಜಾತಿಯನ್ನೂ ಒಳಗೊಂಡು ಹಲವು ಮೇಲು-ಕೀಳುಗಳಿವೆ. ಅದರೊಂದಿಗೆ ಭಾಷೆಗಳ ಬಗೆಗೂ ಮೇಲು-ಕೀಳುಗಳನ್ನು ಬೆಳೆಸಿಕೊಳ್ಳುವ ಮೂಲಕ ನಾವು ಆಧುನಿಕ ರಾಷ್ಟ್ರವೊಂದನ್ನು ಕಟ್ಟಲು ಅಗತ್ಯವಾಗಿರುವ ಸಮಾನತೆಯ ಮನೋಭಾವದಿಂದ ಇನ್ನಷ್ಟು ದೂರ ಸರಿದಿದ್ದೇವೆ. ಇಂತಹ ಕೀಳರಿಮೆ ಬೆಳೆಸಿಕೊಳ್ಳಲು ಇಂದು ಇಂಗ್ಲಿಷರೇನೂ ನಮ್ಮನ್ನು ಆಳುತ್ತಿಲ್ಲ. ಆದರೇನಾಯಿತು, ಇಂಗ್ಲಿಷ್ ಬಲ್ಲ ದೊಡ್ಡ ಅಧಿಕಾರಶಾಹಿ

> ವಿಶಿಷ್ಟವಾಗುವ (ಕನ್ನಡ ಸಂಸ್ಕೃತಿ) 'ಮೂಲಕ ವಿಶ್ವಾತ್ಮಕವಾಗುವುದು ತುಂಬ ಕಷ್ಟದ ಹಾದಿ. ಆದರೆ, ತಕ್ಷಣದ ಆರೋಗ್ಯಕಾರಿ ರಾಜಕಾರಣದ ದೃಷ್ಟಿಯಿಂದ ಮಾತ್ರವಲ್ಲ, ನಿಜವಾದ ಮಾನವೀಯ ವಿಕಾಸದ ದೃಷ್ಟಿಯಿಂದಲೂ ಕೂಡ ಇದೇ ಸರಿಯಾದ ದಾರಿ.
>
> *– ಡಿ. ಆರ್. ನಾಗರಾಜ್, ಸಾಹಿತ್ಯ ಕಥನ, ಪು ೨೮೯*

ವರ್ಗವನ್ನು ಅವರು ಉಳಿಸಿಹೋದರು. ಆ ವಸಾಹತುಶಾಹಿ ಮನೋಭಾವದಿಂದ ಹೊರಬರದ ಅವರ ವಾರಸುದಾರ ವರ್ಗವೊಂದು ರೂಪುಗೊಂಡಿದೆ. ಅಂತಹವರನ್ನು ಕಂಡೇ ಧಾರ್ಮಿಕ ಶೋಷಣೆ, ಜಾತಿ ಅಸಮಾನತೆಗಳ ಬಗೆಗೆ ಗುಡುಗಬಲ್ಲವರಾಗಿದ್ದ ಕುವೆಂಪು 'ರಕ್ತಕ್ರಾಂತಿಯಿಂದ ನಮಗೆ ಸ್ವಾತಂತ್ರ್ಯ ಬಂದಿದ್ದರೆ ಯಾರ್ಯಾರು ಸ್ಮಶಾನದಲ್ಲಿರಬೇಕಾಗುತ್ತಿತ್ತೋ ಅವರೆಲ್ಲಾ ಈಗ ನಮ್ಮ ಭವಿಷ್ಯದ ಚುಕ್ಕಾಣಿ ಹಿಡಿದು ಕುಳಿತಿದ್ದಾರೆ' ಎಂದು ಕೆರಳುತ್ತಿದ್ದರು.

ಕನ್ನಡದ ಪರ ವಾದಗಳು ಹಲವಾರು. ಕನ್ನಡ ಇಲ್ಲಿನ ಜನಭಾಷೆ , ಅದು ಸಾರ್ವತ್ರಿಕವಾಗಿ ಬಳಕೆಯಾಗಿ ಆಡಳಿತ, ಶಿಕ್ಷಣ ಹಾಗೂ ಜ್ಞಾನ ಭಾಷೆಯಾಗಿ ಬೆಳೆಯುವುದು ಆ ಜನಸಮುದಾಯದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮೇಲ್ಮೆಗೆ ಹಾದಿ ಎಂಬುದು ಮಹತ್ವದ್ದು. ಇಂತಹ ವೈಚಾರಿಕವಾದ ಸ್ಪಷ್ಟ ಕನ್ನಡ ಪರ ವಾದಗಳ ನಡುವೆಯೂ ಇಂಗ್ಲಿಷ್ ಮಾಧ್ಯಮದ ಶಾಲೆಗಳು ಹೆಚ್ಚುತ್ತಿವೆ. ಸಾಪೇಕ್ಷವಾಗಿ ಕನ್ನಡದ ಬಳಕೆ ಕುಗ್ಗುತ್ತಿದೆ. ಇದಕ್ಕೆ ಕಾರಣ ಸಾಮಾನ್ಯಗ್ರಹಿಕೆಯಲ್ಲಿ ಇಂಗ್ಲಿಷ್ ಕಲಿಯದಿದ್ದರೆ 'ಬದುಕು ಜಟಕಾ ಬಂಡಿ' ಓಡುವುದೇ ಇಲ್ಲ. ಫ್ರೆಂಚರು, ಜರ್ಮನರಂತೆ ನಮ್ಮ ಭಾಷೆಯಲ್ಲಿಯೇ ನಾವು ಬದುಕಬಹುದಾಗಿತ್ತು. ಆದರೆ, ನಮ್ಮ ದೇಶದ ಇತಿಹಾಸ ಇಂಗ್ಲಿಷ್ ಅನಿವಾರ್ಯತೆಯನ್ನು ಸೃಷ್ಟಿಸಿದೆ ಎಂಬ ನಿಲುವಿನಲ್ಲಿನ ಗ್ರಹಿಕೆಯ ಪ್ರಕಾರ ಇದೊಂದು ಅಸಹಾಯಕ ಸನ್ನಿವೇಶವಾಗಿದೆ. ಹಲವರು ಇನ್ನೂ ಮುಂದೆ ಹೋಗಿ ಇಂಗ್ಲಿಷ್ ಅನಿವಾರ್ಯವಾದಲ್ಲಿ, ಇನ್ನು ಕನ್ನಡದ ಅಗತ್ಯವಾದರೂ ಏನು ? ಎಂದು ಭಾವಿಸಿದ್ದಾರೆ. ಇಲ್ಲಿನ ವೈಪರೀತ್ಯದ ನಿಲುವು ಕನ್ನಡವನ್ನೂ ಒಳಗೊಂಡು ಎಲ್ಲಾ ಭಾಷೆಗಳೂ ಇಂಗ್ಲಿಷ್‌ಗೆ ಸ್ಥಳ ಬಿಟ್ಟುಕೊಟ್ಟು ಮಾಯವಾಗುತ್ತವೆ ಎನ್ನುವುದು. ಈ ವಾದಕ್ಕೆ ಇಂಗ್ಲಿಷ್ ಪಡೆದ ಪ್ರತಿಷ್ಠೆ, ಅದರಲ್ಲಿ ಲಭ್ಯವಿರುವ ಜ್ಞಾನ, ಕೇಂದ್ರ ಸರಕಾರದ ಶಾಖೆಗಳಲ್ಲಿ ಇಂಗ್ಲಿಷ್ ಬಳಕೆ ಹೀಗೆ ಹಲವು ವಾಸ್ತವತೆಗಳು ಇಂಬು ಕೊಡುತ್ತವೆ. ಇದಕ್ಕೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಕೊಡುಗೆ ಕಡಿಮೆಯೇನಲ್ಲ. ಇಂದಿಗೂ ಇಂಗ್ಲಿಷನ್ನು ಒಂದು ಜ್ಞಾನ ಭಾಷೆಯಾಗಿ, ಆಡಳಿತ ಭಾಷೆಯಾಗಿ ಉಳಿಸಿಕೊಳ್ಳುವ ಮೂಲಕ ಸರಕಾರಗಳು ಈ ವಸಾಹತುಶಾಹಿ ಮನೋಭಾವವನ್ನು ಪೋಷಿಸಿ, ಬೆಳೆಸಿದವು. ಶಿಕ್ಷಣ ಖಾಸಗೀಕರಣದಲ್ಲಿ ಮುಂದಿದ್ದ ಕರ್ನಾಟಕದಲ್ಲಂತೂ ಈ ಭಾಷಾ ಕೀಳರಿಮೆಯನ್ನು ಬಳಸುವ ವ್ಯವಸ್ಥಿತ ಉದ್ಯಮವೊಂದು ಶಿಕ್ಷಣದ ಹೆಸರಿನಲ್ಲಿ ಚಾಲ್ತಿಯಲ್ಲಿದೆ.

ಹಿಂದೆ ಯುರೋಪಿಯನ್ ಇತಿಹಾಸಕಾರರು ಯುರೋಪೇತರ ಸಮಾಜಗಳನ್ನು ತಮ್ಮ ಸಮಾಜದ ಮಾದರಿಯ ಮಾನದಂಡಗಳಿಂದಲೇ ಅಳೆಯುತ್ತಿದ್ದರು. ಇಂದಿನ ಇತಿಹಾಸಕಾರರು ಹಾಗೂ ಮಾನವಶಾಸ್ತ್ರಜ್ಞರು ಆಸಕ್ತಿ ವಹಿಸಿದ್ದಾರೆ. ಭಾಷೆ ಹಾಗೂ ಚಿಂತನೆಗಳನ್ನು ಬಿಡಿಸಿನೋಡಲು ಪ್ರಯತ್ನಿಸುವುದರ ಬಗೆಗೆ ಭಾಷಾಶಾಸ್ತ್ರಜ್ಞರು ಸಂಸ್ಕೃತಿಯನ್ನು ಒಂದು ಸಾಮಾಜಿಕ ಅಧ್ಯಯನದ ಘಟಕವಾಗಿ ಸ್ವೀಕರಿಸಿದ್ದಾರೆ. ಸಂಸ್ಕೃತಿಗಳನ್ನು ಮೇಲು-ಕೀಳು ಎಂದು ವಿಭಜಿಸುವ ಬದಲು ಆ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಆ ಸಮಾಜ ಏಕೆ, ಹೇಗೆ ಪಡೆಯಿತು ಎಂಬುದರ ಬಗೆಗೆ ಅವರ ಆಸಕ್ತಿ. ಭಾಷೆ ಹಾಗೂ ಸಂಸ್ಕೃತಿಗಳು ಒಂದಕ್ಕೊಂದು ಅನನ್ಯವಾಗಿ ಬೆಸೆದುಕೊಂಡ ಬಗೆಗೂ ಭಾಷಾಶಾಸ್ತ್ರಜ್ಞರು ಆಸಕ್ತಿ ವಹಿಸಿದ್ದಾರೆ. ಭಾಷೆ ಹಾಗೂ ಚಿಂತನೆಗಳನ್ನು ಬಿಡಿಸಿ ನೋಡಲು ಪ್ರಯತ್ನಿಸುವುದರ ಬಗೆಗೆ ಭಾಷಾಶಾಸ್ತ್ರಜ್ಞರು ಚರ್ಚಿಸುತ್ತಾ 'ಶಬ್ದ ಅಭಿವ್ಯಕ್ತಿ ವಿಶೇಷ ರೀತಿಯಲ್ಲಿ ಚಿಂತನೆಗೆ ತಟಸ್ಥ' ಎಂದು ತೋರಿಸಿಕೊಡುವುದು ಸಾಧ್ಯವಾಗುತ್ತಿಲ್ಲ ಎನ್ನುತ್ತಾರೆ. ಶಿಶು ಹುಟ್ಟಿನಿಂದಲೇ ಭಾಷೆಯೊಂದರ ಪ್ರಭಾವಕ್ಕೆ ಒಳಗಾಗುತ್ತದೆ. ಪ್ರಾರಂಭದಲ್ಲಿ ಕಲಿಯುವ ಭಾಷೆ, ಉಚ್ಚಾರಣೆಗಳಿಗೆ ತನ್ನದೇ ಆದ ಮುದ್ರೆಯನ್ನು ಒತ್ತುತ್ತದೆ. ಹಲವು ಕಲ್ಪನೆಗಳು ಭಾಷೆಯೊಂದಿಗೆ ಅಷ್ಟೇ ಅಲ್ಲ ಸಂಸ್ಕೃತಿಯೊಂದಿಗೆ ಸಹ ಬೆಸೆದುಕೊಂಡಿರುತ್ತವೆ. ಪದಗಳು, ವಾಕ್ಯಗಳು ಈ ಅರ್ಥದಲ್ಲಿ ತಟಸ್ಥವಲ್ಲ. ಅವು ಸಾಂದರ್ಭಿಕ ಅರ್ಥ ಧರಿಸುತ್ತವೆ. 'ಮಂಗಳಾರತಿ ಆಯಿತೇ ?' ಎಂಬ ಪ್ರಶ್ನೆ ಗುಡಿಯಿಂದ ಹೊರಬರುತ್ತಿರುವವನಿಗೂ ಹಾಗೂ ತನ್ನ ಆಫೀಸಿನ ಮುಖ್ಯಸ್ಥನ ಕೋಣೆಯಿಂದ ಹೊರ ಬರುತ್ತಿರುವವನಿಗೂ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಭಾಷೆಯಲ್ಲಿನ ಮೊನಚು, ವ್ಯಂಗ್ಯಗಳೂ ಸಹ ಭಿನ್ನಾರ್ಥಗಳನ್ನು ಸ್ಫುರಿಸುತ್ತವೆ. ಭಾಷೆಯೊಂದು ಮಾನವ ಸಮಾಜದ ಸಾಂಸ್ಕೃತಿಕ ಮೂಲ ಮಾತೃಕೆಯಲ್ಲಿ ಅಡಕವಾಗಿದೆ ಎಂದು ಭಾವಿಸುವುದು ಅಗತ್ಯ ಎಂದು ಭಾಷಾಶಾಸ್ತ್ರಜ್ಞರು ಹೇಳುವುದು ಈ ಅರ್ಥದಲ್ಲಿಯೇ. 'ಮಂಗಳಾರತಿ' ಎಂಬ ಒಂದು ಪದದ ಅರ್ಥ ಎರಡು ಸಂದರ್ಭಗಳಲ್ಲಿ ಭಿನ್ನವಾಗಬಹುದಾದರೆ ಇನ್ನು ಸಂಕೀರ್ಣ ಚಿಂತನೆಗಳು ಯಾವ ಅರ್ಥ ಪಡೆಯಬಹುದು ಯೋಚಿಸಿ. ಹೀಗೆ ಚಿಂತನೆಗಳು ಅಥವಾ ಪರಿಕಲ್ಪನೆಗಳು ಇತಿಹಾಸಕ್ಕೆ ಹೇಗೆ ಅಂಟಿಕೊಂಡಿರುತ್ತವೆಯೋ ಹಾಗೆಯೇ ಅದರಿಂದ ಭಿನ್ನವಾಗಿ ಸಹ ಅರ್ಥೈಸಲ್ಪಡುತ್ತಿರುತ್ತವೆ. ಭಾಷೆ ಭಿನ್ನ ಸಂಸ್ಕೃತಿಗಳಿಗೆ ಪ್ರಚೋದಕವಾಗುವುದು ಹೀಗೆಯೇ. ಒಂದೇ ಭಾಷೆಯ ಪ್ರಭಾವದಡಿಯಲ್ಲಿ ಭಿನ್ನವಾದ ಭಾಷೆಗಳು ಬೆಳೆಯಲು ಮಾತೃಭಾಷೆಯ ಛಾಪು ಸಹ ಒಂದು ಕಾರಣ. ಬಹುಶಃ ಈ ಕಾರಣಕ್ಕೆ ಕನ್ನಡಿಗರು ಅದೆಷ್ಟೇ ಇಂಗ್ಲಿಷ್ ಕಲಿತರೂ ಇಂಗ್ಲಿಷರಾಗುವುದಿಲ್ಲ. ಹಾಗೆ ಬೆಳೆದ ಭಾಷೆ ಬೇರೆಯದೇ ಭಾಷೆಯಾಗಿಬಿಡಬಹುದು. ನಿಜ, ಇಂದಿನ ಜ್ಞಾನ ಭಾಷೆಗೆ ತುಸು ಹತ್ತಿರ ಹೋಗಬಹುದು. ಆದರೆ, ಇಂಗ್ಲಿಷ್‌ನಲ್ಲಿ ಜ್ಞಾನವಿರುವುದು ಅದರ ಮೇಲ್ಮೆಯಿಂದಾಗಿ ಅಲ್ಲ. ಅದು ಇಂಗ್ಲಿಷ್‌ರ ಅಥವಾ ಅಮೆರಿಕನ್ನರ ಸಮಾಜದ ಇಂದಿನ ಸ್ಥಾನಮಾನವನ್ನು ಸೂಚಿಸುತ್ತದೆ. ಇತಿಹಾಸದ ಪ್ರವಾಹ ಒಂದೇ ರೀತಿ ಹರಿಯುವುದಿಲ್ಲ. ಮುಂದೆ ಇನ್ನೊಂದು ಭಾಷೆಯ ಸಮಾಜದಲ್ಲಿ ಜ್ಞಾನ ಲಭ್ಯವಾಗತೊಡಗಬಹುದು. ಇಂದಿನ ಕೀಳರಿಮೆಯ ಮನೋಭಾವ ಮುಂದುವರೆದಲ್ಲಿ ಮತ್ತೆ ನಾವು ಆ ಭಾಷೆಯನ್ನು ಕಲಿಯಬೇಕಷ್ಟೇ ಅಲ್ಲವೆ ? ಸಾಮಾಜಿಕ ಚಲನೆಯು ಹೇಗಾಗುತ್ತದೆ ಎಂಬುದಕ್ಕೆ ಇತಿಹಾಸದಲ್ಲಿ ಪಾಠಗಳು ಲಭ್ಯವಿವೆ. ಲಭ್ಯವಿರುವ ಪಾಠ ಗಳಿಂದ ಕಲಿಯದೇ ಅಪ್ರಜ್ಞಾಪೂರ್ವಕವಾಗಿ ಸಮಾಜ ಕಟ್ಟಿಕೊಳ್ಳ ಹೊರಟಿರುವ ಕನ್ನಡಿಗರು ಅರಿಯ ಬೇಕಾದುದು ಇಂದಿನ ನಮ್ಮ ಸಮಾಜದ ನಿಲುವಿನಿಂದಾಗಿ ನಾವು ಪಡೆ ಯುವುದು ಇಂಗ್ಲಿಷ್ ಸಂಸ್ಕೃತಿಯಲ್ಲ, ಅದು ಒಂದು ಎಡ ಬಿಡಂಗಿ

ಸಂಸ್ಕೃತಿಯೂ ಸಹ ಆಗಬಹುದು ಎಂಬ ವಾಸ್ತವತೆಯನ್ನು.

ಇಂದಿನ ಪಾಶ್ಚಿಮಾತ್ಯ ರಾಷ್ಟ್ರಗಳ ಬಗೆಗೆ ಹೇಳುತ್ತಾ ಎಸ್. ಎಲ್. ಭೈರಪ್ಪನವರು 'ತಮ್ಮ ಭಾಷೆಯನ್ನು ಬಿಟ್ಟರೆ ತಮ್ಮತನ, ತಮ್ಮ ಸಂಸ್ಕೃತಿ, ರಾಷ್ಟ್ರೀಯತೆಗಳು ಉಳಿಯುವುದಿಲ್ಲವೆಂಬ ಕಟುಸತ್ಯದ ಅರಿವಿನಿಂದಲೇ ಗಾತ್ರದಲ್ಲಿ ಎಷ್ಟೇ ಸಣ್ಣದಿರಲಿ, ಯುರೋಪಿನ ಪ್ರತಿಯೊಂದು ದೇಶವೂ ವ್ರತದಂತೆ ತನ್ನ ಭಾಷೆಯಲ್ಲಿಯೇ ಆಡಳಿತ, ಶಿಕ್ಷಣ, ಉದ್ಯಮ, ನಿತ್ಯ ವ್ಯವಹಾರ ಮೊದಲಾಗಿ ಸಮಸ್ತ ಬೌದ್ಧಿಕ ಹಾಗೂ ಸಾಂಸ್ಕೃತಿಕ ವ್ಯಾಪಾರಗಳನ್ನೂ ನಡೆಸುತ್ತದೆ' ಎನ್ನುತ್ತಾರೆ. ಭೈರಪ್ಪನವರು ಗಮನಿಸಿದ ಈ ಪಶ್ಚಿಮ ರಾಷ್ಟ್ರಗಳಲ್ಲಿನ ಬೆಳವಣಿಗೆ ಒಮ್ಮಿಂದೊಮ್ಮೆಲೇ ನಡೆದುದಲ್ಲ ಅಥವಾ ಕೇವಲ ಭಾಷೆಯನ್ನಷ್ಟೇ ಉಳಿಸಿಕೊಳ್ಳುವ ಹಠದಿಂದ ಸೃಷ್ಟಿಸಿ ಕೊಂಡುದೂ ಅಲ್ಲ. ಅದೊಂದು ಬೃಹತ್ ಸಾಮಾಜಿಕ ಬದಲಾವಣೆ. ಈ ಬೃಹತ್ ಬದಲಾವಣೆಯ ಭಾಗವಾಗಿಯೇ ರಾಷ್ಟ್ರ ಎಂಬ ನವಕಲ್ಪನೆ, ಸಮಾನತೆ-ಭ್ರಾತೃತ್ವ ಎಂಬ ಪರಿಕಲ್ಪನೆಗಳು, ಪ್ರಜಾಪ್ರಭುತ್ವದ ಕಲ್ಪನೆಗಳೂ ರೂಪುದಳೆಯುತ್ತವೆ. ಹಾಗೆಯೇ ರಾಷ್ಟ್ರಗಳ ಹೆಸರಿನಲ್ಲಿ ಯುದ್ಧಗಳು, ಫ್ಯಾಸಿಸಂ ಇತ್ಯಾದಿಗಳೂ ಸಹ. ಈ ಪ್ರಾರಂಭಿಕ ಬೆಳವಣಿಗೆಗಳ ಬಗೆಗೆ ತುಸು ದೃಷ್ಟಿ ಹಾಯಿಸೋಣ :

**ರಾಷ್ಟ್ರ ಹಾಗೂ ಭಾಷೆಗಳ ಸಂಬಂಧ**

ಯುರೋಪಿನಲ್ಲಿ ಪ್ರಾಂತೀಯತೆ, ಪ್ರಾಂತೀಯ ಭಾಷೆಗಳು ಪ್ರಾಮುಖ್ಯತೆ ಪಡೆಯುವ ಪ್ರಕ್ರಿಯೆಯ ಪ್ರಾರಂಭದಲ್ಲಿ ಧಾರ್ಮಿಕ ಸುಧಾರಣೆಗಳು ಪ್ರಮುಖ ಪಾತ್ರ ವಹಿಸುತ್ತವೆ. ೧೬ನೆಯ ಶತಮಾನಕ್ಕೂ ಹಿಂದೆ ಹೋದಲ್ಲಿ ಯುರೋಪಿನಲ್ಲಿ ಜ್ಞಾನ ಮಾಧ್ಯಮವಾಗಿ, ಸಾಹಿತ್ಯಿಕವಾಗಿ ಇನ್ನೂ ದೇಶ ಭಾಷೆಗಳ ಬಳಕೆ ಸಾರ್ವತ್ರಿಕವಾಗಿರಲಿಲ್ಲ. ಇಂಗ್ಲೆಂಡ್‌ನ ಸಾಮ್ರಾಟ ಎಂಟನೆಯ ಹೆನ್ರಿ ಹಾಗೂ ಪೋಪ್‌ನ ಮಧ್ಯದ ಘರ್ಷಣೆಯ ಪರಿಣಾಮವಾಗಿ ಆಂಗ್ಲಿಕನ್ ಚರ್ಚ್ ಸ್ಥಾಪನೆಯಾಗುತ್ತದೆ. ಇದು ರಾಜಕೀಯ ಪ್ರೇರಿತವಾದರೂ ಧಾರ್ಮಿಕ ಪ್ರಾಂತೀಯ ಕೇಂದ್ರಗಳು ಬಲಗೊಳ್ಳುವುದರಲ್ಲಿ ಪರ್ಯವಸಾನವಾಗುತ್ತದೆ. ಹಾಗೆಯೇ ಮಾರ್ಟಿನ್ ಲೂಥರ್ ೧೬ನೆಯ ಶತಮಾನದ ಪ್ರಾರಂಭದಲ್ಲಿ ಮೂಲದಿಂದ ಮಾಡಿದ ಬೈಬಲ್‌ನ ವಿಶಿಷ್ಟ ಜರ್ಮನ್ ಅನುವಾದ ಅವನ ಚಿಂತನೆಗಳಿಗೆ ಜನಪ್ರಿಯತೆ ತಂದು ಕೊಡುತ್ತದೆ (೧೫ನೆಯ ಶತಮಾನದಲ್ಲಿ ಬೈಬಲ್‌ನ ಜರ್ಮನ್ ಅನುವಾದ ಲಭ್ಯವಿರುತ್ತದೆ). ಹೀಗೆ ಯುರೋಪಿನಲ್ಲಿ ಹಲವು ಧಾರ್ಮಿಕ ಸುಧಾರಣೆಗಳು ಪ್ರಾಂತೀಯ ಪರಿಧಿಯೊಳಗೆ ಪ್ರಾರಂಭವಾಗುತ್ತವೆ ಹಾಗೂ ಅಲ್ಲಿನ ಆಡುಭಾಷೆಯ ಬಳಕೆ ಬರವಣಿಗೆಯಲ್ಲಿ ಹೆಚ್ಚುತ್ತದೆ. ಅದಕ್ಕೂ ಮುಂಚೆ ಯುರೋಪಿನಲ್ಲಿ ಘನತೆ ಪಡೆದ ಭಾಷೆ ಲ್ಯಾಟಿನ್ ಮಾತ್ರವೇ.

ಇದೇ ಸಂದರ್ಭದಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಎನ್ನಬಹುದಾದ ಹಲವಾರು ಬದಲಾವಣೆಗಳು ಯುರೋಪಿನಲ್ಲಿ ನಡೆಯುತ್ತಿರುತ್ತವೆ. ಅವುಗಳಲ್ಲಿಂದು ಬಂಡವಾಳ ಶಾಹಿ ಎಂಬ ನವವರ್ಗದ ಬೆಳವಣಿಗೆಯೂ ಒಂದು. ಈ ವರ್ಗ ಹಿಂದಿನ ಸಮಾಜಕ್ಕೆ ಭಿನ್ನವಾದ ನವಸಮಾಜದ ಪರಿಕಲ್ಪನೆಗಳನ್ನು ಪ್ರೋತ್ಸಾಹಿಸುತ್ತದೆ. ಈ ನವವರ್ಗದ ಕನಸುಗಳು ಸಮಾಜದ ಬಹುಸಂಖ್ಯಾತರ ಕನಸುಗಳಾಗಿ ಪರಿವರ್ತನೆಯಾಗುತ್ತವೆ. ಹಲವು ಊಳಿಗಮಾನ್ಯ ಅಸಮ ಸಂಬಂಧಗಳು ಹಾಗೂ ಚರ್ಚಿನ ಹಲವು 'ಅನ್ಯಾಯ'ಗಳಿಗೆ ವಿರೋಧ ಸಹ ತನ್ನದೇ ಕೊಡುಗೆ ನೀಡುತ್ತದೆ. ನವ ಪ್ರಾಂತೀಯ (ಅಂದಿನ ವ್ಯಾಪ್ತಿಯ ಧಾರ್ಮಿಕ ಕೇಂದ್ರಕ್ಕೆ ಭಿನ್ನವಾದ) ಭಾವನೆಗಳಿಗೆ, ಸ್ವತಂತ್ರ ರಾಷ್ಟ್ರ ಕಲ್ಪನೆಗೆ ಇದು ಪ್ರಚೋದನೆ ನೀಡುತ್ತದೆ. ಭಾಷೆ, ಸಂಸ್ಕೃತಿ ಆಧುನಿಕ ಭೌಗೋಳಿಕ ಏಕತೆಗೆ ದಾರಿ ತೆರೆಯುತ್ತದೆ. ೧೭೮೯ರ ಫ್ರಾನ್ಸ್‌ನ ಕ್ರಾಂತಿ ಇದರ ಇನ್ನೊಂದು ಮಜಲು. ಊಳಿಗಮಾನ್ಯ ಸವಲತ್ತುಗಳನ್ನು ರದ್ದುಗೊಳಿಸುವ ಫ್ರೆಂಚ್ ಅಸೆಂಬ್ಲಿ ಘೋಷಣೆ ನವಸಮಾಜದ ಸೈದ್ಧಾಂತಿಕ ಚೌಕಟ್ಟಾದ ಸ್ವಾತಂತ್ರ್ಯ, ಭ್ರಾತೃತ್ವ ಹೀಗೆ ಹಲವು ನವ ಚಿಂತನೆಗಳಿಗೂ ಮುಂದೆ 'ಜನರಿಗಾಗಿ ಪ್ರಭುತ್ವ' ಎಂಬ ಕಲ್ಪನೆಗೂ ದಾರಿ ಮಾಡಿ ಕೊಡುತ್ತದೆ. ಈ ನವ ಸಮಾಜದ ಚೌಕಟ್ಟಿಗೆ ಕಾನೂನು, ಮಾನವನ ಸ್ವಭಾವದ ಬಗೆಗಿನ ಮಾನವತಾವಾದಿಗಳ ಚಿಂತನೆ (ಹ್ಯೂಮನಿಸ್ಟ್ ಟ್ರೆಡಿಷನ್) ತನ್ನದೇ ಕೊಡುಗೆ ನೀಡುತ್ತದೆ.

ಮೇಲೆ ನೋಡಿದಂತೆ ಈ ಬದಲಾವಣೆಗಳು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಎಲ್ಲ ಮಜಲುಗಳನ್ನು ಒಳಗೊಂಡಿದ್ದವು. ಹಾಗೆಯೇ ಹಿಂದಿನ ಸಾಮಾಜಿಕ ಘಟಕಗಳಾದ ಸಾಮ್ರಾಜ್ಯಗಳಿಗೆ, ಬುಡಕಟ್ಟುಗಳಿಗೆ ಬದಲಾಗಿ ನವಸಾಮಾಜಿಕ ಘಟಕವಾದ ರಾಷ್ಟ್ರ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದು ಮುಂದೆ ಈ ಪರಿಕಲ್ಪನೆ ಒಂದು ಮಾದರಿಯಾಗಿ ರೂಪಗೊಂಡು ಬೆಳೆಯುತ್ತದೆ. ಡಿ. ಆರ್. ನಾಗರಾಜ್ ಈ ರಾಷ್ಟ್ರೀಯತೆಯ ವೈಲಕ್ಷಣ್ಯಗಳನ್ನು ಸಮಾನ ಪ್ರಾದೇಶಿಕತೆ, ಮಾರುಕಟ್ಟೆ, ಒಂದೇ ಭಾಷೆ, ರಾಷ್ಟ್ರೀಯ ಪ್ರಭುತ್ವ ಹಾಗೂ ಸಮಾನ ಸಂಸ್ಕೃತಿ ಎಂದು ಗುರುತಿಸುತ್ತಾ ಇದು ಬಂಡವಾಳಶಾಹಿ ಸಮಾಜದ ವಿಶಿಷ್ಟ ಬೆಳವಣಿಗೆಯಾಗಿದೆ ಎಂದು ವಾದಿಸುವುದು ಈ ಹಿನ್ನೆಲೆಯಲ್ಲಿಯೇ. ಹಿಂದಿನ ಸಾಮ್ರಾಜ್ಯ ಪರಿಕಲ್ಪನೆಯಲ್ಲಿನ ಚಿಂತನೆಗಳಿಗಿಂತ ಭಿನ್ನವಾದ ಸಾಮಾಜಿಕ ಚಿಂತನೆಗಳು – ಕಾನೂನು, ಧರ್ಮ-ಪ್ರಭುತ್ವದ ಸಂಬಂಧ ಹೀಗೆ ಹಲವು ಚಿಂತನೆಗಳ ಪುನರ್‌ವಿಮರ್ಶೆ ಈ ಶತಮಾನಗಳಲ್ಲಿ (೧೭-೧೮ನೆಯ ಶತಮಾನಗಳಲ್ಲಿ) ನಡೆಯಿತು. ಪರಿಣಾಮವಾಗಿ ಧರ್ಮವನ್ನು ಸಮಾಜದ ನಿರ್ಣಾಯಕ ಶಕ್ತಿಯಾಗಿ ತಿರಸ್ಕರಿಸಿ ವೈಚಾರಿಕತೆಗೆ ಒತ್ತು ಕೊಡಲಾಯಿತು. ಇದರ ಪರಿಣಾಮವಾಗಿ ಧರ್ಮನಿರಪೇಕ್ಷತೆ ರಾಷ್ಟ್ರ ಪರಿಕಲ್ಪನೆಯ ಭಾಗವಾಯಿತು. ಧರ್ಮಕ್ಕೆ ಬದಲಾಗಿ ವೈಚಾರಿಕತೆಗೆ ಕೊಡುವ ಒತ್ತು ಆಧುನಿಕ ವಿಜ್ಞಾನಗಳ ಬೇರು ಬಿಡುವಿಕೆಗೆ ಪ್ರೋತ್ಸಾಹಿಸಿದರೆ, ಮುಂದೆ ವಿಜ್ಞಾನ ಉತ್ಪಾದನೆಯೊಂದಿಗೆ ಬೆಸೆದುಕೊಳ್ಳುವ ಮೂಲಕ ತನ್ನದೇ ಸ್ಥಾನ ಕಂಡುಕೊಂಡಿತು. ಇಂತಹ ಬದಲಾವಣೆಗೆ ಮುದ್ರಣ, ಶಿಕ್ಷಣ ಕೊಟ್ಟ ಕೊಡುಗೆ ಸಹ ಅಪಾರವಾದುದು. ಈ ಎಲ್ಲಾ ಒಟ್ಟಾರೆ ಪರಿಣಾಮವಾಗಿ ಯುರೋಪಿನಲ್ಲಿ ಭಾಷಾಧಾರಿತ ರಾಷ್ಟ್ರೀಯತೆಗಳು ಬೆಳೆದುಬಂದವು. ತಮ್ಮನ್ನು ತಾವು ಏಕ, ತಮ್ಮಲ್ಲಿ ಎಲ್ಲರೂ ಸಮಾನ ಎಂದು ಭಾವಿಸ ತೊಡಗಿದ, ತಮ್ಮದೇ ಪ್ರಭುತ್ವದ (ಅಂದಿನ ಸಂದರ್ಭದಲ್ಲಿ ಹಿಂದೆ ಇದ್ದಂತೆ ಪೋಪ್‌ನ ನಿಯಂತ್ರಣ, ಪ್ರಭಾವದಿಂದ ಹೊರತಾದ) ಆಶಯಕ್ಕೆ ಭಾಷಾ ಸಾಂಸ್ಕೃತಿಕ ಏಕತೆ ಸಹಾಯ ಮಾಡುತ್ತದೆ. ಭೈರಪ್ಪನವರು ಸೂಚಿಸುವ ಯುರೋಪಿನ ರಾಷ್ಟ್ರಗಳು ತಮ್ಮ ಭಾಷೆಯಲ್ಲಿಯೇ ಸಮಸ್ತ ಆಗುಹೋಗುಗಳನ್ನು ರೂಪಿಸಿಕೊಳ್ಳುವ ಪ್ರಕ್ರಿಯೆ ಈ ವಿಶಾಲ ಯುರೋಪ್ ನವರಾಷ್ಟ್ರೀಯ ಘಟಕಗಳಾಗಿ ಪುನರ್‌ಸೃಷ್ಟಿಸಿಕೊಳ್ಳುವ ಪ್ರಕ್ರಿಯೆಯ ಭಾಗವಾಗಿಯೇ ನಡೆಯಿತು. 'ರಾಷ್ಟ್ರ' ಎಂಬ ಆಧುನಿಕ ಪರಿಕಲ್ಪನೆಯ ಜನನದ ಸ್ಥೂಲ ಹಿನ್ನೆಲೆಯಿದು.

ಭಾರತೀಯ ಸಂದರ್ಭದಲ್ಲಿಯೂ ಸಮಾನ ಮನೋಭಾವ ಹಾಗೂ ಬೆಳೆದ ಭಾಷೆಗಳು ಇರುವ ಪ್ರತಿ ದೊಡ್ಡ ಭಾಷಾ ಸಾಂಸ್ಕೃತಿಕ ಘಟಕಗಳನ್ನೂ ರಾಷ್ಟ್ರ ಎಂದು ಪರಿಗಣಿಸುವ ಅಗತ್ಯವಿತ್ತು. ಹಲವು ನೂರು ವರ್ಷಗಳಿಂದ ತಮ್ಮದೇ ವೈಶಿಷ್ಟ್ಯತೆಯನ್ನು ರೂಪಿಸಿಕೊಂಡ ಹಲವು ಭಾಷೆಗಳು ಭಾರತದಲ್ಲಿವೆ. ಈ ಅರ್ಥದಲ್ಲಿ ಕನ್ನಡ, ತಮಿಳು, ಬಂಗಾಳಿ, ಹಿಂದಿ ಹೀಗೆ ರಾಷ್ಟ್ರಗಳೆಂತಲೂ ಭಾರತ ಒಂದು ಇಂತಹ ಸಮಾನ ರಾಷ್ಟ್ರಗಳ ಒಕ್ಕೂಟ ಎಂತಲೂ ಪರಿಗಣಿಸುವ ಅಗತ್ಯ ಉಂಟಾಗುತ್ತಿತ್ತು. 'ನುಡಿಯೊಂದಾಗದೆ ನಾಡೊಂದಾಗದು' ಎಂಬ ಆಲೂರು ವೆಂಕಟರಾಯರ ನಿಲುವಿನಲ್ಲಿ ಯುರೋಪಿನ ಪಾಠ ಹಾಗೂ ಭಾರತೀಯ ಸಂದರ್ಭದಲ್ಲಿನ ಸಾಧ್ಯತೆಗಳೆರಡೂ ಅಡಕವಾಗಿವೆ. ಎಡಪಂಥಗಳು ಭಾರತ ಬಹುರಾಷ್ಟ್ರಗಳ ಒಕ್ಕೂಟ ಎಂದು ವಾದಿಸುತ್ತಿವೆ. ಡಿ. ಆರ್. ನಾಗರಾಜ್ ದಶಕಕ್ಕೂ ಹಿಂದೆ ಕನ್ನಡ ರಾಷ್ಟ್ರೀಯತೆ ಪರಿಕಲ್ಪನೆ ಬಗೆಗೆ ಪ್ರಸ್ತಾಪ ಮಾಡಿ ಚರ್ಚಿಸಿದ್ದಾರೆ ಸಹ. ಇತ್ತೀಚೆಗೆ ಪಿ. ವಿ. ನಾರಾಯಣ ಅವರು ಕನ್ನಡ ರಾಷ್ಟ್ರವೆಂದು ಬಳಸುವ ಬಗೆಗೆ ವಿಚಾರ ಸಂಕಿರಣವೊಂದರಲ್ಲಿ ಸೂಚಿಸಿದ್ದಾರೆ. ಅಲ್ಲಿ ಅಲ್ಪಸಂಖ್ಯಾತರ ಭಾಷೆಯನ್ನು ಬಳಸುವ ಯಾವುದೇ ಸಮಾಜ ಆಧುನಿಕ ಸಂಸ್ಕೃತಿಗೆ ತನ್ನ ಕೊಡುಗೆ ಕೊಟ್ಟಿಲ್ಲ ಎಂಬುದರೆಡೆಗೆ ಸಹ ಗಮನ ಸೆಳೆಯಲಾಗಿದೆ. ೫೦ ವರ್ಷಗಳ ಹಿಂದೆಯೇ ಜನಭಾಷೆಗಳಲ್ಲಿಯೇ ಜ್ಞಾನ ಸೃಷ್ಟಿ ಪ್ರಾರಂಭವಾಗಬೇಕಾದ ಅಗತ್ಯವಿತ್ತು. ವಾಸ್ತವದಲ್ಲಿ ಇಂದು ನಡೆಯಬೇಕಾದುದು ಈ ಪರ್ಯಾಯದ ಬಗೆಗಿನ ಗಂಭೀರ ಚರ್ಚೆ.

ಇಂದು ಸಂವಿಧಾನದಲ್ಲಿ ಗುರುತಿಸಲ್ಪಟ್ಟ ಎಲ್ಲಾ ಭಾಷೆಗಳಿಗೆ ರಾಷ್ಟ್ರೀಯ ಸ್ಥಾನಮಾನ ಕೊಡುವ ಬಗೆಗಿನ ಚಿಂತನೆ ಹೊಸದೇನೂ ಅಲ್ಲ. ಬರಗೂರು ರಾಮಚಂದ್ರಪ್ಪನವರು ಕನ್ನಡ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾಗ ವಿಚಾರ ಸಂಕಿರಣವೊಂದರಲ್ಲಿ ಎಲ್ಲಾ ಪ್ರಮುಖ ಭಾಷೆಗಳಿಗೂ ರಾಷ್ಟ್ರೀಯ ಸ್ಥಾನಮಾನ ಕೊಡುವ ಬಗೆಗೆ ಕೇಂದ್ರದ ಮೇಲೆ ಒತ್ತಡ ಹೇರಬೇಕಾದ ಅಗತ್ಯವನ್ನು ಸೂಚಿಸಿದ್ದರು ಸಹ. ಕನ್ನಡದ ಬಗೆಗೆ ಕಾಳಜಿ ವಹಿಸಿದ ಹಲವರು ಇದಕ್ಕೆ ಧ್ವನಿಗೂಡಿಸುವ ಅಗತ್ಯವಿತ್ತು. ಇಂದೂ ಸಹ ಅಂತಹ ಧ್ವನಿ ನೀಡದಿದ್ದಲ್ಲಿ, ಯುಪಿಎನಲ್ಲಿನ ಆಶ್ವಾಸನೆಯೂ ಸಹ ಕೇವಲ ಆಶ್ವಾಸನೆಯಾಗಿ ಉಳಿದು ಬಿಡಬಹುದಾದ ಅಪಾಯ ತಪ್ಪಿದ್ದಲ್ಲ. ಹಿಂದೆ ಭಾಷಾವಾರು ಪ್ರಾಂತಗಳ ರಚನೆಯ ಬಗೆಗೆ ವಿರೋಧಿಸಿದ್ದ ಶಕ್ತಿಗಳು, ಎನ್‌ಡಿಎ ಅಧಿಕಾರದಲ್ಲಿದ್ದರೂ ಅದರ ಆಶ್ವಾಸನೆಯನ್ನು ಕಾರ್ಯಗತಗೊಳಿಸಲು ಬಿಡದಿದ್ದ ಶಕ್ತಿಗಳು ಕ್ರಿಯಾಶೀಲವಾಗಿಯೇ ಇದ್ದು ಯಥಾ ಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ಸಕಲ ಪ್ರಯತ್ನಗಳನ್ನು ಮಾಡುತ್ತಿವೆ. ಸಾಂಸ್ಕೃತಿಕ ವೈಶಿಷ್ಟ್ಯತೆರಹಿತ ಭಾರತವನ್ನು ತಮ್ಮ ಕನಸಾಗಿಸಿಕೊಂಡ ಈ ಶಕ್ತಿಗಳು ಇತ್ತೀಚೆಗೆ ರಾಜ್ಯಸಭೆಗೆ ಸದಸ್ಯರಾಗಿ ರಾಜ್ಯಗಳಿಂದ ಆಯ್ಕೆಯಾಗುವವರು ಆಯಾ ರಾಜ್ಯದ ನಿವಾಸಿಗಳಾಗಿರಬೇಕು ಎಂಬ ಸಂವಿಧಾನದ ನಿಯಮವನ್ನು ತಿದ್ದುಪಡಿ ಮಾಡಿದವು. ಈ ತಿದ್ದುಪಡಿಯ ವಿಸ್ತೃತ ಪರಿಣಾಮದ ಬಗೆಗೂ (ಉದಾಹರಣೆಗೆ ರಾಜ್ಯಸಭೆಯ ಎಲ್ಲಾ ಸದಸ್ಯರೂ ಒಂದೇ ರಾಜ್ಯದಿಂದಲೂ ಆಗಬಹುದು) ಒಕ್ಕೂಟ ವ್ಯವಸ್ಥೆಗೆ ಇಂತಹ ಬದಲಾವಣೆ ತರುವ ಧಕ್ಕೆಯ ಬಗೆಗೂ ಕುಲ್‌ದೀಪ್ ನಾಯರ್ ಚರ್ಚಿಸಿದ್ದಾರೆ. ನಮ್ಮ

ಮಾಧ್ಯಮಗಳಾದರೋ ಇಂತಹ ಹಲವಾರು ಪ್ರಾದೇಶಿಕ ಆಸಕ್ತಿಗಳ ಬಗೆಗಿನ ಚಿಂತನೆಗಳ ಬಗೆಗೆ ಚಕಾರ ಎತ್ತದೆ ಯಾವುದೋ ಮಂತ್ರಿಗಳ ನಿದ್ರೆ, ಕುಣಕು ಇತ್ಯಾದಿಗಳಿಗೆ ಮಹತ್ವ ಕೊಡುವಲ್ಲಿಯೇ ತಮ್ಮ ಅಪಾರ ಶಕ್ತಿಯನ್ನು ವ್ಯಯಿಸುತ್ತಿವೆ. ಕನ್ನಡ ರಾಷ್ಟ್ರೀಯತೆಯ ಪರಿಕಲ್ಪನೆಯ ಅಡಿಯಲ್ಲಿ ನಮ್ಮ ಸಮಾಜದ ಪುನರ್‌ನಿರ್ಮಾಣಕ್ಕೆ ಕನ್ನಡ ರಾಷ್ಟ್ರೀಯ ಭಾಷೆ ಸ್ಥಾನಮಾನ ಗಳಿಸುವುದು ಮೊದಲ ಹೆಜ್ಜೆಯಾಗಲೂ ಸಾಧ್ಯವಿದೆ.

**ನಮ್ಮ ಮುಂದಿರುವ ಆಯ್ಕೆ**

ಕನ್ನಡ ರಾಷ್ಟ್ರೀಯತೆ ಕುರಿತ ಚಿಂತನೆಯು ಸಮಗ್ರ ಕರ್ನಾಟಕದ ಅಭಿವೃದ್ಧಿಯ ಭವ್ಯ ಕನಸಿಗೆ ಪುಷ್ಟಿ ನೀಡುತ್ತದೆ. ತಮ್ಮ ಸಮಾಜ ನಿರ್ಮಾಣಕ್ಕೆ ಲಭ್ಯವಿರುವ ಆಯ್ಕೆಗಳ ಬಗೆಗಿನ ಚರ್ಚೆಯಲ್ಲಿ ಬಹುಸಂಖ್ಯಾತರು ಭಾಗವಹಿಸುವ ಸಾಧ್ಯತೆಯನ್ನು ಇದು ಒದಗಿಸಿ ಕೊಡುತ್ತದೆ. ಅಲ್ಲದೆ, ಪ್ರಜಾಪ್ರಭುತ್ವ ಗಟ್ಟಿಗೊಳ್ಳುವ ಪ್ರಕ್ರಿಯೆಗೆ ಇದು ಪೂರಕವಾಗುತ್ತದೆ. ಈ ಕಲ್ಪನೆಯೊಳಗೆ ಇಂದು ಮಾನವ ಸಮಾಜದಲ್ಲಿ ಲಭ್ಯ ಜ್ಞಾನವು ಕನ್ನಡಕ್ಕೆ ಬರುವ ಮೂಲಕ ಜ್ಞಾನ ಜನರಿಗೆ ಹತ್ತಿರವಾಗುವ ಸಾಧ್ಯತೆಯೊಂದು ಅರಳಿಕೊಳ್ಳುತ್ತದೆ. ಇದರೊಳಗೆ ರಾಜ್ಯಗಳಿಗೆ ಸ್ವಾಯತ್ತತೆ, ಆರ್ಥಿಕ ವಿಕೇಂದ್ರೀಕರಣ, ಭಾಷೆ ಬಳಕೆಯ ಸಾರ್ವತ್ರಿಕತೆ ಇವು ಅರ್ಥ ಪಡೆದುಕೊಳ್ಳುತ್ತವೆ. ಇದು ಕರ್ನಾಟಕದ ಸಮಗ್ರ ಅಭಿವೃದ್ಧಿಯಲ್ಲಿ ಮೂಲಭೂತವಾದ ಆರ್ಥಿಕ ಬೆಳವಣಿಗೆಯ ಅಂಶವನ್ನೂ ನಿರ್ವಿವಾದವಾಗಿ ಒಳಗೊಳ್ಳ ಬೇಕಾಗುತ್ತದೆ. ಇಂದಿನ ಜಾಗತೀಕರಣ, ಕೊಳ್ಳುಬಾಕ ಸಂಸ್ಕೃತಿ ಹೇಗೆ ನಮ್ಮ ಸಮಾಜವನ್ನು ಪ್ರಭಾವಿಸುತ್ತಿವೆ ಹಾಗೂ ಅದರ ಪರಿಣಾಮಗಳೇನು ಎಂಬ ಕಾಳಜಿಯೂ ಪ್ರಸ್ತುತ ವಾಗುವುದು ಈ ಹಿನ್ನೆಲೆಯಲ್ಲಿಯೇ. ಈ ಬೆಳವಣಿಗೆಗಳು ನಮ್ಮ ಸಮಾಜವನ್ನು ಗುಣಾತ್ಮಕ ವಾಗಿ ಕುಸಿಯುವ, ಸಂಪನ್ಮೂಲಗಳನ್ನು ವ್ಯರ್ಥಗೊಳಿಸುವ ಸಮಾಜವನ್ನಾಗಿ ಪರಿವರ್ತಿಸ ಬಾರದಲ್ಲವೆ? ಇಲ್ಲಿಯ ಮುಖ್ಯ ಆಶಯ ತಮ್ಮ ಭಾಷೆಯಲ್ಲಿಯೇ ಆಧುನಿಕ ಸಮಾಜ ಕಟ್ಟಿಕೊಳ್ಳಲು ಸಾಧ್ಯವಿರುವ ಎಲ್ಲಾ ಭಾಷಾಧಾರಿತ ರಾಜ್ಯಗಳನ್ನು ಈ ರಾಷ್ಟ್ರೀಯತೆ ಪರಿಕಲ್ಪನೆಯೊಳಗೆ ಗ್ರಹಿಸುವುದು. ಈ ಅರ್ಥದಲ್ಲಿ ಇದು ಕನ್ನಡಕ್ಕೆ ಮಾತ್ರ ಸೀಮಿತ ವಾದುದಲ್ಲ. ಈ ರಾಷ್ಟ್ರೀಯತೆ ಪರಿಕಲ್ಪನೆಯೊಳಗೆ ಆಯಾ ರಾಜ್ಯಗಳಲ್ಲಿನ ಪ್ರಾದೇಶಿಕ ಅಸಮಾನತೆಗಳು (ಉದಾಹರಣೆಗೆ, ಉತ್ತರ ಕರ್ನಾಟಕದ ಹಿಂದುಳಿಯುವಿಕೆ ಅಥವಾ ಆಂಧ್ರದ ತೆಲಂಗಾಣ, ಮಹಾರಾಷ್ಟ್ರದ ವಿದರ್ಭ ಈ ಭಾಗಗಳ ಹಿಂದುಳಿಯುವಿಕೆ) ಮತ್ತೆ ವಿಭಜನೆಗೆ ದಾರಿಯಾಗದೆ, ಅಧಿಗಮಿಸಬೇಕಾದ ಸವಾಲಾಗಿ ಪರಿಣಮಿಸುತ್ತವೆ.

ಜಾಗತೀಕರಣದ ಘೋಷಣೆ ಇಡೀ ವಿಶ್ವವನ್ನೇ ಹಳ್ಳಿಯಾಗಿಸಲು ಹೊರಟಿರುವಾಗ ಇದು ಸಾಧ್ಯವೆ? ವಾಸ್ತವದಲ್ಲಿ ಜಾಗತೀಕರಣ ಇಂದು ಹೇರುತ್ತಿರುವ ಏಕರೂಪೀ ವಿಕೃತ ಸಂಸ್ಕೃತಿಗೆ ಪರ್ಯಾಯವಾಗಿ ಕನ್ನಡ ಸಂಸ್ಕೃತಿಯನ್ನು ಕಟ್ಟಿಕೊಳ್ಳುವುದು ಅನಿವಾರ್ಯ ವೆಂದು ನನಗೆ ಭಾಸವಾಗುತ್ತದೆ. ಆಧುನಿಕ ತಂತ್ರಜ್ಞಾನಕ್ಕೆ ಕನ್ನಡ ಒಗ್ಗುವುದಿಲ್ಲ, ಕಂಪ್ಯೂಟರ್‌ನಲ್ಲಿ ಕನ್ನಡ ಬಳಕೆ ಸಾಧ್ಯವಾಗುವುದಿಲ್ಲ ಎಂದೆಲ್ಲಾ ತಪ್ಪಾಗಿ ವಾದಿಸುವವರ ಬಗೆಗೆ ಏನು ಹೇಳಲಾದೀತು? ಬದಲಾಗಿ ಇಂದು ನಮಗೆ ಲಭ್ಯವಿರುವ ಇಂದಿನ ಇಂಗ್ಲಿಷ್ ಪ್ರತಿಷ್ಠೆ ಪಡೆದ ಸಮಾಜ ಹಾಗೂ ಕನ್ನಡ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನೂ ಒಳಗೊಂಡ ಆಧುನಿಕ ಸಮಾಜ ಎರಡೂ ಕಟ್ಟಿಕೊಳ್ಳುವುದು ಸುಲಭದ ಹಾದಿಗಳೇನಲ್ಲ. ಕನ್ನಡ ಪರವಿರುವವರಿಗೆ ಪಿ. ವಿ. ನಾರಾಯಣ್ ಅವರು ಸೂಚಿಸಿದ ಸರಳ ಸೂತ್ರ ಇಂದು ಆಗುತ್ತಿರುವ ಪ್ರಕ್ರಿಯೆಗೆ ಭಿನ್ನವಾಗಿ ಕನ್ನಡದ ಬಳಕೆಯ ವ್ಯಾಪ್ತಿ ಹಿಗ್ಗಿಸುವುದು. ಕನ್ನಡಿಗರ ಸಮಷ್ಟಿ ಪ್ರಜ್ಞೆ (ಇದೂ ಸಹ ವ್ಯಕ್ತಿಗಳಿಂದಲೇ ಪ್ರಾರಂಭವಾಗಬೇಕು ಎಂಬುದನ್ನು ಮರೆಯಬಾರದಷ್ಟೆ) ಇತ್ತ ಒಲಿದಾಗ ಇದು ಸಾಧ್ಯವಾಗುತ್ತದೆ. ಭಾಷೆಯೊಂದು ಜೀವಂತವಾಗಿರುವುದು ಅದರ ಬಳಕೆಯಲ್ಲಿ. ಬಳಕೆ ಕುಗ್ಗುತ್ತಿರುವ ಭಾಷೆ ಸಾವಿನಂಚಿನೆಡೆ ದೂಡಲ್ಪಡುತ್ತದೆ ಎಂದೇ ಅರ್ಥ. ಭಾಷೆಯ ಸಾವು ಆ ಸಂಸ್ಕೃತಿಯ ಸಾವು ಸಹ. ಈ ಕಾರಣಕ್ಕೆ ಕನ್ನಡ ಸಂಸ್ಕೃತಿಯನ್ನು ಇಂದು ಈ ಸ್ಥಿತಿಗೆ ತಂದಿರುವುದು ಸ್ವತಃ ಕನ್ನಡಿಗರೇ ಹೊರತು ಅನ್ಯಭಾಷಿಕರಲ್ಲ ಎಂಬ ಅರಿವು ಅಗತ್ಯವೆನಿಸದಿರದು. ರಾಷ್ಟ್ರೀಯತೆಯ ಕಲ್ಪನೆ, ನಿಲುವು ಅನ್ಯಭಾಷಿಕರ ವಿರೋಧಿಯಲ್ಲ. ಅನ್ಯಭಾಷಿಕರು ತಮ್ಮದೇ ಭಾಷೆಯಲ್ಲಿನ ಮೌಲಿಕವಾದುದನ್ನು ಕನ್ನಡಕ್ಕೆ ತರುವ ಮೂಲಕ ಸಾಂಸ್ಕೃತಿಕ ಸೇತುವೆಗಳಾಗುವ ಸಾಧ್ಯತೆಯೊಂದು ಈ ಪರಿಕಲ್ಪನೆಯಲ್ಲಿ ತೆರೆದುಕೊಳ್ಳುತ್ತದೆ. ಕೆಲವರ ಪ್ರಕಾರ ಪ್ರಾದೇಶಿಕ ಪಕ್ಷಗಳಷ್ಟೇ ಇಂತಹ ಸ್ಥಿತಿಯಿಂದ ನಮ್ಮನ್ನು ಪಾರು ಮಾಡಬಲ್ಲುವು ಎಂಬ ನಿಲುವು ಸಹ ಅತಾರ್ಕಿಕ. ಕನ್ನಡಿಗರ ಸಂಸ್ಕೃತಿಯ ಉಳಿವಿನ ಅಗತ್ಯ ಮನನವಾದ ಪರಿಣಾಮವಾಗಿ ಉಂಟಾಗುವ ಕನ್ನಡಿಗರ ಜಾಗೃತಿ ಮಾತ್ರ ನಮ್ಮನ್ನು ಇಂತಹ ಪರಿಸ್ಥಿತಿಯಿಂದ ಪಾರುಮಾಡಬಲ್ಲದಷ್ಟೆ. ಮುಂದೆ ಕನ್ನಡಿಗರ ಆಯ್ಕೆ ಏನಾಗುತ್ತದೆ ಎನ್ನುವುದರ ಮೇಲೆಯೇ ಕನ್ನಡ ಸಂಸ್ಕೃತಿಯ ಭವಿಷ್ಯ ಅವಲಂಬಿಸಿದೆ.

ಬಿ. ಎಂ. ಪ್ರದೀಪ್ ಕುಮಾರ್
ಪ್ಲಾಟ್ ನಂ. ೫೨, ಕೇರಾಫ್ ಕನ್ನನ್, ಸತ್ಯನಾರಾಯಣ ಪೇಟೆ, ಗಂಗಾವತಿ, ಕೊಪ್ಪಳ ಜಿಲ್ಲೆ

## ಕಾಡು ತುಳಸಿ

ರಸ್ತೆ ಬದಿಯಲ್ಲಿ ನಿಂತ
ಕುಸುಮಗಂಧಿ
ಯಾರೋ ನೀರೆ ನನ್ನೇ ಕರೆದ ಹಾಗೆ
ಅದು ಹೇಗೆ ನೆನಪಿದೆಯೋ ಇವಳಿಗೆ
ನನಗೇ ಇಲ್ಲ ನನ್ನ
ಹೋದ ಜನ್ಮದ ಹೆಸರು!
ಯಾಕಿಂಥ ಹೆಸರಿಟ್ಟಳೋ ಇವಳಮ್ಮ
ಇವಳಿಗೆ
ಊರದಾರಿಯ ಹಿಡಿದು
ರಸ್ತೆಯಂಚಿನಲಿ ಸಾಗುವ ಬಜಾರಿ.

ಆ ಅವಳಿದ್ದಾಳಲ್ಲ...
ಇವಳ ಸವತಿಯೇ ಇರಬೇಕು
ಆ ಮನೆಯಂಗಳದಲಿ ನಿಂತ ಬೋಳಿ
ತುಸುವಾದರೂ ಸೊಂಪು ಸಂಭ್ರಮಗಳಿಲ್ಲ
ಬಿಳಿಚಿಕೊಂಡ ಮುತ್ತೈದೆ
ಅನೀಮಿಯಾ ಹೊದ್ದ ಸೆರಗು
ಆ ಗೆಜ್ಜೆ ಬತ್ತಿಯ ಎಳೆ.

ಈ ಇವಳಿದ್ದಾಳಲ್ಲ...
ದಿಡ್ಡಿ ಬಾಗಿಲು ದಾಟಿದಾಕ್ಷಣ
ತುದಿ ಮೂಗು ಚಿವುಟಿ ಕರೆಯುವಾಕೆ
ದಾರಿ ಜೋಗಿಯ ಜೊತೆಗಾತಿ
ಇದ್ದೊಂದು ತಳಮನೆಯ ತೊರೆಸುವಾಕೆ
ಹೊಲ-ಮನೆಯ ಬಿಟ್ಟು
'ನಡುದಾರಿ'ಯಲ್ಲೇ ನಿಂತ
ನಿಂತ ನಿಲುವಲ್ಲೇ ಹೊರಟ ಅಭಿಸಾರಿಕೆ
ಬೆತ್ತಲೆಗೆ ಸೋತವಳಲ್ಲ
ಪರ್ಣ ಪರ್ಣದಲಿ ಪೂರ್ಣಗೊಂಡ
ಲಜ್ಜಾಗೌರಿ.

ಎಸ್. ನಟರಾಜ ಬೂದಾಳು, ಗೌರಿ, ಸಪ್ತಗಿರಿ ಬಡಾವಣೆ, ತುಮಕೂರು - 572 102



# ಶಕ್ತಿ ಶಾರದೆಯ ಮೇಳ

## – ಒಂದು ಚಿಂತನೆ

**ಕ**ನ್ನಡ ಸಾಹಿತ್ಯದಲ್ಲಿ, ಪಾಶ್ಚಿಮಾತ್ಯರ ಚಿಂತನೆಗಳ ಪ್ರಭಾವದಿಂದ ವಿಮರ್ಶೆಯ ಪ್ರಕಾರ ಹುಟ್ಟಿಕೊಂಡಿತು. ಈ ವಿಮರ್ಶಾ ಪ್ರಜ್ಞೆ ಪ್ರವಾಹದಲ್ಲಿ ನಮ್ಮ ಅನೇಕ ವಿಮರ್ಶಕರು ಕನ್ನಡ ಸಾಹಿತ್ಯವನ್ನು ಅರ್ಥೈಸಿ, ವಿಶ್ಲೇಷಣೆ ಮಾಡುತ್ತಾ ಬಂದಿದ್ದಾರೆ. ವಿಮರ್ಶಾ ಕ್ಷೇತ್ರದಲ್ಲಿ ಹೊಸ ಆಯಾಮವನ್ನು ಗುರುತಿಸುವಲ್ಲಿ ಕನ್ನಡ ಸಾಹಿತ್ಯದ ಸಾರಸ್ವತ ಲೋಕದ ಬೌದ್ಧಿಕ ಪ್ರತಿಭೆಯಾದ ಶ್ರೀ ಡಿ. ಆರ್. ನಾಗರಾಜ್ ಅಗ್ರಗಣ್ಯರಾಗಿ ನಿಲ್ಲುತ್ತಾರೆ.

ಅವರು ಸಾಹಿತ್ಯವನ್ನು ನೋಡುವ ಕ್ರಮ, ಓದುವ ಕ್ರಮಕ್ಕೆ, ಒಂದು ಸಾಂಸ್ಕೃತಿಕ ಆಯಾಮವನ್ನು ನೀಡಿರುವುದು ಅವರ ಎಲ್ಲಾ ಪ್ರಾತಿನಿಧಿಕ ಲೇಖನಗಳಲ್ಲಿ ಕಾಣಬಹುದು. ಈ ನೆಲದ ಸತ್ವವನ್ನು ಹೀರಿ ಬೆಳೆಯುವ ಸಾಹಿತ್ಯವನ್ನು ಈ ನೆಲದ ಗುಣದಿಂದಲೆ ವಿಶ್ಲೇಷಿಸುವುದು ಅವರ ಲೇಖನಗಳ ವಿಶೇಷ. ಎಪ್ಪತ್ತರ ದಶಕ ದಿಂದೀಚೆಗೆ ಸಾಹಿತ್ಯವನ್ನು ಓದುವ ಕ್ರಮವನ್ನು ತೋರುಗೈಯಾಗಿ ನಿರೂಪಿಸಿರುವ ಯತ್ನ ಅವರ ಎಲ್ಲಾ ಲೇಖನಗಳಲ್ಲಿ ಕಂಡುಬರುತ್ತದೆ.

ತನ್ನ ಚರಿತ್ರೆ, ಪುರಾಣ, ಜಾನಪದ ಇತ್ಯಾದಿಗಳ ನಿಧಿಯಾದ ದೇಶೀಯ ಗಮ್ಯ ನೆಲೆಯನ್ನು ಮೈಗೂಡಿಸಿಕೊಂಡು, ಸಾಂಸ್ಕೃತಿಕ ಪ್ರಜ್ಞೆಯಾಗಿ ನಮ್ಮ ಸಾಹಿತ್ಯದ ಹುಟ್ಟು ಬೆಳವಣಿಗೆಯನ್ನು ನೋಡುವ ಕ್ರಮ ಅವರ ಬರಹಗಳಲ್ಲಿ ಕಾಣಬಹುದಾಗಿದೆ. ತಮ್ಮ ಲೇಖನದ ಮೂಲಕ ಭಾರತೀಯ ಪರಿಸರದ ಕವಿ, ಕೃತಿಗಳ ಕಡೆಗೆ, ಅದರಲ್ಲೂ ದೇಶೀ ಪ್ರತಿಭೆಗಳ ಕಡೆಗೆ ಹೊರಳಿಸಿದವರು ಡಿ. ಆರ್. ನಾಗರಾಜರು ಎಂದರೆ ತಪ್ಪಾಗಲಾರದು.

ಶ್ರೀ ಡಿ. ಆರ್. ನಾಗರಾಜರ ಸೂಕ್ಷ್ಮ ಗ್ರಹಿಕೆ, ಅಸಾಧಾರಣ ಒಳನೋಟಗಳು, ವೈಚಾರಿಕ ಪ್ರತಿಭೆ, ಪ್ರಾಚೀನ ಅರ್ವಾಚೀನ ಜ್ಞಾನಶಾಸ್ತ್ರಗಳ ಮೇಲಿನ ತಿಳುವಳಿಕೆಗಳಿಂದಾಗಿ ಅವರ ಲೇಖನ, ವಿಮರ್ಶೆ, ಸಂಶೋಧನೆಗಳಲ್ಲಿ ಅಸಾಮಾನ್ಯವಾದ ವ್ಯಾಖ್ಯಾನಗಳನ್ನು ಕಾಣಬಹುದಾಗಿದೆ. ಅಲ್ಲದೆ ರೂಪಕಾತ್ಮಕ ವಿಧಾನದಲ್ಲಿ ವಿಚಾರಗಳನ್ನು ಮಂಡಿಸುತ್ತ ಹೊಸ ಬಗೆಯ ಸಾಂಸ್ಕೃತಿಕ ವಿಮರ್ಶೆಯನ್ನು ಅತ್ಯಂತ ಸೃಜನಾತ್ಮಕವಾದ ಮನಃಸ್ಥಿತಿಯ ಮೂಲಕ ಕಟ್ಟಿಕೊಡುತ್ತಾರೆ.

ಈ ಹಿನ್ನೆಲೆಯಲ್ಲಿ ಅವರ ಪ್ರಾತಿನಿಧಿಕ ಸಂಶೋಧನ ಕೃತಿಯಾದ ಶಕ್ತಿ ಶಾರದೆಯ ಮೇಳವನ್ನು ಗಮನಿಸಬಹುದು. ಈ ಕೃತಿಯಲ್ಲಿ ಅವರು ಕಾವ್ಯವನ್ನು ಶೋಧಿಸುವ ಕ್ರಮವೇ ಭಿನ್ನ ರೀತಿಯಾಗಿದೆ. ಕಾಲ, ಕಾಮ, ಭೂಮಿ, ಸಮಾಜ ಎಂಬ ನಾಲ್ಕು ವಸ್ತುಗಳ ಮೂಲಕ ಮನುಷ್ಯನನ್ನು ಶೋಧಿಸಹೊರಟಿದ್ದಾರೆ.

ಭಾರತೀಯ ಮನಸ್ಸು ಮತ್ತು ಭೂಮಿ ಎಂಬ ಅಧ್ಯಾಯದಲ್ಲಿ ವೇದಕಾಲದಿಂದ ಇಂದಿನವರೆಗೂ ಭೂಮಿತಾಯಿಯ ಮೇಲಿನ ನಂಟನ್ನು ವಿಶ್ಲೇಷಣೆ ಮಾಡಹೊರಟಿದ್ದಾರೆ. ಅವರ ಚಾರಿತ್ರಿಕ ಪ್ರಜ್ಞೆ ಇಲ್ಲಿ ಹೆಚ್ಚು ಕೆಲಸ ಮಾಡಿದೆ. ಅವರ ವಿಶ್ಲೇಷಣಾ ಕ್ರಮವನ್ನು ಇಲ್ಲಿ ಕಾಣಬಹುದಾಗಿದೆ. ಭೂಮಿತಾಯಿ ಬೆಟ್ಟಗುಡ್ಡಗಳನ್ನು ಹೊರಬಲ್ಲಳು. ಅರಣ್ಯಗಳನ್ನು ಹೊರಬಲ್ಲಳು. ಮನುಷ್ಯನನ್ನು ಪ್ರೀತಿಯಿಂದ ತೋಯಿಸಬಲ್ಲಳು, ಜೋಗುಳ ಹಾಡಿ ನಿದ್ರೆಗೆ ತೂಗಬಲ್ಲಳು. ಆದರೆ ಭೂಮಿಯ ವ್ಯಕ್ತಿತ್ವಕ್ಕೆ ಇನ್ನೊಂದು ಮುಖವೂ ಇದೆ. ಅದು ಹಿಂಸ್ರಕಮುಖ. ಆಕೆಗಿರುವ ಕೊಲ್ಲುವ ಶಕ್ತಿಯ ಮುಖ ಅದು. ಭೂತಾಯಿಯ ಪ್ರೀತಿಯಲ್ಲಿ ತೇಲುತ್ತಿದ್ದ ಜೀವಿಗಳು ಇದ್ದಕ್ಕಿದ್ದಂತೆ ಆಕೆಯ ಹಿಂಸೆಯ ಉರಿಯಲ್ಲಿ ಉರಿದು ಬೂದಿಯಾಗುತ್ತವೆ. ಭೂಮಿಯ ಜೀವನಕ್ರಮದ ವಿಕಾಸದ ವಿವಿಧ ಹಂತಗಳಲ್ಲಿ ಇದು ಅತ್ಯಂತ ಕ್ರೂರವಾಗಿಯೇ ಪ್ರಕಟವಾಗುತ್ತದೆ. ಪಶುಪಕ್ಷಿ, ನಿಸರ್ಗ, ಮಾನವ ಈ ಎಲ್ಲ ಹಂತಗಳಲ್ಲಿ ಅದು ಬೇರೆ ಬೇರೆ ರೀತಿಗಳಲ್ಲಿ ಪ್ರಕಟವಾಗುತ್ತದೆ ಎಂದು ಅವರ ಕೃತಿಯಲ್ಲಿ ಗುರುತಿಸುತ್ತಾರೆ. ಒಂದು ವಸ್ತುವನ್ನು ನೋಡುವ ಕ್ರಮದಲ್ಲಿ, ಎರಡೂ ಮುಖಗಳ ದರ್ಶನದ (ಗುಣಾತ್ಮಕ ಮತ್ತು ನಕಾರಾತ್ಮಕ) ಸಾಮ್ಯತೆಯನ್ನು ಅವರ ಬರಹಗಳಲ್ಲಿ ಕಾಣಬಹುದು.

ಭೂಮಿಯ ಗುಣಕ್ಕೆ ಹಿಂಸ್ರಕ ಶಕ್ತಿ ಮತ್ತು ಪೋಷಣಾ ಶಕ್ತಿ ಇದ್ದಾಗ್ಯೂ ಹಿಂಸೆ ಮತ್ತು ದುಷ್ಟಶಕ್ತಿಯ ಸಮಸ್ಯೆಯನ್ನು ಮಂಡಿಸಿ ಅದನ್ನು ದಾಟಿಸುವ ಶಕ್ತಿ ಇದೆ ಎಂದು ಹೇಳುವುದೇ ಭಾರತೀಯ ಭೂಮಿತತ್ವ ಪ್ರತೀಕದ ಆಶಯ. ಭಾರತೀಯ ಮನಸ್ಸು ಸಹಿಷ್ಣುಸ್ವಭಾವವನ್ನು ಅರಿತಿರುವುದನ್ನು ಅವರು ಸೂಕ್ಷ್ಮವಾಗಿ ಗಮನಿಸಿರುವುದು ಇದರಿಂದ ತಿಳಿದುಬರುತ್ತದೆ. ಪ್ರಕೃತಿ ದರ್ಶನದ ಒಂದು ಭಾಗವೆಂಬಂತೆ ಈ ಭೂಮಿ ಕಂಡರೂ ಇನ್ನೂ ವಿಸ್ತಾರವಾದ ಅರ್ಥಗಳನ್ನು ಅದು ಒಳಗೊಳ್ಳುತ್ತದೆ ಎಂದು ಆಲೋಚಿಸುವ ಅವರು ಈ ವಸ್ತುವನ್ನು ಕುರಿತು ಇನ್ನೂ ಆಳವಾಗಿ ಚಿಂತನೆ ನಡೆಸಲು ಅವಕಾಶ ಮಾಡಿಕೊಟ್ಟಿದ್ದಾರೆ.

ಇಪ್ಪತ್ತನೆಯ ಶತಮಾನ ಆದಿ ಭಾಗದಲ್ಲಿ ಆಧುನಿಕ ಕನ್ನಡ ಕಾವ್ಯ ತೆರೆದುಕೊಳ್ಳುತ್ತದೆ. ಇಂಗ್ಲಿಷಿನ ರೊಮ್ಯಾಂಟಿಸಂ ಪ್ರಭಾವ ನಮ್ಮ ಕನ್ನಡ ಕವಿಗಳ ಮೇಲೆ ಪರಿಣಾಮ ಬೀರಿ ನವೋದಯ ಕಾವ್ಯದ ಸೃಷ್ಟಿಗೆ ಕಾರಣವಾಯಿತು. ನವೋದಯ ಕಾವ್ಯ ಈ ನೆಲದ ಗುಣವನ್ನು ಎಲ್ಲಿಯೂ ಬಿಟ್ಟುಕೊಟ್ಟಿಲ್ಲ, ದೇಸಿಪ್ರಜ್ಞೆಯ ಪ್ರವಾಹದ ಆಂತರ್ಯವನ್ನು ಲೇಖಕರು ತಮ್ಮ ಸಂಶೋಧನೆಯಲ್ಲಿ ಕಂಡುಕೊಂಡಿದ್ದಾರೆ. ಆದರೆ ಪಾಶ್ಚಿಮಾತ್ಯರು ನಮ್ಮನ್ನು ಅರ್ಥ ಮಾಡಿಕೊಂಡಿದ್ದೇ ಬೇರೆ ರೀತಿಯಲ್ಲಿ ಎಂಬ ಸತ್ಯವನ್ನು ಲೇಖಕರು ಹೇಳುತ್ತಾರೆ. ನಮ್ಮಲ್ಲಿರುವ ಜೀವ ದ್ರವ್ಯವಾಗಿರುವ ಚಾರಿತ್ರಿಕ ಪ್ರಜ್ಞೆ, ವಿಪುಲವಾಗಿರುವ ದೇಶೀಯ ಪ್ರತಿಭೆಗಳು, ಮೇಲುನೋಟಕ್ಕೆ ಹೊಳೆಯಲಿಲ್ಲ. ಆದರೆ ಕಾವ್ಯವನ್ನು ಬಗೆಯುವ ಕ್ರಮವನ್ನು ಜ್ಞಾನ ಶಿಸ್ತುಗಳ ಮೂಲಕ ಅಧ್ಯಯನ ನಡೆಸಿದಾಗ ಮಾತ್ರ ಅಂತಹ ಬಿಕ್ಕಟ್ಟುಗಳು ಬಿಚ್ಚಿಕೊಳ್ಳುತ್ತವೆ. ಈ ನೆಲೆಗಟ್ಟಿನ ಒಳಗೆ ಡಿ. ಆರ್. ಎನ್. ರ ಬರವಣಿಗೆಗಳು ಗೆದ್ದು ಬರುತ್ತವೆ.

ನವೋದಯದ ಕವಿಗಳು ಪ್ರಕೃತಿ ಆರಾಧಕರು ಎಂದು ನಾವುಗಳು ನಂಬಿಕೊಂಡು ಬಂದಿದ್ದಕ್ಕಿಂತ ಭಿನ್ನವಾಗಿ ಕಾವ್ಯದ ಹೊಸ ಹೊಳಹನ್ನು ನೀಡುತ್ತಾರೆ. ರೊಮ್ಯಾಂಟಿಕ್ ಕಾವ್ಯ ಮತ್ತು ಕನ್ನಡದ ನವೋದಯದ ಪ್ರಕೃತಿ ದರ್ಶನದ ಅರಿವಾಗುವುದು ಎರಡರ ತೌಲನಿಕ ಅಧ್ಯಯನದ ಮೊದಲ ಹಂತವು ಎರಡೂ ಕಾವ್ಯ ಮಾರ್ಗಗಳ ಚಾರಿತ್ರಿಕ ಸತ್ವದ ಚರ್ಚೆಯಿಂದಲೇ ಪ್ರಾರಂಭವಾಗಬೇಕು ಎನ್ನುವ ಅವರು ಕಾವ್ಯವೆಂಬ ಸಂಸ್ಥೆಗೆ ಎಷ್ಟೇ ಸ್ವಾಯತ್ತತೆ ಇದ್ದರೂ, ಅದು ಮೂಲತಃ ಚರಿತ್ರೆಯ ಕೂಸೇ ಎಂಬ ನಿರ್ಣಯವನ್ನು ಅವರ ಬರಹದಲ್ಲಿ ಕಾಣಿಸುತ್ತಾರೆ.

ಚರಿತ್ರೆಯ ಗರ್ಭದೊಳಗೆ ವರ್ತಮಾನ, ವರ್ತಮಾನದ ಗರ್ಭದೊಳಗೆ ಭವಿಷ್ಯತ್ ಅಡಗಿರುತ್ತದೆ ಎಂಬುದು ಚರಿತ್ರೆಯ ಜ್ಞಾನಶಾಖೆಯಿಂದ ತಿಳಿದುಬರುವ ಅಂಶವಾಗಿದೆ. ಹಾಗಾಗಿ ಒಂದು ಕಾವ್ಯದ ಹುಟ್ಟು, ಚರಿತ್ರೆಯ ಪ್ರಜ್ಞಾ ಪ್ರವಾಹದಲ್ಲಿ ಮಿಂದು ಬಂದಿರುತ್ತದೆ ಎಂಬ ಗ್ರಹಿಕೆ ಅವರ ಕೃತಿಯಲ್ಲಿ ಕಾಣಬಹುದಾಗಿದೆ.

ಭಾರತದ ಬದುಕಿನಲ್ಲಿ ಉಂಟಾದ ಹೊಸ ಜಾಗೃತಿಯ ಮೂಲ ಪ್ರೇರಣೆ ಎಂದರೆ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಎಂಬುದನ್ನು ವಿಶದೀಕರಿಸುವ ಅವರು ವಸಾಹತುಶಾಹಿ ಅನುಕರಣೆಯ ಅಂಶವೆಷ್ಟು, ತಮ್ಮ ಸಂಸ್ಕೃತಿಯ ಪುನರ್‌ಮೌಲ್ಯೀಕರಣದ ಅಸಲೀ ಪ್ರಯತ್ನವೆಷ್ಟು ಎಂಬುದನ್ನು ಸೂಕ್ಷ್ಮವಾಗಿ ವಿಶ್ಲೇಷಿಸಬೇಕೆಂದು ಹೇಳುತ್ತಾ ತೀವ್ರ ಕುತೂಹಲ ಮೂಡಿಸುತ್ತಾರೆ. ಈ ವಿಚಾರ ಕುರಿತಂತೆ ಅಧ್ಯಯನಶೀಲರಾಗುವಂತೆ ಅವರ ಕೃತಿ ಪ್ರೇರೇಪಿಸುತ್ತದೆ.

ಈ ಮೇಲಿನ ಮಾತನ್ನು ಹೇಳುವಾಗ ಅವರು ಬಹಳ ಎಚ್ಚರಿಕೆ ವಹಿಸಿದ್ದಾರೆ. ನಮ್ಮ ಸಂಸ್ಕೃತಿ ಪುನರ್‌ಮೌಲ್ಯೀಕರಣದ ಸತ್ಯಗಳನ್ನು ಹೊರ ತೆಗೆಯಲು, ವಿವಿಧ ಜ್ಞಾನ ಶಾಖೆಗಳ ಮೂಲಕ ಹೆಕ್ಕಿ ತೆಗೆಯಲು ಮುನ್ಸೂಚನೆಯನ್ನು ತಮ್ಮ ಕೃತಿಯಲ್ಲಿ ಕೊಟ್ಟಿದ್ದಾರೆ.

ನಮ್ಮ ನೆಲದ ಕಾವ್ಯ ಸತ್ವವನ್ನು, ಈ ನೆಲದ ಜೀವದ್ರವ್ಯವಾದ ಸಂಸ್ಕೃತಿ ಮತ್ತು ಚಾರಿತ್ರಿಕತೆಯ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ನೋಡುವ ಕ್ರಮ ಅವರ ಕೃತಿಯಲ್ಲಿ ಕಾಣುತ್ತೇವೆ. ಮನುಷ್ಯನ ಮೂಲಭೂತ ಸಮಸ್ಯೆಗಳಾದ ಭೂಮಿ, ಕಾಲ, ಕಾಮ, ಸಮಾಜ ಕುರಿತಂತೆ ತಮ್ಮ ಸಂಪ್ರಬಂಧದಲ್ಲಿ ಮಂಡಿಸಿರುವುದನ್ನು ನಾವು ಕಾಣಬಹುದು.

ಭೂಮಿಯನ್ನು ಕುರಿತು ಪ್ರಾತಿನಿಧಿಕ ಕನ್ನಡದ ಕವಿಗಳಾದ ಕುವೆಂಪು, ಬೇಂದ್ರೆ, ಕೆ. ಎಸ್. ನ., ಗೋಕಾಕ್ ಮುಂತಾದವರ ಕಾವ್ಯವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಿದ್ದಾರೆ. ಪ್ರಕೃತಿ ದರ್ಶನದಲ್ಲಿ ನಾವು ಹುಡುಕಬೇಕಾದದ್ದು ಹೊಸ ಮನುಷ್ಯನನ್ನು, ಪ್ರಕೃತಿ ದರ್ಶನದಲ್ಲಿ, ಕನ್ನಡ ನವೋದಯದಲ್ಲಿ ಆದದ್ದು ಕೂಡಾ ಹೀಗೆಯೇ ಎನ್ನುವ ಡಿ. ಆರ್. ಕುವೆಂಪು ಪ್ರಕೃತಿ ದರ್ಶನದ ಹಿಂದೆ ಸಂಕೀರ್ಣವಾದ ಅನೇಕ ಚಾರಿತ್ರಿಕ ಪ್ರಕ್ರಿಯೆಗಳ ಹೆಣಿಗೆಗಳು ಕೆಲಸ ಮಾಡಿದೆ ಎಂಬುದನ್ನು ಗುರುತಿಸುತ್ತಾರೆ.

ಸಮನ್ವಯ ಕವಿಗಳೆಂದೇ ಹೆಸರಾಗಿರುವ ಚೆನ್ನವೀರ ಕಣವಿ,

ಕೂಡ್ಲಿಗೆರೆ ಮಲ್ಲಿಕಾರ್ಜುನ

ಜಿ. ಎಸ್. ಶಿವರುದ್ರಪ್ಪ ಅವರನ್ನು ವಿಶ್ಲೇಷಿಸಿದ ಬಗೆಯೇ ವಿಶೇಷವಾಗಿದೆ. ಸಂಪ್ರದಾಯವಾದಿಗಳು ಮತ್ತು ಪ್ರಗತಿಪರರು, ಈ ಇಬ್ಬರಿಗಿಂತಲೂ ಉದಾರವಾದಿ ಕವಿ ಭಿನ್ನ ಎಂದು ಗುರುತಿಸುತ್ತಾರೆ. ಸಮನ್ವಯ ಕವಿಗಳು ಮಾನವತಾವಾದಿ ಪಂಥದಿಂದಾಗಿ ಉಳಿದ ತಾತ್ವಿಕ ಮಾರ್ಗದ ಕವಿಗಳಿಗಿಂತ ಬೇರೆಯ ಹಾದಿಯನ್ನು ತುಳಿದವರು ಎಂಬುದು ಅವರ ನಿಲುವು.

ನವ್ಯ ಸಾಹಿತ್ಯ ಪ್ರಕಾರದ ಪ್ರಮುಖ ಕವಿಗಳಲ್ಲಿ ಗೋಪಾಲಕೃಷ್ಣ ಅಡಿಗ ಮತ್ತು ವಿನಾಯಕ ಕೃಷ್ಣ ಗೋಕಾಕ ಸೇರಿದ್ದಾರೆ. ಈ ಇಬ್ಬರು ಕವಿಗಳು ನವ್ಯ ಕಾವ್ಯದ ಆರಂಭಘಟ್ಟದಲ್ಲಿ ತೀವ್ರವಾಗಿ ಸ್ಪಂದಿಸಿ ಬರೆದವರು. ಅಡಿಗರ ಕಾವ್ಯದ ಪ್ರಮುಖ ಅನುಭವವೆಂದರೆ ಪ್ರಖರ ವಾಸ್ತವತಾ ವಾದೀ ಬೌದ್ಧಿಕತೆ, ಮಾತು ಸ್ಪಟಿಕದ ಶಲಾಕೆಯಾಗಿ, ಆದರೆ ತರ್ಕದಿಂದಲ್ಲ, ತೀವ್ರತೆಯೊಂದಿಗೆ ಕಾವ್ಯ ವಿಜ್ರಂಭಿಸುತ್ತದೆ. ಆದರೆ ವಿನಾಯಕರ ಕಾವ್ಯದ ಮುಖ್ಯ ಅನುಭವವಿರುವುದು ದರ್ಶನದಲ್ಲಿ ಎಂದು ಡಿ. ಆರ್. ನಾಗರಾಜ್ ವಿಶ್ಲೇಷಿಸುತ್ತಾರೆ.

ಕಾಲ ಎಂಬ ಅಧ್ಯಾಯದಲ್ಲಿ, ಕಾಲಕ್ಕೆ ಒಂದು ಚಾರಿತ್ರಿಕ ನೋಟವನ್ನಿಟ್ಟುಕೊಂಡು ನೋಡಿರುವ ಬಗೆಯನ್ನು ಗಮನಿಸಬಹುದು. ಕನ್ನಡದ ಪ್ರಮುಖ ಕಾವ್ಯಗಳನ್ನು ಇಲ್ಲಿ ಪರೀಕ್ಷೆಗೆ ಒಳಪಡಿಸಿರುವುದು ಒಂದು ವಿಶೇಷ. ಕಾಲವೆಂಬುದು ಅಮೂರ್ತ, ಕುವೆಂಪು ಕೂಡ ಕಾಲದ ಬಗ್ಗೆ ಪ್ರತಿಕ್ರಿಯಿಸಿರುವ ರೀತಿಯನ್ನು ಮೇಲಿನ ಆಳವಾದ ತಾತ್ವಿಕ ಪ್ರಭಾವವಾದ ಅದ್ವೈತಕ್ಕೆ ಸಂಬಂಧಿಸಿಯೇ ಅರ್ಥ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯಪಟ್ಟು ಓದುಗರನ್ನು ಚಿಂತನೆಗೆ ಹಚ್ಚುತ್ತಾರೆ. ಕುವೆಂಪು ಅವರ ಕಾವ್ಯದಲ್ಲಿ ಕಾಲನ ಕುರಿತಂತೆ ಅರ್ಥೈಸಿಕೊಳ್ಳುವ, ವ್ಯಾಖ್ಯಾನಿಸಿಕೊಳ್ಳುವ ಬಗೆಯನ್ನು ಅವರ ಕೃತಿಯಲ್ಲಿ ಕಾಣುತ್ತೇವೆ.

ನಿರ್ದಿಷ್ಟವಾಗಿ ಕಾಲದ ಬಗ್ಗೆ ಕಾವ್ಯವನ್ನು ಸಾಕಷ್ಟು ಪ್ರಮಾಣದಲ್ಲಿ ಕುವೆಂಪು ಅವರು ರಚಿಸಿಲ್ಲ. ಹಾಗೆಯೇ ಬೇಂದ್ರೆಯವರು ಸಹ. ಆದರೆ ಬೇಂದ್ರೆಯವರ ಕಾವ್ಯ ದಲ್ಲಿ ಕಾಲವನ್ನು ನೋಡುವ ಬಗೆಯನ್ನು ಬೇರೆಯದಾಗಿ ಅವರು ಗುರುತಿಸುತ್ತಾರೆ. ''ಬೇಂದ್ರೆಯವರ ಕಾವ್ಯದಲ್ಲಿ ಕಾಲದ ವಸ್ತು ಮತ್ತು ಪರಿಕಲ್ಪನೆಗಳನ್ನು ಪರೀಕ್ಷಿಸುವ ವಿಮರ್ಶಕ ಎಂಪಿರಿಕಲ್ ವಿಧಾನಗಳಿಗೆ ಶರಣು ಹೋಗಬೇಕಾಗುತ್ತದೆ'' ಎನ್ನುತ್ತಾರೆ.

ಇವರಿಬ್ಬರಿಗಿಂತ ಭಿನ್ನವಾಗಿ ಕಾಲವನ್ನು ಕುರಿತಂತೆ ಬರೆದ ಕವಿ ಗಂಗಾಧರ ಚಿತ್ತಾಲರು. ಕವಿ ಬದುಕುತ್ತಿದ್ದ ಕಾಲ ಮತ್ತು ಕವಿಗೆ ಕಾವ್ಯ ರಚನೆಯಲ್ಲಿದ್ದ ಸಾಂಸ್ಕೃತಿಕ ಒತ್ತಡಗಳನ್ನು ಈ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಕವಿಯ ಜೀವಿತಕಾಲದಲ್ಲಿ ಘಟಿಸಿದ ಘಟನೆಯನ್ನು ನೋಡಿ ಅದಕ್ಕೆ ಸ್ಪಂದಿಸಿದ ರೀತಿಯನ್ನು ಕೃತಿಯಲ್ಲಿ ಗುರುತಿಸಿದ್ದಾರೆ. ಎರಡನೇ ಮಹಾ ಯುದ್ಧದ ದಟ್ಟ ನೆರಳಿನಲ್ಲಿ ಬುದ್ಧಿಜೀವಿಗಳ ಮಟ್ಟಿಗೆ ಜಗತ್ತು ತೀರಾ ಚಿಕ್ಕದೆನಿಸ ತೊಡಗಿದ್ದು ಆಗಲೇ. ತಮ್ಮ ಸೀಮಿತ ರಾಷ್ಟ್ರೀಯ ವ್ಯಕ್ತಿತ್ವದಾಚೆಗೂ ಬೌದ್ಧಿಕವಾಗಿ ಬುದ್ಧಿಜೀವಿಗಳು ಪ್ರತಿಸ್ಪಂದಿಸತೊಡಗಿದ್ದರು. ಯುದ್ಧ, ಕಗ್ಗತ್ತಲು, ಹೊಗೆ, ಸಾವು-ನೋವುಗಳು ಲೋಕವನ್ನು ಆವರಿಸಿದ್ದ ಸ್ಥಿತಿಯಲ್ಲಿ ಹೊರಟ ದನಿಗಳಾಗಿದ್ದವು. ಇಂತಹ ಸಂದರ್ಭದಲ್ಲಿ ಚಿತ್ತಾಲರು ಕಾವ್ಯವನ್ನು ಬರೆಯ ತೊಡಗಿದರು. ಇಂತಹ ಅಂಶಗಳು ಒಬ್ಬ ಸೂಕ್ಷ್ಮಗ್ರಾಹಿ ಕವಿಯ ಮನಸ್ಸಿನ ಮೇಲೆ ದಟ್ಟ ಪ್ರಭಾವ ಬೀರದೆ ಇರಲಾರದು.

ಸಮನ್ವಯ ಕವಿ ಚನ್ನವೀರ ಕಣವಿಯವರು ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಸಾಹಿತ್ಯ ಚಳವಳಿಗಳನ್ನು ಕಂಡುಬಂದವರು. ಇಂತಹ ದಟ್ಟ ಚಳವಳಿಯ ಪ್ರಭಾವದ ನಡುವೆಯ ಸಮನ್ವಯತೆನ್ನು ಕಾಪಾಡಿಕೊಂಡು ಬಂದ ಕವಿಗಳು ಅವರು. ಕಣವಿಯವರನ್ನು ಕುರಿತು ಡಿ. ಆರ್. ನಾಗರಾಜರು ಹೇಳುವ ಮಾತು ಗಮನಾರ್ಹವಾಗಿದೆ. ಒಂದು ಶಕ್ತಿಶಾಲೀ ಕಾವ್ಯ ಚಳವಳಿಯ ಹಿನ್ನೆಲೆಯಲ್ಲಿ ಬೆಳೆದು, ಅದರಿಂದಾಚೆಗೆ ಬೆಳೆಯುವ ಸಾಮರ್ಥ್ಯವನ್ನು ಕವಿ ಕಣವಿಯವರು ಬೆಳೆಸಿ ಕೊಂಡ ಕ್ರಮವನ್ನು ಕುರಿತು ಕನ್ನಡ ವಿಮರ್ಶೆ ಇನ್ನೂ ಸೂಕ್ಷ್ಮವಾಗಿ ಚಿಂತಿಸಬೇಕಾಗಿದೆ ಎಂದು ತಮ್ಮ ಕೃತಿಯಲ್ಲಿ ಸೂಚಿಸುತ್ತಾರೆ. ತಮ್ಮ ಮಾತನ್ನು ಮುಂದುವರೆಸುತ್ತಾ ಕಣವಿಯವರಲ್ಲಿ ದಟ್ಟವಾದ ಆದರ್ಶವಾದವನ್ನು ನೀಡುವುದರ ಮೂಲಕ, ಸರಳ, ಉತ್ಸಾಹ ಮತ್ತು ಸುಲಭ ಪರಿವರ್ತನಶೀಲತೆಯನ್ನು ಮೀರಿದ ಸುಭದ್ರ ನೆಲೆಯ ಈ ಆದರ್ಶವಾದವನ್ನು ಕಣವಿಯವರ ಕಾವ್ಯ ಜೀವನದುದ್ದಕ್ಕೂ ಅವರನ್ನು ಕಾಪಾಡಿದ ಒಂದು ಶಕ್ತಿಯಾಯಿತು ಎಂದು ಕವಿ ಕಣವಿಯನ್ನು ನಿರ್ದಿಷ್ಟವಾಗಿ ಕೃತಿಯಲ್ಲಿ ಗುರುತಿಸುತ್ತಾರೆ.

ಕಾಮ ಎಂಬ ವಸ್ತುವನ್ನೊಳಗೊಂಡ ಅಧ್ಯಾಯದಲ್ಲಿ ಪಾಶ್ಚಾತ್ಯರ ಚಿಂತನೆ ಮತ್ತು ನಮ್ಮ ನೆಲದ ಚಿಂತನೆಯ ಕುಲುಮೆಯಲ್ಲಿ ಪರಿಶುದ್ಧಗೊಂಡು ಕೃತಿ ವಿಶ್ಲೇಷಿಸಿರುವುದನ್ನು ಕಾಣಬಹುದಾಗಿದೆ. ಇಂತಹ ವಿಸ್ತೃತ ವಸ್ತುವನ್ನು ಆಧುನಿಕ ಕನ್ನಡ ಕಾವ್ಯದ ಪರಿಣಾಮ ಬೀರಿ, ಅದರ ಹಿಂದಕ್ಕೆ ಸರಿದು ಚಾರಿತ್ರಿಕ ನೆಲೆಯಲ್ಲಿ ಭಾರತೀಯ ತತ್ವಚಿಂತಕರ ದೃಷ್ಟಿಕೋನ ಗುರುತಿಸುತ್ತಾ ಹೋಗುವುದನ್ನು ಅವರ ಕೃತಿಯಲ್ಲಿ ಕಾಣಬಹುದು. ಅಲ್ಲಿ ಅವರ ಚಿಂತನಜ್ಞಾನ ಶಾಖೆಯ ಮೂಲಕ ಈ ವಸ್ತು ಚರ್ಚಿತವಾಗುತ್ತದೆ.

ಜೀವ ಕಾಮದ ಶಕ್ತಿ ಎದುರಾದಾಗ ಉಂಟಾಗುವ ತಲ್ಲಣಗಳು ಸಂಕಟಗಳು ಈಗ ಇಲ್ಲವಾಗಿವೆ. ಧಾರ್ಮಿಕ ಕಾವ್ಯದ ದೊಡ್ಡ ಮಿತಿ ಕೂಡ ಸ್ಪಷ್ಟವಾಗುವುದು ಇಲ್ಲಿಯೆ. ಅಥವಾ ಧರ್ಮ ಮತ್ತು ಕಾವ್ಯ, ಸಾಹಿತ್ಯ ನಡುವಿನ ವ್ಯತ್ಯಾಸ ಕೂಡ ಅರ್ಥವಾಗುವುದು ಇಲ್ಲಿಯೇ. ಧರ್ಮಕ್ಕೆ ಪಾವಿತ್ರ್ಯದ ಹುಚ್ಚು, ಕಾವ್ಯಕ್ಕೆ ಪಾಪದ ಹುಚ್ಚು. ಕಾವ್ಯಕ್ಕೆ ವ್ಯಾಮೋಹಿಗಳ ರಾಗದ್ವೇಷಕ್ಕೆ ಸಿಕ್ಕುವುದರಲ್ಲೇ ಸುಖ ಕಾಣುವ ಮಂದಿಯ ನಡುವೆ ಕೆಲಸ. ಧರ್ಮಶುದ್ಧವಾದದ್ದರ ಕಡೆಗೆ ಮುಖ ಮಾಡಿದರೆ, ಕಾವ್ಯ ಅಶುದ್ಧದ ಗರ್ಭದಿಂದ ಹುಟ್ಟುತ್ತದೆ ಎಂಬ ಚಿಂತನೆ ಕೃತಿಯಲ್ಲಿ ಕಾಣಬಹುದಾಗಿದೆ.

ಡಿ. ಆರ್. ನಾಗರಾಜರು ಕಾಮ ಎಂಬ ವಸ್ತುವನ್ನು ಸಮಾಜದ ರೂಪಕ ಎಂದು ಕರೆದಿರುವುದು ಅವರ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ. ಈ ಹಿನ್ನೆಲೆಯಲ್ಲಿ ಪು.ತಿ.ನ.ರ ಅಹಲ್ಯೆಯನ್ನು ವಿಶ್ಲೇಷಿಸಿದ್ದಾರೆ. ಕುವೆಂಪು, ಬೇಂದ್ರೆ, ಚಂದ್ರಶೇಖರ ಕಂಬಾರ, ರಾಮಚಂದ್ರಶರ್ಮ, ಎಚ್. ಎಂ. ಚೆನ್ನಯ್ಯ ಮುಂತಾದವರ ಪ್ರಾತಿನಿಧಿಕ ಕಾವ್ಯವನ್ನು ಈ ಅಧ್ಯಾಯದಲ್ಲಿ ಚರ್ಚೆ ಮಾಡಿದ್ದಾರೆ.

'ಆಧುನಿಕ ಕನ್ನಡ ಕಾವ್ಯದಲ್ಲಿ ಸಮಾಜದ ವಿವಿಧ ಆಯಾಮಗಳು' ಎಂಬ ಅಧ್ಯಾಯದಲ್ಲಿ ಆಧುನಿಕ ಕನ್ನಡ ಕಾವ್ಯದಲ್ಲಿ ಸಮಾಜ ಮತ್ತು ಮನುಷ್ಯನ ಸಂಬಂಧ ಗಳನ್ನು ತಮ್ಮ ಕೃತಿಯಲ್ಲಿ ಗುರುತಿಸುತ್ತಾರೆ. ಸಮಾಜದ ಬಗೆಗಿನ ಗ್ರಹಿಕೆಗಳ ಹಿಂದಿನ ತಾತ್ವಿಕ ವ್ಯವಸ್ಥೆಗಳ ಸ್ವರೂಪವನ್ನು ಇಡೀ ಅಧ್ಯಾಯದಲ್ಲಿ ಚರ್ಚೆಗೆ ಒಡ್ಡುತ್ತಾರೆ.

ಅವರ ದೃಷ್ಟಿಕೋನದಲ್ಲಿ ಕಾವ್ಯವೊಂದರಲ್ಲಿ ಕಂಡುಬರುವ ಸಮಾಜದ ಪರಿಕಲ್ಪನೆಗಳು, ಚಾರಿತ್ರಿಕ ಅನುಭವಗಳು ಆಯಾ ಸಮಾಜದ ನಿರ್ದಿಷ್ಟ ಶ್ರೇಣೀಕರಣಗಳ ಅನುಭವದಿಂದ ನಿಯಂತ್ರಿತವಾಗುತ್ತವೆ. ತಮ್ಮ ಅನುಭವಕ್ಕೆ ಸಿಕ್ಕಷ್ಟು ಮಾತ್ರ ಆಯಾ ಶ್ರೇಣೀಕರಣಗಳು ಸಾಹಿತ್ಯದಲ್ಲಿ ಪ್ರಕಟಿಸುತ್ತವೆ ಎಂಬ ಸತ್ಯವನ್ನು ಅವರ ಕೃತಿಯಲ್ಲಿ ಕಾಣಬಹುದಾಗಿದೆ.

ಒಟ್ಟಾರೆಯಾಗಿ ಈ ಕೃತಿಯಲ್ಲಿ ನಾಲ್ಕು ವಸ್ತುಗಳನ್ನೊಳಗೊಂಡ ಆಧುನಿಕ ಕನ್ನಡ ಕಾವ್ಯವನ್ನು ನೋಡಿರುವ ರೀತಿ ಹೊಸ ಬಗೆಯದು. ಕೃತಿಯನ್ನು ಓದಿದ ಪ್ರತಿಯೊಬ್ಬ ರನ್ನೂ ಹೊಸ ಆಲೋಚನೆಗೆ ಹಚ್ಚುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಇತರೆ ಜ್ಞಾನಶಾಖೆಗಳ ಮೂಲಕ ಕಾವ್ಯವನ್ನು ಅಧ್ಯಯನ ಮಾಡಬಹುದು ಎಂದು ತೋರಿಸಿ ಕೊಟ್ಟ ಕೃತಿ ಇದಾಗಿದೆ. ಚಾರಿತ್ರಿಕ ಹಾಗೂ ತಾತ್ವಿಕ ಪ್ರೇರಣೆಗಳನ್ನು ಗುರುತಿಸಿರು ವುದರಿಂದ ಒಂದು ದೊಡ್ಡ ಚಿಂತನೆಗೆ ಈ ಕೃತಿ ಅವಕಾಶ ಮಾಡಿಕೊಡುತ್ತದೆ. ಕಾವ್ಯದ ಗ್ರಹಿಕೆಗಳನ್ನು ಸಮರ್ಥವಾಗಿ ಮಂಡಿಸಿರುವುದು, ಯಾವುದೇ ತಾರತಮ್ಯದ ಭೇದ ಭಾವ ಎಣಿಸದೆ ಎಚ್ಚರದಿಂದಲೇ ವ್ಯಾಖ್ಯಾನಿಸಿರುವುದು ಈ ಕೃತಿಯ ವಿಶೇಷವಾಗಿದೆ. ಕಾವ್ಯಾನುಭವಕ್ಕೆ, ಸಂಕೀರ್ಣತೆ-ಸಮಗ್ರತೆಗೆ ಎಲ್ಲಿಯೂ ಧಕ್ಕೆಬಾರದಂತೆ ವಿವೇಚಿಸಿರು ವುದನ್ನು ಇಲ್ಲಿ ಕಾಣಬಹುದಾಗಿದೆ. ಸಂಸ್ಕೃತಿ ಕೇಂದ್ರಿತ ವಿಶ್ಲೇಷಣೆಯನ್ನು ಈ ಕೃತಿ ಒಳಗೊಂಡಿದೆ. ಆಧುನಿಕ ಕನ್ನಡ ಕಾವ್ಯ ಕುರಿತ ಶ್ರೀ ಡಿ. ಆರ್. ನಾಗರಾಜರ ಶಕ್ತಿ ಶಾರದೆಯ ಮೇಲ ಸಂಶೋಧನಾ ಕ್ಷೇತ್ರದಲ್ಲಿ ಒಂದು ಮೈಲುಗಲ್ಲಾಗಿದೆ.

ಕೂಡ್ಲಿಗೆರೆ ಮಲ್ಲಿಕಾರ್ಜುನ
೧೮/೧, ಎರಡನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಮಕ್ಕಳಿಗೆ ಪುಷ್ಟಿಕರ ಆಹಾರ

ಮಕ್ಕಳ ಆಹಾರವನ್ನು ಕೇವಲ ಹಾಲು ಸೇವನೆಯ ಘಟ್ಟ, ಹಾಲಿನೊಡನೆ ಮೃದುವಾದ ಅಲ್ಪ ಘನಾಹಾರವನ್ನೂ ಆರಂಭಿಸುವ ಘಟ್ಟ ಮತ್ತು ಘನಾಹಾರ, ದ್ರವಾಹಾರಗಳೆಲ್ಲವನ್ನೂ ನೀಡುವ ಘಟ್ಟವೆಂದು ಮೂರು ವಿಭಾಗ ಮಾಡಬೇಕು. ನವಜಾತ ಶಿಶುಗಳಿಗೆ ತಾಯಿಯ ಹಾಲೇ ಶ್ರೇಷ್ಠವಾದುದು. ತಾಯಿಹಾಲಿಗಿಂತ ಉತ್ಕೃಷ್ಟವಾದುದು ಬೇರೊಂದಿಲ್ಲ. ನವಜಾತ ಶಿಶುಗಳಿಗೆ ನಿದ್ದೆ ಹೆಚ್ಚಿರುವುದರಿಂದ ಎರಡು ಮೂರು ತಿಂಗಳವರೆಗೂ ಎರಡು-ಎರಡೂವರೆ ಗಂಟೆಗೊಮ್ಮೆ ಹಾಲುಣಿಸುತ್ತ ನಂತರ ಅಂತರವನ್ನು ಮೂರು ಗಂಟೆಗೇರಿಸಬಹುದು. ಜಾಹೀರಾತುಗಳಲ್ಲಿ ದಷ್ಟಪುಷ್ಟ ಮಕ್ಕಳ ಚಿತ್ರ ತೋರಿಸುವುದನ್ನು ನೋಡಿ ತಮ್ಮ ಮಕ್ಕಳು ಹಾಗೆಯೇ ಆಗಬೇಕೆಂದು ಕೃತ್ರಿಮ ಡಬ್ಬದ ಆಹಾರಕ್ಕೆ ಮೊರೆಹೋಗಬಾರದು. ಅಂತಹ ಕೃತ್ರಿಮ ಆಹಾರಗಳಲ್ಲಿ ರುಚಿಗೆ, ಬಣ್ಣಕ್ಕೆ, ಪರಿಮಳಕ್ಕೆಂದು ಸೇರಿಸಿದ ಅಂಶಗಳೂ ರಾಸಾಯನಿಕ ಮೂಲದವಾಗಿದ್ದು ಅವುಗಳಲ್ಲಿ ಮಕ್ಕಳ ಎಳೆಯ ಜೀರ್ಣಾಂಗಗಳಿಗೆ ಒಗ್ಗದ ಅಂಶಗಳಿರುವುವೆಂದು ತಿಳಿದುಬಂದಿದೆ. ಆದ್ದರಿಂದ ಅಂತಹವುಗಳನ್ನು ತಿನ್ನಿಸಲಾರಂಭಿಸಿದರೆ ಮಕ್ಕಳು ರೋಗಪೀಡಿತರಾಗುವ ಸಂಭವವಿರುತ್ತದೆ. ಮಗು ತೆಳ್ಳಗಿದೆಯೆಂದು ಚಿಂತಿಸಬಾರದು. ಅದು ಚಟುವಟಿಕೆಯಿಂದ ಆರೋಗ್ಯಕರವಾಗಿರುವುದು ಬಹುಮುಖ್ಯ. ಮಗುವಿನ ಆರೋಗ್ಯ ಬಯಸುವ ತಾಯಂದಿರು ನೈಸರ್ಗಿಕ ಹಾಲು ಮತ್ತು ನೈಸರ್ಗಿಕ ಆಹಾರಪೇಯಗಳನ್ನೇ ನೀಡಬೇಕು.

ಪಚನಕ್ಕೆ ಸುಲಭವಾದ, ರುಚಿಕರವಾದ, ಸೌಮ್ಯವಾದ ಆಹಾರಗಳನ್ನೇ ನೀಡಬೇಕು. ಮಗುವಿಗೆ ಎರಡು ತಿಂಗಳು ತುಂಬಿದ ಮೇಲೆ ಸಿಹಿಯಾದ ಮೋಸಂಬಿ ರಸ ಇಲ್ಲವೇ ಒಣ ದ್ರಾಕ್ಷಿಯನ್ನು ಚೆನ್ನಾಗಿ ತೊಳೆದು ಬಿಸಿನೀರಿನಲ್ಲಿ ಕಿವುಚಿದ ರಸವನ್ನು ಸಕ್ಕರೆ ಬೆರೆಸದೇ ಒಂದು ಚಮಚೆಯಷ್ಟು ನೀಡಬೇಕು. ನಾಲ್ಕು ತಿಂಗಳು ತುಂಬಿದಾಗ ತರಕಾರಿಗಳನ್ನು ಬೇಯಿಸಿದ ನೀರನ್ನು ನೀಡುವುದಕ್ಕೆ ಆರಂಭಿಸಬೇಕು. ಇವು ನೈಸರ್ಗಿಕ ವಿಟಮಿನ್‌ಗಳಂತೆ ಕೆಲಸ ಮಾಡುತ್ತವೆ. ಐದು ತಿಂಗಳು ತುಂಬಿದ ಮಗುವಿಗೆ ಅಕ್ಕಿ, ಗೋಧಿ, ರಾಗಿ, ಹೆಸರುಕಾಳು ಇವುಗಳನ್ನು ಸಮ ಭಾಗ ತೆಗೆದುಕೊಂಡು ಬೇರೆ ಬೇರೆಯಾಗಿ ತೊಳೆದು ಬಿಸಿಲಿನಲ್ಲಿ ಒಣಗಿಸಿಕೊಂಡು ನಂತರ ಪ್ರತಿಯೊಂದನ್ನೂ ಕೆಂಪಗೆ ಹುರಿಯಬೇಕು. ಎಲ್ಲವನ್ನೂ ಸೇರಿಸಿ ನುಣ್ಣಗೆ ಪುಡಿ ಮಾಡಿಕೊಳ್ಳಬೇಕು. ಈ ಹಿಟ್ಟನ್ನು ಒಂದಕ್ಕೆ ಎರಡರಷ್ಟು ಪ್ರಮಾಣದ ನೀರಿನಲ್ಲಿ ಬೇಯಿಸಿ ರುಚಿಗೆ ಸ್ವಲ್ಪ ಉಪ್ಪು, ತುಪ್ಪ ಬೆರೆಸಿ ಗಂಜಿಯಂತೆ ಮಾಡಿ ಮಗುವಿಗೆ ತಿನ್ನಿಸಬೇಕು.

ಮಗುವಿಗೆ ಆರು ತಿಂಗಳಾದಾಗ ಇದೇ ರೀತಿ ಸ್ವಲ್ಪ ಗಟ್ಟಿಯಾಗಿ ಮಾಡಿ ಅದಕ್ಕೆ ಸುಲಭವಾಗಿ ಪಚನವಾಗುವ ಬೇಯಿಸಿದ ತರಕಾರಿಗಳನ್ನು ಚೆನ್ನಾಗಿ ಬೆರೆಸಿ ತಿನ್ನಿಸಬೇಕು. ಎಂಟು ತಿಂಗಳು ತುಂಬಿದ ನಂತರ ಪಾಲಿಶ್ ಮಾಡದಿರುವ ಅಕ್ಕಿಯ ಮೆದುವಾದ ಅನ್ನ ತಿನ್ನಿಸಲು ಆರಂಭಿಸಬೇಕು. ನಂತರ ನಿಧಾನವಾಗಿ ಮೆತ್ತನೆಯ ದೋಸೆ, ತಿಳಿಸಾರು, ಚಪಾತಿ, ಇಡ್ಲಿ, ಮುದ್ದೆ, ರೊಟ್ಟಿ, ಹರಿವೆ, ಮೆಂತ್ಯ, ಬಸಳೆ ಸೊಪ್ಪುಗಳು, ಕ್ಯಾರೆಟ್, ಹೀರೇಕಾಯಿ, ಸೋರೆಕಾಯಿ, ಸೌತೆಕಾಯಿ, ಪಡವಲಕಾಯಿ, ಎಲೆಕೋಸು ಮುಂತಾದವುಗಳಿಂದ ಅತಿ ಕಡಿಮೆ ಉಪ್ಪು, ಖಾರ ಹಾಕಿ ತಯಾರಿಸಿದ ಪಲ್ಯಗಳನ್ನು ನೀಡಬೇಕು. ಸಿಹಿ ಮೊಸರು, ಬೆಣ್ಣೆ ಕಡೆದು ತೆಗೆದ ಸಿಹಿ ಮಜ್ಜಿಗೆ, ತುಪ್ಪ, ಬೆಣ್ಣೆ ಮುಂತಾದವುಗಳನ್ನು ಮಿತವಾಗಿ ನೀಡಲು ಆರಂಭಿಸಬೇಕು. ಸಿಹಿಯಾದ ದ್ರಾಕ್ಷಿ, ಸೀಬೆ, ಸೇಬು, ಪಪ್ಪಾಯ, ಮಾವು, ಬಾಳೆ, ಮೋಸಂಬಿ, ಖರ್ಜೂರದಂತಹ ಹಣ್ಣುಗಳನ್ನು ನೀಡಬೇಕು. ಜೀರ್ಣಕ್ಕೆ ಕಷ್ಟಕರವಾದ ಕಡಲೆಬೇಳೆ, ಅವರೆಬೇಳೆಗಳನ್ನು ಮಕ್ಕಳಿಗೆ ಎರಡು-ಮೂರು ವರ್ಷವಾಗುವವರೆಗೆ ಮಿತವಾಗಿ ನೀಡಬೇಕು. ಜೀರ್ಣಶಕ್ತಿ ಕಡಿಮೆಯಿರುವ ಮಕ್ಕಳಿಗೆ ನೀಡಬಾರದು. ಹಾಲು ಮತ್ತು ಸಿಹಿ ಹಣ್ಣಿನ ರಸಗಳು ಉತ್ತಮ ಪೇಯಗಳು. ಸಿಹಿಗಾಗಿ ಜೇನುತುಪ್ಪ, ಕಲ್ಲುಸಕ್ಕರೆ ಬೆರೆಸಬಹುದು.

ಎರಡು-ಮೂರು ವರ್ಷ ತುಂಬಿದ ಮಕ್ಕಳಿಗೆ ಮನೆಯಲ್ಲಿಯೇ ಬಾದಾಮಿ, ಗೋಡಂಬಿ, ಉತ್ತುತ್ತಿ, ಕಲ್ಲು ಸಕ್ಕರೆ, ಏಲಕ್ಕಿ, ಕೇಸರಿ ಯಂತಹವುಗಳನ್ನು ಪುಡಿ ಮಾಡಿಟ್ಟುಕೊಂಡು ಹಾಲಿನಲ್ಲಿ ಬೆರೆಸಿ ಕುಡಿಯಲು ಕೊಡಬೇಕು. ಅರಳುಹಿಟ್ಟು, ಕಡಲೆಬೀಜ, ಕಡಲೆಪುರಿ, ಅವಲಕ್ಕಿ, ಎಳ್ಳು, ಹುರಿಗಡಲೆ, ಗೋಧಿಹಿಟ್ಟು, ಹೆಸರುಹಿಟ್ಟು ಇವುಗಳನ್ನು ಹುರಿದು ಅದಕ್ಕೆ ಬೆಲ್ಲ, ತುಪ್ಪ ಸೇರಿಸಿ ತಯಾರಿಸಿದ ಉಂಡೆಗಳನ್ನು ಕೊಡಬೇಕು. ಸ್ವಲ್ಪ ಉಪ್ಪು, ಖಾರ ಹಾಕಿದ ಕಡಲೆಪುರಿ, ಅವಲಕ್ಕಿಯಂತಹ ತಿಂಡಿಗಳು ಮಕ್ಕಳಿಗೆ ರುಚಿಕರವೆನಿಸುತ್ತವೆ. ಇವು ಪುಷ್ಟಿಕರವಾಗಿದ್ದು, ಆರೋಗ್ಯಕರವಾಗಿರುವವು. ಇಂತಹ ಆಹಾರಗಳಲ್ಲಿ ಪ್ರೋಟೀನ್, ಖನಿಜ ಲವಣಗಳು, ವಿಟಮಿನ್‌ಗಳು ಇರುತ್ತವಾದ್ದರಿಂದ ಇವು ಸ್ನಾಯುಗಳಿಗೆ, ನರಮಂಡಲಕ್ಕೆ ಮತ್ತು ಮೂಳೆಗಳಿಗೆ ಬಲದಾಯಕವಾಗಿರುತ್ತವೆ. ಬುದ್ಧಿ, ಸ್ಮೃತಿ ಹೆಚ್ಚಿಸುವಂತಹವುಗಳಾಗಿದ್ದು ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತವೆ.

**ಆಹಾರ ಸೇವನಾ ಕ್ರಮ:** ಪ್ರತಿಯೊಂದು ತುತ್ತನ್ನು ೩೦-೪೦ ಸಲ ಅಗಿದು ತಿನ್ನುವ ಅಭ್ಯಾಸ ಬಾಲ್ಯದಲ್ಲೇ ಆರಂಭವಾಗಬೇಕು. ಬಾಯಿಯಲ್ಲಿನ ಜೊಲ್ಲುರಸವು ಉತ್ತಮ ಪಾಚಕ, ಮಲವಿಸರ್ಜಕ, ಶಾಮಕ ಗುಣವುಳ್ಳದ್ದಾಗಿದ್ದು ಅತಿಯಾದ ಆಹಾರ ಸೇವನೆಯ ಹಂಬಲವನ್ನು ತಪ್ಪಿಸುವುದಾಗಿದೆ.

ಯಾಮ ಮಧ್ಯೇ ನ ಭೋಕ್ತವ್ಯಂ<br>
ಯಾಮ ಯುಗ್ಮಂ ನ ಲಂಘಯೇತ್ ॥

ಎಂಬ ಸೂತ್ರದಂತೆ ಹಗಲಿನಲ್ಲಿ ಒಮ್ಮೆ ಆಹಾರ ಸೇವಿಸಿದ ಬಳಿಕ ಮೂರು ಗಂಟೆಯೊಳಗೆ ಆಹಾರ ಸೇವನೆ ಸಲ್ಲದು. ಅಲ್ಲದೇ ಆರು ಗಂಟೆಗಳಿಗೆ ಮೀರಿ ಉಪವಾಸವೂ ಬೇಡ. ಆಹಾರ ಪಚನವಾಗುವುದಕ್ಕೂ, ಜೀರ್ಣಾಂಗಗಳ ವಿಶ್ರಾಂತಿಗೂ ಇದು ಒಂದು ಉತ್ತಮ ಕ್ರಮವಾಗಿದೆ. ಆಗಾಗ ಚಾಕೋಲೇಟ್, ಬಬ್ಬಲ್‌ಗಂ, ಐಸ್‌ಕ್ರೀಂ ಮುಂತಾದವುಗಳನ್ನು ತಿನ್ನಿಸುತ್ತಿದ್ದಲ್ಲಿ ಜೀರ್ಣಾಂಗಗಳು ಮತ್ತು ಯಕೃತ್ (ಲಿವರ್) ದಣಿದು ಮಗುವಿಗೆ ಖಾಯಿಲೆ ಬರಬಹುದು. ಬೆಳಿಗ್ಗೆ ಹಾಗೂ ಸಂಜೆ ಹಾಲು ಮತ್ತು ಅಲ್ಪ ಉಪಹಾರ, ಮಧ್ಯಾಹ್ನ ಹಾಗೂ ರಾತ್ರಿ ಊಟ ನೀಡುವುದು ಆರೋಗ್ಯಕ್ಕೆ ಹಿತಕರ. ರಾತ್ರಿಯ ಊಟವನ್ನು ಏಳು ಗಂಟೆಯೊಳಗಾಗಿ ನೀಡುವುದು ಒಳ್ಳೆಯದು.

**ಮಾನಸಿಕ ಆಹಾರ:** ಮಕ್ಕಳ ಮನಸ್ಸು ಸೂಕ್ಷ್ಮ ಕ್ಯಾಮರಾ ಮತ್ತು ಟೇಪ್‌ರೆಕಾರ್ಡ್‌ಗಳಂತೆ ಕೆಲಸ ಮಾಡುತ್ತಿರುತ್ತದೆ. ಮಕ್ಕಳು ಬಾಯಿಯಿಂದ ಆಹಾರ ಸೇವಿಸಿದಂತೆಯೇ ಕುಟುಂಬದ ಮತ್ತು ಸುತ್ತಮುತ್ತಲಿನ ವಾತಾವರಣದ ಶಬ್ದ, ಮಾತು, ಆಚರಣೆ, ಜನರ ನಡೆನುಡಿಗಳನ್ನೆಲ್ಲ ವೇಗವಾಗಿ ಗ್ರಹಿಸುತ್ತ ತಮ್ಮದೇ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಕ್ರಿಯೆ ಆರಂಭಿಸುತ್ತವೆ. ಆದ್ದರಿಂದ ಸವಿನುಡಿಗಳು, ವಿನಯದ ನಡೆವಳಿಕೆ, ಸೇವಾ ಮನೋಭಾವವು ಮನೆಯವರಿಗೆ ಇದ್ದರೆ ಒಳ್ಳೆಯದು. ಅಲ್ಲದೇ ಅಹಿಂಸೆ, ಧೈರ್ಯ, ಶೌರ್ಯ, ಪರಾಕ್ರಮ, ಪ್ರಾಣಿದಯೆ, ಶ್ರದ್ಧೆ, ಪ್ರಕೃತಿಪ್ರೇಮ, ಬುದ್ಧಿಮತ್ತೆ, ಭಕ್ತಿ, ಸಹನೆ ಮುಂತಾದ ಸದ್ಗುಣಗಳನ್ನು ಬಿಂಬಿಸುವ ಕತೆ, ಕವನ, ಇಂಪಾದ ಧಾಟಿ ಲಯದ ಪದ್ಯಗಳು, ನಾಟಕ ಚಿತ್ರಗಳನ್ನು ತೋರಿಸುವಂತಹ ವಾತಾವರಣ ಕಲ್ಪಿಸಿದಲ್ಲಿ ಇಂದಿನ ಅನೇಕ ಮಕ್ಕಳಲ್ಲಿ ಬೆಳೆಯುತ್ತಿರುವ ಮಿತಿಮೀರಿದ ಚೇಷ್ಟೆ ಹಿಂಸಾಪ್ರವೃತ್ತಿ, ದುಷ್ಟತನ, ಅಶಿಸ್ತು, ಅವಿಧೇಯತೆಯಂತಹವುಗಳಿಗೆ ಕಡಿವಾಣ ಬಿದ್ದು ಶಾರೀರಿಕ ಆರೋಗ್ಯದೊಡನೆ ಮಾನಸಿಕ ಆರೋಗ್ಯವೂ ಉತ್ತಮವಾಗಿರಲು ಸಾಧ್ಯ.

**ಡಾ॥ ವಸುಂಧರಾ ಭೂಪತಿ**
ನಂ.೧೪೬೬, ೩ನೇ ಮೇನ್, ಹೆಚ್.ವಿ.ಆರ್. ಲೇಔಟ್, ಮಾಗಡಿ ರಸ್ತೆ, ಬೆಂಗಳೂರು - ೭೯

ಎಂ. ಎಸ್. ವೇದಾ

"ನಾಯಿಮರಿ ನಾಯಿಮರಿ ತಿಂಡಿ ಬೇಕೆ? ತಿಂಡಿ ಬೇಕು ತೀರ್ಥ ಬೇಕು ಎಲ್ಲ ಬೇಕು…'' ಮಕ್ಕಳ ಪದ್ಯವನ್ನು ಎಲ್ಲರೂ ಹಾಡಿಕೊಂಡೇ ಬೆಳೆದವರಲ್ಲವೇ? ಹಾಗೆ ನೋಡಿದರೆ ಬೇರೆಲ್ಲ ಪ್ರಾಣಿ ಪ್ರೀತಿಗಿಂತ ನಮ್ಮ ಸಮಾಜದಲ್ಲಿ ನಾಯಿ ಮೇಲಿನ ಪ್ರೀತಿ ಒಂದು ಕೈ ಮಿಗಿಲೆಂದೇ ಹೇಳಬೇಕು. ನಾವು ತೋರುವ ಪ್ರೀತಿಗೆ ಬರಿ ಪ್ರೀತಿಯೊಂದನ್ನೇ ಹಿಂತಿರುಗಿಸದೆ, ಅದರೊಂದಿಗೆ ನಮ್ಮನ್ನು ಕಾಯುವ ಕಾರ್ಯವನ್ನೂ ಅದು ನಿರ್ವಹಿಸುತ್ತದೆ. ಒಂದು ಕೈಯಿಂದ ಕೊಟ್ಟು ಮತ್ತೊಂದು ಕೈಯಿಂದ ವಾಪಸ್ಸು ಪಡೆದುಕೊಳ್ಳುವ ಮೂಲಗುಣ ಹೊಂದಿರುವ ಮನುಷ್ಯನಿಗೆ ನಾಯಿ ಅತ್ಯಂತ ಪ್ರೀತಿ ಪ್ರಾಣಿಯಾಗಲು ಪ್ರಾಯಶಃ ಅದೇ ಮೂಲಕಾರಣವೂ ಇರಬಹುದು. ಮನೆ, ಮನೆಯಲ್ಲಿರುವ ಮಂದಿ, ಮಂದಿ ಮೈಮೇಲಿನ ಚಿನ್ನ, ಖಜಾನೆಯಲ್ಲಿರುವ ಸಂಪತ್ತು – ಈ ಎಲ್ಲವನ್ನು ಕಡೇಪಕ್ಷ ತನ್ನ ಮೂಗಿನಿಂದ ಮೂಸಿ ಸಹ ನೋಡದೆ ಅದನ್ನು ಕಾಯುವ ನಾಯಿಯನ್ನು ನಾವು ನಾರಾಯಣನೆಂದೇ ಹೇಳಿ ನಾಯಿ ಬಗೆಗಿನ ನಮ್ಮ ಕೃತಜ್ಞತೆಯ ಋಣವನ್ನು ಕ್ಷಣಮಾತ್ರದಲ್ಲಿ ಕಳೆದುಕೊಂಡುಬಿಟ್ಟಿಲ್ಲವೇ ?! ನಾಯಿಯ ಸ್ವಾಮಿಭಕ್ತಿ, 'ಕಾಯ್ವ' ಗುಣ, ತೋರುವ ಪ್ರೀತಿ-ವಿಶ್ವಾಸ, ಅದಕ್ಕಾಗಿ ಅವು ಕೈಗೊಳ್ಳುವ ಸಾಹಸ, ಮಾಲೀಕನಿಗಾಗಿ ಮಾಡುವ ತ್ಯಾಗಗಳು – ಈಗಾಗಲೇ ನಮ್ಮ ಸಾಹಿತ್ಯ ಸಂಪುಟಗಳಲ್ಲಿ ಹಲವಾರು ಪುಟಗಳನ್ನೇ ಆಕ್ರಮಿಸಿ ಕುಳಿತಿವೆ. ಅವೆಲ್ಲ ಸತ್ಯವೂ ಸಹ. ಈಗ ತಕರಾರಿರುವುದು ನಾಯಿಗಳ ಬಗೆಗಲ್ಲ, ನಾಯಿಯುಳ್ಳ ಜನರ ಬಗೆಗೆ ಎಂದರೆ ಅಚ್ಚರಿಯಾಗಬಹುದು.

ಹಾಗೆ ನೋಡಿದರೆ ಯಾವ ಪ್ರಾಣಿಗಳೂ ನಮಗೆ ತಕರಾರು ಮೂಡಿಸುವುದಿಲ್ಲ. ಮನುಷ್ಯ ಎಂಬ – ಮಾತು ಮತ್ತು ಬುದ್ಧಿ ಎರಡನ್ನೂ ಒಳಗೊಂಡಿದ್ದೇ ಬೇರೆಲ್ಲ ಪ್ರಾಣಿಗಿಂತ ಭಿನ್ನ, ಹೆಚ್ಚು ಎಂದು ಕಾಲರ್ ಮೇಲೆತ್ತಿಕೊಳ್ಳುವ – ಪ್ರಾಣಿಯೇ ಎಲ್ಲ ಸಂದರ್ಭದಲ್ಲಿಯೂ 'ತಕರಾರಿನ ಪ್ರಾಣಿ' ಎಂಬುದನ್ನು ಎರಡನೆಯ ಮಾತಿಗೆ ಅವಕಾಶ ಇಲ್ಲವೆಂಬಂತೆ ಒಪ್ಪಿಕೊಂಡುಬಿಡಬಹುದು. ಆ ಮನುಷ್ಯನು ಎಲ್ಲೆಲ್ಲಿ ಕೈ ಹಾಕುತ್ತಾನೋ ಅಲ್ಲೆಲ್ಲಾ 'ತಕರಾರು' ಎಂಬುದೂ ಸೇರಿಕೊಂಡುಬಿಡುತ್ತದೆಯಲ್ಲ ಅದು ಇಲ್ಲಿ ಬಹಳ ಮುಖ್ಯವಾದ ತಕರಾರು. ಮನುಷ್ಯ ಯಾವಾಗ ನಾಯಿಗಳ ಬದುಕಿನಲ್ಲಿ ತನ್ನ 'ಹಸ್ತ'ವನ್ನು 'ಕ್ಷೇಪ' ಮಾಡಿದನೋ ?! ತೆಗೆದುಕೊಳ್ಳಿ ಅಲ್ಲಿಯೂ ಒಂದೇನು ? ನೂರಾರು ತಕರಾರು. ಇಲ್ಲ ಎನ್ನುತ್ತೀರಾ ? ಹಾಗಾದರೆ ನನ್ನದೇ ಒಂದೆರಡು ಅನುಭವಗಳನ್ನು ಓದಿ ನೋಡಿ ತಿಳಿಯುತ್ತದೆ.

ಅಪ್ಪ ಮಾಡಿಸುತ್ತಿದ್ದ ಜಮೀನಿನ ಕಾವಲು ಕಾಯಕಕ್ಕೆ ನಾಯಿಗಳನ್ನು ಸಾಕುತ್ತಿದ್ದ ಕೆಲಸದಲ್ಲಿಯೇ ನನ್ನ ಮತ್ತು ನನ್ನ ಒಡಹುಟ್ಟಿದವರ ಬಾಲ್ಯ ಬಹಳ ಖುಷಿಯಿಂದಲೇ ಕಳೆಯಿತು ಎಂದರೆ ನಿಮಗೆ ಅಚ್ಚರಿಯಾಗಬಹುದು. ಅದೇ ಜಮೀನು ಮಾರಾಟವಾದ ಅನಂತರ ಒಂದು ನಾಯನ್ನೂ ಸಾಕುವ ಯೋಚನೆಯನ್ನು ನಾವು ಮಾಡಿರಲಿಲ್ಲ. ಸಾಕುವ ಮಾತನಾಡಿದರೆ ಅಮ್ಮ ನಮ್ಮತ್ತಲೇ ಬೊಟ್ಟು ಮಾಡಿ ''ಇರುವ ನಾಯಿಗಳು ಸಾಕಿಲ್ಲವಾ ? ಬೇರೇದೊಂದು ನಾಯಿ ಬೇಕಾ ?'' ಎಂದು ನಗಾಡುತ್ತಿದ್ದರು. ಮದುವೆಯಾದ ಪತಿ ಮಹಾಶಯರಲ್ಲಿ ನಾಯಿ ಮಾತು ತೆಗೆದರೆ ಅವರೂ ನನ್ನತ್ತ, ನನ್ನ ಮಗನತ್ತ, ಜೊತೆಗೆ ತಮ್ಮತ್ತಲೂ ಬೊಟ್ಟು ಮಾಡಿಕೊಂಡು ''ಮೂರು ನಾಯಿಗಳು ಸಾಲದೆ ?'' ಎಂದು ಪ್ರಶ್ನೆ ಮಾಡುತ್ತಾರೆ. ''ನಾಯಿ ಸಾಕೋದೇನು ಸುಲಭಾನಾ ಮಹರಾಯಿತಿ. ಅದರ ಊಟ, ತಿಂಡಿ, ಸ್ನಾನ, ವಾಕು ಒಂದಾ ? ಎರಡಾ ?'' ಗಾಬರಿ ವ್ಯಕ್ತಮಾಡುತ್ತಾರೆ (''ಒಂದಾ ?

# ನಾಯಿಯುಳ್ಳ ಜನರಲ್ಲೊಂದು ಮನವಿ



ಎರಡಾ ?'' ಎಂಬುದನ್ನು ದ್ವಂದ್ವಾರ್ಥದಲ್ಲಿ ಓದಿಕೊಳ್ಳಬೇಕಾಗಿ ವಾಚಕರಲ್ಲಿ ವಿನಂತಿ). ''ಅದನ್ನೆಲ್ಲಾ ನೀನೇ ಮಾಡೋದಾದ್ರೆ ಒಂದು ನಾಯಿ ತರೋಣ'' ದಿವೀನಾಗಿ ನುಡಿಯುತ್ತಾರೆ. ಮನೆಗೆಲಸ, ಆಫೀಸಿನ ಕೆಲಸಗಳ ನಡುವೆ ನನ್ನ ಮುದ್ದುಮಗನಿಗೇ ಅವನ್ನೆಲ್ಲಾ ಮಾಡಲು ಸಾಧ್ಯವಾಗುತ್ತಿಲ್ಲ ಎಂದು ಅಳಲುವಾಗ ನಾಯಿಮರಿಯೊಂದಕ್ಕೆ ಆ ಸೌಭಾಗ್ಯಗಳನ್ನೆಲ್ಲಾ ತಂದುಕೊಡಲು ಸಾಧ್ಯವಾ ಎಂದು ಸುಮ್ಮನಾಗುತ್ತೇನೆ.

ಹಾಗಾದರೆ ಮತ್ತಾವುದು ಇವಳ ಅನುಭವ ಎನ್ನುತ್ತೀರಾ ? ಎಲ್ಲ ಎರಡನೆಯವರಿಗೇ ಸಂಬಂಧಿಸಿದ್ದು. ಹಾಗಾಗಿ 'ನಾಯಿ ಸಾಕುವ' ವಸ್ತುವನ್ನು ಕುರಿತಾದ ಒಂದು 'ಮಾನಸಿಕ ದೂರ' ಸಮಪ್ರಮಾಣದಲ್ಲಿ ಇದೆ ಎಂಬುದನ್ನು ಎಡ್ವರ್ಡ್ ಬುಲ್ಲೋನನ್ನು ಸ್ಮರಿಸುತ್ತಲೇ ಒಪ್ಪಿಕೊಂಡು 'ನಾಯಿಯುಳ್ಳ ಜನರಿಗಾಗಿ' ನಾ ಈ ಬರಹವನ್ನು 'ನಾಯಿಯುಳ್ಳ ಜನರಿಗೇ' ಅರ್ಪಿಸುತ್ತಿದ್ದೇನೆ. ದಯಮಾಡಿ ಒಪ್ಪಿಸಿಕೊಳ್ಳಬೇಕು. ಸರಿ ನಾಯಿಯುಳ್ಳ ಜನರೊಂದಿಗೆ ನನ್ನ ತಕರಾರುಗಳನ್ನು ಆರಂಭಿಸುತ್ತೇನೆ.



ಮೊದಲನೆಯ ತಕರಾರು ಬಹುತೇಕ, ನಾಯಿಯುಳ್ಳ ಜನರು ತಮ್ಮ ಮನೆಯ ಆವರಣಗಳಲ್ಲಿ ನಾಯಿಗಳನ್ನು ಕಟ್ಟದೆ ಹಾಗೆಯೇ ಬಿಟ್ಟುಬಿಟ್ಟಿರುವುದು. ಎಲ್ಲರೂ ''ಹಾಗೇನಿಲ್ಲ, ನಾವೆಲ್ಲ ನಮ್ಮ ನಾಯಿಗಳನ್ನು ಕಟ್ಟಿ ಹಾಕಿರುತ್ತೇವೆ. ಅಷ್ಟಕ್ಕೂ ಗೇಟಿನ ಮೇಲೆ 'ನಾಯಿಗಳಿವೆ ಎಚ್ಚರಿಕೆ' ಬೋರ್ಡ್ ಹಾಕಿಸಿಯೇ ಇದ್ದೇವೆ. ಮತ್ತೆ ಎಂಥದ್ದು ತಕರಾರು'' ಎಂದು ನನ್ನ ಮೇಲೆ ನಾಯಿಗಳಂತೆಯೇ ದಯವಿಟ್ಟು ಎಗರಿ ಬೀಳಬೇಡಿ. ಅಂಥವರ ಕ್ಷಮೆ ಬೇಡಿಯೇ, ಹಾಗೆ ಮಾಡದವರ ಬಗೆಗೆ ನನ್ನ ತಕರಾರು ಎಂಬುದನ್ನು ಸ್ಪಷ್ಟಪಡಿಸಿಬಿಡುತ್ತೇನೆ.

ನಾನಂತು ಬೋರ್ಡ್ ಇರಲಿ ಇಲ್ಲದಿರಲಿ ಮನೆಯ ಒಳಗಿರುವವರು ಹೊರಗೆ ಬಾರದೆ, ಗೇಟನ್ನು ತೆರೆದು ಅಂಗಳದಲ್ಲಿ ಕಾಲಿಡುವ ಧೈರ್ಯವನ್ನು ಸುತರಾಂ ಮಾಡಹೋಗುವುದಿಲ್ಲ. ನಾಯಿ ಕಡಿತ, ಹದಿನಾರು ಇಂಜೆಕ್ಷನ್ನು ಇತ್ಯಾದಿಗಳ ಹೆದರಿಕೆ, ಆ ಬಗೆಗಿನ ಪರಿಚಯದವರ ಸ್ವಕಥನಗಳು ಎಚ್ಚರದಲ್ಲಿ ಇರಲಿ, ನಿದ್ದೆಯೊಳಗಣ ಕನಸಿನಲ್ಲಿಯೂ ಕಾಡುವ ಸಂಗತಿಗಳೇ ನನಗೆ. ಆವರಣದ ಒಳಗೆ ಕಾಲಿಟ್ಟು ಎಲ್ಲಿಂದಲೋ ಹುಲಿಯಂತೆ ಎಗರಿ ಬರುವ ನಾಯಿಯ ಕಲ್ಪನೆ ನನ್ನಲ್ಲಿ ಸದಾ ಜಾಗೃತವಾಗಿಯೇ ಇರುತ್ತದೆ. ಆ ಬಗೆಯ ಜಾಗೃತಿ ಇಲ್ಲದ ಬೇಕಾದಷ್ಟು ಮಂದಿ ಆಸ್ಪತ್ರೆಯ ದರ್ಶನ ಮಾಡಿರುವುದು, ಅದೇ ಕಾರಣವಾಗಿ ಮಾಲೀಕರಿಗೆ ಕೋರ್ಟಿನ ದರ್ಶನ ಮಾಡಿಸಿರುವುದು ನಮ್ಮ ಸುತ್ತಮುತ್ತಲಲ್ಲಿಯೇ ನಡೆಯುತ್ತಿರುತ್ತದೆ. ಕೆಲಸದ ಕಾರಣವಾಗಿ, ಮಗಳೊಂದಿಗೆ ಒಂಟಿಯಾಗಿ ಇದ್ದ ನನ್ನ ಗೆಳತಿಯೊಬ್ಬಳ ಗೋಳು ಕೇಳಿ. ಆಫೀಸಿನ ಕೆಲಸ ಮುಗಿಸಿಕೊಂಡು ಹೋಗುವಷ್ಟರಲ್ಲಿ ಮಗಳ ಶಾಲೆ ಬಿಟ್ಟು ಅವಳು ಅಲ್ಲಿಯೇ ಇರಬೇಕಾಗುತ್ತದೆ ಎಂದು ಅವಳು ತನ್ನ ಮನೆಯ ಪಕ್ಕದವರಿಗೆ ಮಗಳನ್ನು ಶಾಲೆಯಿಂದ ಕರೆದು ತಂದುಬಿಡುವ ಕೆಲಸವನ್ನು ವಹಿಸಿದ್ದಳು. ಅವರು ಸಾಕಷ್ಟು ತಡವಾಗಿಯೇ ಶಾಲೆಗೆ ಹೋಗಿದ್ದರು. ಮಕ್ಕಳೆಲ್ಲಾ ಹೊರಟು ಹೋಗಿ ಎಷ್ಟೋ ಕಾಲವಾಗಿತ್ತು. ಶಾಲೆಯ ಆವರಣವೆಲ್ಲಾ ಖಾಲಿ. ಮನೆ ಕಂ ಪಾರ್ಟ್ ಟೈಂ ಶಾಲೆ ಎರಡೂ ಆಗಿದ್ದ ಆ ಆವರಣದಲ್ಲಿ ಹುಲಿಯಂತಹ ಎರಡು ನಾಯಿಗಳನ್ನು ಕಟ್ಟಿ ಹಾಕದೆ ಹಾಗೆಯೇ ಬಿಟ್ಟುಬಿಟ್ಟಿದ್ದಾರೆ. ಪಕ್ಕದ ಮನೆಯಾತ ಈ ಯಾವ ಅರಿವೂ ಇಲ್ಲದೆ ಆವರಣದೊಳಗೆ ಹೋದರೆ ಅವು ಎಲ್ಲಿಂದಲೋ ಹಾರಿ ಬಂದು ಇವರ ಮೇಲೆ ಅಟ್ಯಾಕ್ ಮಾಡಿವೆ. ಸದ್ಯ ಅವರಿಗೆ 'ಹಾರ್ಟ್ ಅಟ್ಯಾಕ್' ಆಗಿಲ್ಲ. ಮೊಣಕಾಲುಗಳ ಮೇಲೆ ಒಂದಷ್ಟು, ನಾಯಿಗಳ ಹಲ್ಲುಗಳು ಮೂಡಿವೆ. ಅಷ್ಟರಲ್ಲಿ ಮಾಲೀಕರು ಬಂದಿದ್ದಾರೆ. ಕಚ್ಚಿಸಿಕೊಂಡವರು ಸುಮ್ಮನಿದ್ದಾರೆಯೆ ? ಜೋರಾಗಿಯೇ ಜಗಳ ಮಾಡಿದರು. ನಾಯಿಯನ್ನು ಕಟ್ಟಿ ಹಾಕದಿದ್ದು, ನಾಯಿ ಇದೆ ಎಂಬುದರ ಬಗೆಗೆ ಯಾವುದೇ ಎಚ್ಚರಿಕೆಯನ್ನೂ ನೀಡದಿದ್ದುದರ ಬಗೆಗೆ ಪೊಲೀಸರಿಗೆ ದೂರುಕೊಟ್ಟರು. ಸ್ನೇಹಿತೆಯ ಮಗಳೆಲ್ಲಿ ?! ಅವಳ ಉಪಾಧ್ಯಾಯಿನಿ ತಮ್ಮ ಮನೆಗೆ ಕರೆದೊಯ್ದಿದ್ದಾರೆ.

ಇಷ್ಟೆಲ್ಲಾ ಆದ ಮೇಲೆ ನನ್ನ ಗೆಳತಿ ಆ ರಣರಂಗಕ್ಕೆ ಪ್ರವೇಶ ಮಾಡಿದ್ದಾಳೆ. ಅವಳ ಮೇಲೆ ನಾಯಿಗಳಲ್ಲ, ನಾಯಿಗಳಂತೆ ಶಾಲಾ ಆಡಳಿತವರ್ಗ ಆಕ್ರಮಣ ನಡೆಸಿದೆ. ಎಲ್ಲಾ ಅವಳದೇ ತಪ್ಪೆಂದು ಅವಳಿಂದ ತಾವು ಪೊಲೀಸ್ ಠಾಣೆ ನೋಡುವಂತಾಯಿತೆಂದು, ಪೆನಾಲ್ಟಿ ಕಟ್ಟುವಂತಾಯಿತೆಂದು ಒಂದೇ ? ಎರಡೇ ? ಕೊನೆಗೆ ಇಂತಹ ಬೇಜವಾಬ್ದಾರಿ ಪೋಷಕರಿರುವ ಮಗುವಿಗೆ ತಮ್ಮ ಶಾಲೆಯಲ್ಲಿ ಸೀಟು ಇಲ್ಲವೆಂದು ಟಿ. ಸಿ. ಕೊಡುವ ಮರಣದಂಡನೆ ಶಿಕ್ಷೆಯನ್ನೇ ಘೋಷಿಸಿಬಿಟ್ಟಿದ್ದಾರೆ. ಒಂದು ಮಗುವಿಗೆ ಒಂದು ಶಾಲೆಯಲ್ಲಿ ಒಂದೇ ಒಂದು ಸೀಟು ಗಿಟ್ಟಿಸುವುದು ಎಂತಹ ತಲೆಹೋಗುವ ಕೆಲಸ ಎಂಬ ಅರಿವಿದ್ದವರಿಗೆ, ಅದೇ ಶಾಲೆ ಟಿ. ಸಿ. ಕೊಟ್ಟುಬಿಡುತ್ತದೆ ಎಂದರೆ ಅದು 'ಮರಣ ದಂಡನೆ'ಯೇ ಎಂಬುದು ಸುಲಭವಾಗಿ ಅರ್ಥವಾಗುತ್ತದೆ. ನನ್ನ ಗೆಳತಿ ತನ್ನ ಮಗಳಿಗಾಗಿ ಗಿಟ್ಟಿಸಿದ್ದ ಸೀಟನ್ನು ಯಾವುದೇ ಕಾರಣಕ್ಕೂ ಬಿಟ್ಟುಕೊಡಲು, ಮತ್ತೊಂದು ಕಡೆ ಸೀಟಿಗಾಗಿ ಅಲೆದಾಡಲು ಸಾಧ್ಯವೇ ಇಲ್ಲವಿತ್ತಾಗಿ, ಅತ್ಯಂತ ದೀನಳಾಗಿ ತನ್ನ ಸೆರಗೊಡ್ಡಿ ಬೇಡಿಕೊಂಡು, ತನ್ನ ತಪ್ಪನ್ನು ಒಪ್ಪಿಕೊಂಡು, ಅದಕ್ಕಾಗಿ ತನ್ನ ಪಶ್ಚಾತ್ತಾಪವನ್ನು ಬರೆದುಕೊಟ್ಟು, ಮತ್ತೆ ಆ ತಪ್ಪು ಮರುಕಳಿಸದಂತೆ ನೋಡಿಕೊಳ್ಳುವ ವಚನವಿತ್ತು – ಒಂದಾ ? ಎರಡಾ ? ಆ ಕ್ಷಣ ಅವಳು ದುರಂತ ನಾಯಕಿಯೇ ಆಗಿಬಿಟ್ಟಿದ್ದಳು, ನಾಯಿಗಳ ದೆಸೆಯಿಂದಾಗಿ. ಅದಕ್ಕಿಂತ ಹೆಚ್ಚಾಗಿ ನಾಯಿಯುಳ್ಳ ಜನರ ದೆಸೆಯಿಂದಾಗಿ.

ಕಟ್ಟಿ ಹಾಕದ ನಾಯಿಯ ಬಗೆಗೆ ನಾಯಿಯುಳ್ಳ ಜನರ ಮನಃಸ್ಥಿತಿಯೇ ಬೇರೆ ಇರುತ್ತದೆ ಎಂಬುದನ್ನು ಒಂದೆರಡು ಸಂದರ್ಭಗಳಲ್ಲಿ ನಾನು ಅರಿತುಕೊಂಡಿದ್ದೇನೆ. ನಮ್ಮ ಸಹೋದ್ಯೋಗಿಯೊಬ್ಬರಿದ್ದರು. ಇದ್ದಕ್ಕಿದ್ದ ಹಾಗೇ ಅವರು ಒಂದು ನಾಯಿಯನ್ನು ಸಾಕಲಾರಂಭಿಸಿದ್ದರು. ಅವರ ಸಾಕಾಣಿಕೆ ಹೇಗಿತ್ತೊ ?! ಕುಳಿತಲ್ಲಿ, ನಿಂತಲ್ಲಿ, ಕಾಫಿ ಕುಡಿವಲ್ಲಿ – ಎಲ್ಲಿ ಹೋದರೂ ಅವರಿಗೆ ತಮ್ಮ ನಾಯಿ ಬಗ್ಗೆ ಮಾತನಾಡುವುದೇ ಕೆಲಸವಾಗಿಬಿಟ್ಟಿತ್ತು. ''ಮಹಾರಾಯ ಹೆಂಡತಿ, ಮಕ್ಕಳ ಬಗೆಗೆ ಒಂದೂ ಮಾತನಾಡದೇ ಇದ್ರೂ ಸರಿ ನಾಯಿ ಬಗೆಗೆ ದೊಡ್ಡದಾಗಿ ಭಾಷಣ ಬಿಗೀತಾನೆ. ಇದೂ ಒಂಥರಾ ಹುಚ್ಚೇ'' ಕಛೇರಿಯಲ್ಲಿ ಆಡಿಕೊಂಡು ನಕ್ಕಿದ್ದುಂಟು.

ಅವರೊಮ್ಮೆ ಬಹಳ ಕೋಪ ಮತ್ತು ಬೇಸರದಿಂದ ತಮ್ಮ ನಾಯಿಗೆ ಸಂಬಂಧಪಟ್ಟ ಒಂದು ವಿಚಾರವನ್ನು ಮತ್ತೊಬ್ಬ ಸಹೋದ್ಯೋಗಿಯೊಂದಿಗೆ ಹಂಚಿಕೊಳ್ಳುತ್ತಿದ್ದರು. ಆವರೆವಿಗೆ ಕಿವಿ ಕೇಳದಂತೆ ಸುಮ್ಮನಿದ್ದ ಉಳಿದವರೆಲ್ಲ ಆ ಮನುಷ್ಯ ಆಚೆ ಹೋದ ತಕ್ಷಣ ವಿಷಯ ಏನೆಂದು ಈ ಸಹೋದ್ಯೋಗಿಯನ್ನು ವಿಚಾರಿಸಿದ್ದವು. ''ಅಯ್ಯೋ ಅವನದೊಂದು ತರಲೆ ತಗೊಳ್ಳಿ ಮೇಡಂ'' ಎನ್ನುತ್ತಲೇ ಅವರು ವರದಿ ಒಪ್ಪಿಸಿದ್ದರು.

ಈ ನಾಯಿಯುಳ್ಳ ಮನುಷ್ಯ ತೋಳದಂತಹ ತನ್ನ ನಾಯಿಯನ್ನು ಕರೆದುಕೊಂಡು ದಿನವೂ ವಾಯುವಿಹಾರಕ್ಕೆ ಹೊರಡುತ್ತಾನಂತೆ. ನಾಯಿಗೆ ಚೈನನ್ನೇನೂ ಹಾಕುವುದಿಲ್ಲವಂತೆ. ನಾಯಿ ಪಾಡಿಗೆ ನಾಯಿ. ಇವನ ಪಾಡಿಗೆ ಇವನು. ಬೆಳಗ್ಗಿನ ವಾಯುವಿಹಾರ ಬಹಳ ಸಾಂಗವಾಗಿಯೇ ನಡೆಯುತ್ತದೆಯಂತೆ. ಅವರ ಮಟ್ಟಿಗೆ 'ಸಾಂಗ' ಸರಿ. ಬೆಳಗ್ಗಿನ ವಾಯುವಿಹಾರಕ್ಕೇ ಬರುವವರ ತಕರಾರನ್ನು ಕೇಳುವವರು ಯಾರು ? ಅವರೆಲ್ಲಾ ಇವನ ಮೇಲೆ ಹಾರಿಬಿದ್ದರಂತೆ. ''ರ್ರಿ ತೋಳದಂತಹ ನಾಯಿ ತಂದು ಕ್ಯಾಂಪಸ್ನಲ್ಲಿ ಹೀಗೆ ಬಿಟ್ಟುಬಿಡ್ತೀರಲ್ಲ, ಕಚ್ಚಿದರೆ ಏನು ಗತಿ. ನೇರ ಕೈಲಾಸ, ವೈಕುಂಠಕ್ಕೇ ಹೋಗಬೇಕಾಗುತ್ತೆ ಅಷ್ಟೆ. ನಾಳೆಯಿಂದ ಚೈನ್ ಹಾಕಿ, ನಿಮ್ ಕೈನಲ್ಲಿ ಅದನ್ನ ಹಿಡಿದುಕೊಂಡು ಬನ್ನಿ'' ಅಂತ ಈ ಮಹಾಶಯನಿಗೆ ಬುದ್ಧಿ ಹೇಳಿದರಂತೆ. ಇವನು ಕೇಳಿದನಾ ? ''ನಿಮ್ ಪಾಡಿಗೆ ನೀವು ನಿಮ್ ನಿಮ್ ವಾಕಿಂಗೂ, ಎಕ್ಸರ್‌ಸೈಸು ಯೆಲ್ಲ ಮಾಡ್ಕಳ್ಳಿ. ನಮ್ ನಾಯಿ ನಿಮ್ ತಂಟೆಗೆ ಬಂದಾಗ ಕೇಳ್ರಿ ಅಷ್ಟೆ'' ಧಿಮಾಕಿನಿಂದ, ಉಡಾಫೆಯ ನುಡಿಯಾಡಿ ಬಂದನಂತೆ !

''ಅಲ್ಲಾ ಸಾರ್ ನಾಯಿ ಕಡಿದ ಮೇಲೆ ಇವರ ಹತ್ರ ಕೇಳಿದ್ರೆ ಏನ್ ಪ್ರಯೋಜ್ನ ಅಂತೀನಿ'' ಗೆಳತಿ ಕೋಟಿ ರೂಪಾಯಿಯ ಪ್ರಶ್ನೆ ಹಾಕಿದ್ದಳು. ''ಅಯ್ಯೋ ಇವನೊಬ್ಬ ಹುಚ್ಚ ಮೇಡಂ. ಇವನ ನಾಯಿ ತೋಳ ಇದ್ದ ಹಾಗಿದೆ. ಕಚ್ಚೋದೇನು ? ನೋಡಿದ್ರೇ ಹಾರ್ಟ್ ಅಟ್ಯಾಕ್ ಆಗಿಬಿಡುತ್ತೆ. ನಾನೇನಾದ್ರೂ ಆ ಜಾಗದಲ್ಲಿ ಇರಬೇಕಾಗಿತ್ತು, ಮುಕುಕ್ಕೆ ಉಗ್ದು ಕಳಿಸ್ತಿದ್ದೆ. ತಿಳಿವಳಿಕೆ ಇರೋರು ಆಡೋ ಮಾತಾ ಅದು. ಕಚ್ಚಿದ್ ನಾಯಿ ಸ್ವರ್ಗಕ್ಕೆ ಅಥವಾ ನರಕಕ್ಕೆ ಹೋಗೋ ತನಕಾ ಕಚ್ಚಿಸಿಕೊಂಡೋನ ಪಾಡು ಏನು ಅಂತ ಗಾದೇನೇ ಕೇಳಿಲ್ವೆ, ಬೇಜವಾಬ್ದಾರಿ ಮನುಷ್ಯ'' ಬೈಯ್ದಿದ್ದರು.

ನಾಯಿಯುಳ್ಳ ಜನರ ಈ ಬೇಜವಾಬ್ದಾರಿತನ ಸ್ವತಃ ನನಗೇ ಒಮ್ಮೆ

ಎದುರಾಗಿಬಿಡಬೇಕೆ! ನನ್ನ ಮಗನನ್ನು – ಒಂದು ಭಾನುವಾರದ ಮುಂಜಾನೆ, ಅವನಪ್ಪ ಇರಲಿಲ್ಲವಾಗಿ – ಟೆನ್ನಿಸ್ ಆಟಕ್ಕೆ ಬಿಡಲು ಟೆನ್ನಿಸ್ ಕೋರ್ಟ್ ಬಳಿಗೆ ನಾನೇ ಕರೆದೊಯ್ಯಬೇಕಾಗಿತ್ತು. ಮಗನನ್ನು, ರಸ್ತೆಯಿಂದ ಒಂದಷ್ಟು ದೂರ ಇದ್ದ ಕೋರ್ಟಿಗೆ ಹೋಗಲು, ರಸ್ತೆಯಲ್ಲಿಯೇ ಇಳಿಸಿ, ಕೋರ್ಟಿಗೆ ಹೋಗಲು ಸೂಚಿಸಿ ನನ್ನ ಸ್ಕೂಟಿಯನ್ನು ಟರ್ನು ಮಾಡಿಕೊಳ್ಳತೊಡಗಿದ್ದೆನಷ್ಟೆ! ಕೋರ್ಟಿನಲ್ಲಿ ಆಗಲೇ ಬಂದುಬಿಟ್ಟಿದ್ದ ತನ್ನ ಟೆನ್ನಿಸ್ ಗೆಳೆಯರನ್ನು ಸೇರಿಕೊಳ್ಳಲು ಉತ್ಸಾಹದಿಂದಿದ್ದ ಮಗರಾಯ ಸ್ಕೂಟಿಯಿಂದ ಇಳಿದ ತಕ್ಷಣ ಓಟ ಆರಂಭಿಸಿದ್ದ. ಇದ್ದಕ್ಕಿದ್ದ ಹಾಗೇ ಮಗನಿಂದ 'ಅಮ್ಮಾ' ಎನ್ನುವ ಆರ್ತನಾದ! ಸ್ಕೂಟಿಯನ್ನು ತಿರುಗಿಸುತ್ತಿದ್ದ ನಾನು ಗಾಬರಿಯಾಗಿ ಕತ್ತೆತ್ತಿ ನೋಡುತ್ತೇನೆ. ಅದೆಲ್ಲಿತ್ತೋ ?! ಭಯಾನಕ ಕಥೆಗಳಲ್ಲಿ ಬರುವಂಥದ್ದೇ ಕಪ್ಪನೆಯ ಸೀಳುನಾಯಿ. ಬೆಳ್ಳನೆಯ ಕೋರೆಹಲ್ಲು ಮತ್ತು ಕೆಂಪನೆಯ ನಾಲಿಗೆಯನ್ನು ಪ್ರದರ್ಶಿಸುತ್ತಾ ನನ್ನ ಮಗರಾಯನನ್ನು ಅಟ್ಟಾಡಿಸುತ್ತಿದೆ. ಹೃದಯ ಬಾಯಿಗೆ ಬಂದಿತೋ ? ಆಕಾಶ ತಲೆ ಮೇಲೆ ಬಿದ್ದಿತೋ ? ಏನೊಂದು ಅರಿವಾಗಲು ನನಗಲ್ಲಿ ಅವಕಾಶವಾಗಿರಲಿಲ್ಲ. ಅಟ್ಟಾಡಿಸುತ್ತಿದ್ದ ನಾಯಿಯಿಂದ ನನ್ನ ಮಗನನ್ನು ಪಾರು ಮಾಡುವುದೊಂದೇ ನನ್ನ ಕಣ್ಣೆದುರಿಗಿದ್ದ ಪರಮ ಗುರಿಯಾಗಿತ್ತು. ಸ್ಕೂಟಿಯನ್ನು ಹಾಗೇ ಬಿಟ್ಟು ಮಗನ ಕಡೆಗೆ ಓಡಿದ್ದೆ. ಸರಿಹೋಯಿತು. ಮಗನನ್ನು ಬಿಟ್ಟು, ಮಾಟಗಾತಿಯ ಪ್ರತಿನಿಧಿಯಂತಿದ್ದ ಆ ಕಪ್ಪು ನಾಯಿ ನನ್ನನ್ನು ಅಟ್ಟಾಡಿಸಲು ಆರಂಭಿಸಿತು. ನನ್ನ ಮುಖದ ಬಳಿಗೇ ಬರುತ್ತಿದ್ದ ಅದರ ಬಾಯಿಂದ ತಪ್ಪಿಸಿಕೊಳ್ಳಲು ನಾನು ಕುತ್ತಿಗೆಗೆ ಸುತ್ತಿಕೊಂಡಿದ್ದ ವೇಲನ್ನು ಅದರ ಬಾಯಿಯ ಬಳಿ ಹಿಡಿಯುತ್ತಾ, ಅದರ ಕೈಗೆ ಸಿಗದಂತೆ ಓಡುತ್ತಾ, ಸದ್ಯ ಅದರ ಬಾಯಿಂದ ನನ್ನ ಮಗ ಪಾರಾದನಲ್ಲ ಎಂದು ಸಮಾಧಾನಗೊಳ್ಳುತ್ತಾ ಆ ಆವರಣದಲ್ಲಿ ನಾಯಿಯ ಜೊತೆ ಜೂಟಾಟವಾಡಲು ತೊಡಗಿದ್ದೆ. ನಾಯಿ ನನ್ನನ್ನು ಅಟ್ಟಾಡಿಸುತ್ತಿದೆಯೋ, ನಾನು ನಾಯಿಯನ್ನು ಅಟ್ಟಾಡಿಸುತ್ತಿದ್ದೇನೆಯೋ ಅರ್ಥವೇ ಆಗದಂತಹ ಜೂಟಾಟವದು. ಅದೆಲ್ಲಿದ್ದನೋ ಮಹಾಶಯ ಆ ನಾಯಿಯ ಮಾಲಿಕ! ನಾಯಿ, ನಾನು ಆಡುತ್ತಿದ್ದ ಬಯಲಿನಲ್ಲಿ ಇದ್ದಕ್ಕಿದ್ದಂತೆಯೇ ಏದುಸಿರುಬಿಡುತ್ತಾ ಪ್ರತ್ಯಕ್ಷನಾಗಿಬಿಟ್ಟಿದ್ದ. ಅವನ ಕೈಗಳಲ್ಲಿ ನಾಯಿಚೈನು ನೇತಾಡುತ್ತಿದೆ. ''ಹಿಡಿದುಕೊಳ್ರಿ ನಿಮ್ ನಾಯನ್ನಾ?'' ಜೂಟಾಟವಾಡುತ್ತಲೇ ಅವನತ್ತ ತಿರುಗಿ ಕಿರುಚಿದ್ದೆ. ''ಹಾಗೆ. ಹಾಗೇ ನಿಂತುಕೊಂಡುಬಿಡಿ ಮೇಡಂ. ಅದು ಏನೂ ಮಾಡಲ್ಲ. ಕಚ್ಚಲ್ಲ ಅದು. ನೀವು ಓಡ್ತಾ ಇರೋದರಿಂದ ಅದು ಅಟ್ಟಾಡಿಸ್ತಾ ಇದೆ.'' ನಿಂತ ಕಡೆಯೇ ಶ್ರೀಕೃಷ್ಣ ಅರ್ಜುನನಿಗೆ ಗೀತೋಪದೇಶ ಮಾಡಿದಂತೆ ನನಗೆ ಉಪದೇಶ ಮಾಡಲು ಆರಂಭಿಸಿದ್ದ. ಅದಾಗಲೇ ಓಡಿಓಡಿ ಸಾಕಾಗಿದ್ದ ನನಗೆ, ನನ್ನ ವಿದ್ಯೆ, ಸಂಸ್ಕೃತಿ, ತಾಳ್ಮೆ ಎಲ್ಲವೂ ನನ್ನನ್ನು ಬಿಟ್ಟು ಹೋಗಿಬಿಟ್ಟದ್ದೂ ಗೊತ್ತಾಗದಂತೆ, ಎದುರಿಗೆ ನಿಂತಿದ್ದ ವ್ಯಕ್ತಿ ವಯಸ್ಸಾದವರು, ಹಿರಿಯರು, ಅವರನ್ನು ಗೌರವದಿಂದ ನುಡಿಸಬೇಕು ಎಂಬುದನ್ನೂ ಮರೆತು, ''ಯ್ಯೋ, ಮೊದ್ಲು ನಿನ್ ನಾಯನ್ನ ಹಿಡಿದು ಚೈನು ಹಾಕಯ್ಯ'' ಕಿರುಚಿಕೊಂಡಿದ್ದೆ. ನನ್ನ ಆ ಕಿರುಚುವಿಕೆ ಆ ಮಹಾಶಯನನ್ನು ಕಾರ್ಯಪ್ರವೃತ್ತನನ್ನಾಗಿಸಿತ್ತು. ಸರಿ, ನಾಯಿಯ ಹಿಂದೆ ಆತ ಓಡಲು ಆರಂಭಿಸಿದ್ದ. ಆ ನಾಯಿ ಆ ಮನುಷ್ಯನಿಗೆ ದಕ್ಕುವಂತಿರಲಿಲ್ಲ. ಆದರೆ ನಾನು ಮಾಡಿದ್ದ ಕಿರುಚಾಟ ಆ ಮಹಾಶಯನನ್ನು ಸುಮ್ಮನಿರುವಂತೆ ಬಿಟ್ಟಿರಲಿಲ್ಲ. ಓಡಾಟ ಮಾಡಿ ತನ್ನ ನಾಯಿಯನ್ನು ಹಿಡಿಯಲಾಗದ ಆತ ನಾಯಿಯ ಮೇಲೇ ಒಂದು ಡೈ ಹೊಡೆದು ಅದರ ಮೇಲೆ ತಾನು ಬಿದ್ದು ತನ್ನ ಕೈಯ್ಯಲ್ಲಿ ಅದರ ಕುತ್ತಿಗೆಯ ಪಟ್ಟಿ ಹಿಡಿದುಕೊಂಡು ಚೈನು ಹಾಕುತ್ತಾ ಮೇಲೆ ಎದ್ದಿದ್ದ. ಆತನೂ ಏದುಸಿರುಬಿಡುತ್ತಿದ್ದ. ಜೂಟಾಟ ನಿಂತ ವೇಳೆಯಲ್ಲಿ ಸುತ್ತಮುತ್ತಲೂ ನೋಡುತ್ತೇನೆ, ಎಷ್ಟೊಂದು ಜನ! ನಾಚಿಕೆ, ಅಪಮಾನ, ಭಯ ಏನೊಂದೂ ಅರ್ಥವಾಗಿರಲಿಲ್ಲ.

''ನೀವು ಸುಮ್ಮನೆ ನಿಂತುಬಿಡಬೇಕಿತ್ತು. ನಿಂತುಬಿಟ್ರೆ ನಮ್ ನಾಯಿ ಏನೂ ಮಾಡಲ್ಲಮ್ಮ'' ಮತ್ತದೇ ನಾಯಿಯುಳ್ಳವನ ತಲೆಹರಟೆ.

''ರ್ರಿ, ಸ್ವಲ್ಪ ಬಾಯಿ ಮುಚ್ಚಿಕೊಳ್ಳಿ. ನಿಮ್ ನಾಯಿ ಸೈಕಾಲಜಿ ನಿಮ್ಗೆ ಗೊತ್ತು. ಊರಿಗೆಲ್ಲ ಗೊತ್ತಿರಬೇಕೂಂತ ಇದೆಯಾ. ಮೊದ್ಲು ಹೊರಗಡೆ ಬಂದಾಗ ನಾಯಿಗೆ ಚೈನು ಹಾಕ್ಕೊಂಡು, ಚೈನನ್ನ ಕೈಯ್ಯಲ್ಲಿ ಹಿಡ್ಕಂಡು ಬರೋದನ್ನ ಕಲೀರಿ.'' ಹಿಂದು ಮುಂದು ನೋಡದೇ ಝಾಡಿಸಿದ್ದೆ. ಸುತ್ತಮುತ್ತಲಿದ್ದವರೂ ಅದಕ್ಕೆ ಧ್ವನಿಗೂಡಿಸಿದ್ದರು. ನಾಯಿಯುಳ್ಳವ ಅಲ್ಲಿಂದ ಜಾರಿಕೊಂಡಿದ್ದ.

ಇತ್ತಿತ್ತಲಾಗಿ ನಾನು ಗಮನಿಸುತ್ತಲೇ ಇರುತ್ತೇನೆ. ನಾಯಿಯುಳ್ಳವರು ತಮ್ಮ ಒಂದೋ, ಎರಡೋ ನಾಯಿಗಳನ್ನು ಬೀದಿಯಲ್ಲಿ ತಮ್ಮ ಮುಂದೆಯೋ, ಹಿಂದೆಯೋ ಬಿಟ್ಟು ಕೊಂಡು, ತಮ್ಮ ಕೊರಳಿಗೊಂದು ಮೊಬೈಲನ್ನು ನೇತು ಹಾಕಿಕೊಂಡು, ಕೈಗಳೆರಡನ್ನು ಜೇಬಿನಲ್ಲಿ ಇಳಿಬಿಟ್ಟುಕೊಂಡು ಸ್ಟೈಲಾಗಿ ನಡೆದುಕೊಂಡು ಹೋಗುತ್ತಿರುತ್ತಾರೆ. ಅವರ ಎಲ್ಲ ಸ್ಟೈಲುಗಳ ಬಗೆಗೆ ನನ್ನ ಕಾಮೆಂಟುಗಳಿಲ್ಲ. ನಾಯಿಯನ್ನ ಚೈನು ಹಾಕದೆ ಬಿಟ್ಟುಬಿಟ್ಟಿರುತ್ತಾರಲ್ಲ ಅದರ ಬಗೆಗೆ ನನ್ನ ಬಹುದೊಡ್ಡ ಆಕ್ಷೇಪ ಇದೆ.

ಅದನ್ನು ಹೊಂದಿಕೊಂಡೇ ನನ್ನ ಮತ್ತೊಂದು ಆಕ್ಷೇಪವೂ ಇದೆ. ನಾಯಿ ಇವರದು. ಆ ನಾಯಿ ಕಾಯುವುದು ಇವರ ಮನೆಯನ್ನ, ತಿನ್ನುವುದು ಇವರ ಅನ್ನವನ್ನ, ಇವರಿಗೇ ತೋರಿಸುವುದು ತನ್ನ ನಿಷ್ಠೆಯನ್ನ. ಎಲ್ಲವೂ ನಾಯಿ ಮತ್ತು ಇವರ ನಡುವಿನ ಸಂಬಂಧವೇ. ಆದರೆ ಅದರ ಒಂದಾ ?! ಎರಡಾ ?! ವಿಚಾರ ಬಂದಾಗ ಮಾತ್ರ ಯಾಕೆ ಇವರು ರಸ್ತೆಯೊಡನೆ ಸಂಬಂಧ ಬೆಳೆಸಬೇಕು ಎಂಬುದು ನನ್ನ ದೊಡ್ಡ ಪ್ರಶ್ನೆ. ನಾಯಿ ಒಂದಾ, ಎರಡಾ ಮಾಡಲು ಮಾಲೀಕರುಗಳಿಗೆ (ನಾಯಿಗಳಿಗಲ್ಲ!) ಬೀದಿಯೇ ಬೇಕು.

ನೀವು ಗಮನಿಸುತ್ತಿರಿ. ಈ ಕೆಲಸ ಮಾಡಿಸಲು ನಾಯಿಯುಳ್ಳವರು ನಾಯಿಗೆ ಚೈನಿಟ್ಟು ಅದರ ತುದಿಯನ್ನು ತಮ್ಮ ಕೈಯ್ಯಲ್ಲಿ ಹಿಡಿದಿರುತ್ತಾರೆ. ಅತ್ಯಂತ ಸುಂದರವಾದ ಮನೆಯ ಸ್ವಚ್ಛ ಜಗುಲಿಯ ಮೇಲೇ ತಮ್ಮ ನಾಯಿ ಹೇಸಿಗೆ ಮಾಡಲು ಉಪಕ್ರಮಿಸಿದರೂ ತಮಗೇನೂ ಆಗದಂತೆ ದಿವೀನಾಗಿ ಎತ್ತಲೋ ನೋಡುತ್ತಾ ಅದಕ್ಕೂ ತಮಗೂ ಸಂಬಂಧವಿಲ್ಲ, ಹಿಡಿದಿರುವ ಚೈನಿಗೂ, ತಮಗೂ ಮಾತ್ರ ಸಂಬಂಧ ಎಂಬಂತೆ ನಿಂತಿರುತ್ತಾರೆ. ಸುಂದರವಾದ ಪಾರ್ಕಿನ ಪ್ರವೇಶ ದ್ವಾರ ಇರಲಿ, ಜನ ಓಡಾಡುವ ಫುಟ್‌ಪಾತ್ ಇರಲಿ, ಸುಂದರವಾಗಿ ಹಾಕಿದ ರಂಗೋಲಿ ಇರಲಿ – ಎಲ್ಲಾದರೂ ಸೈ! ಆದರೆ ಇವರ ಮನೆಯ ಒಳಗಿರಲಿ, ಹೊರಗೂ ಸಹ ಅದು, 'ಅದನ್ನು' ಮಾಡಬಾರದೆಂಬ ನಿಲುವು ಅವರದು. ಅವರೇನೂ ಪೆದ್ದರಲ್ಲ, ಅನಾಗರಿಕರಲ್ಲ, ಅನಕ್ಷರಸ್ಥರಲ್ಲ. ಮೊಬೈಲಿನಲ್ಲಿ ವಿಶ್ವಭಾಷೆ ಇಂಗ್ಲಿಷ್‌ನಲ್ಲಿಯೇ ಮಾತನಾಡುತ್ತಿರುತ್ತಾರೆ. ಸಾವಿರಾರು ರೂಪಾಯಿ ಬೆಲೆಯ ಟ್ರ್ಯಾಕ್‌ಸೂಟನ್ನೇ ಧರಿಸಿರುತ್ತಾರೆ. ಗಣ್ಯವ್ಯಕ್ತಿಗಳೇ ಆಗಿರುತ್ತಾರೆ. ಆದರೆ ಅವರು ಮಾಡಿಸುತ್ತಿರುವ ಕೆಲಸಕ್ಕೂ ಅವರಿರುವ ಮಟ್ಟಕ್ಕೂ ಒಂದಕ್ಕೊಂದು ತಾಳೆಯೇ ಆಗುವುದಿಲ್ಲ. ಯಾಕೆ ಮನುಷ್ಯ ಇಷ್ಟೊಂದು ಕೆಟ್ಟವನಾಗುತ್ತಾನೆ. ಒಂದೊಮ್ಮೆ ತನ್ನ ಮನೆ ಮುಂದೆಯೇ ಮತ್ತೊಬ್ಬ ಹೀಗೆ ಮಾಡಿಬಿಡಬಹುದು ಎಂಬುದನ್ನಾದರೂ ಯೋಚಿಸಲು ಶಕ್ತನಾಗಿದ್ದರೆ... !

ಇಂತಹ ಸಂದರ್ಭಗಳಲ್ಲೆಲ್ಲಾ ನಮ್ಮ ಹಿರಿಯ ಸಹೋದ್ಯೋಗಿಯೊಬ್ಬರ ಅನುಭವ ನೆನಪಾಗುತ್ತದೆ. ಅವರು ಜಪಾನನ್ನು ನೋಡಿ ಬಂದವರು. ''ಮೇಡಂ ಅಲ್ಲಿ ಬೆಳಿಗ್ಗೆ ವಾಕಿಂಗ್ ಹೋಗುವಾಗ ನಾಯಿ ಮಾಲೀಕರು ನಾಯಿಗಳನ್ನಷ್ಟೇ ಜೊತೆಯಲ್ಲಿ ಕರೆದುಕೊಂಡು ಹೋಗಲ್ಲ. ಜೊತೇಲಿ ಒಂದು ಪ್ಲಾಸ್ಟಿಕ್ ಬ್ಯಾಗನ್ನೂ ತಗಂಡು ಹೋಗ್ತಾರೆ. ಅವರ ನಾಯಿ ಎಲ್ಲಿ ಎರಡು ಮಾಡುತ್ತೋ ಅದನ್ನು ಆ ಬ್ಯಾಗಿಗೆ ಎತ್ತಿ ಹಾಕ್ಕೊಂಡು ಅನಂತರ ಅದನ್ನ ಎಲ್ಲಿ ಹಾಕಬೇಕೋ ಅಲ್ಲಿ ಹಾಕಿಬಿಟ್ಟು ಹೋಗ್ತಾರೆ. ಅದು ಅವರ ನಾಗರಿಕ ಪ್ರಜ್ಞೆ.''

### ಸುದ್ದಿಚಿತ್ರ




ಮೈಸೂರಿನಲ್ಲಿ ತಾ|| ೨೮-೯-೦೪ರಂದು ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಧ್ವನ್ಯಾಲೋಕದ ಸಂಸ್ಥಾಪಕ ನಿರ್ದೇಶಕ ಪ್ರೊ|| ಸಿ. ಡಿ. ನರಸಿಂಹಯ್ಯ ಉದ್ಘಾಟಿಸಿದರು. ಖ್ಯಾತ ವಿಜ್ಞಾನ ಲೇಖಕರುಗಳಾದ ಪ್ರೊ|| ಜಿ. ಟಿ. ನಾರಾಯಣರಾವ್, ಪ್ರೊ|| ಜೆ. ಆರ್. ಲಕ್ಷ್ಮಣರಾವ್ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ನನಗೆ ನಗು ಬರುತ್ತದೆ. ನಮ್ಮಂತಹ ಸಮಾಜದಲ್ಲಿ ಅಂತಹ ನಾಗರಿಕ ಪ್ರಜ್ಞೆ ಸಾಧ್ಯವಾ ಎಂದು! ಯಾವ ಯಾವುದರಲ್ಲೋ ಕೆಡಲಿಕ್ಕೆ, ಫಾರಿನ್ನಿನ ಐಟಂಗಳ ಬಗೆಗೆ ವ್ಯಾಮೋಹ ಹೆಚ್ಚಿಸಿಕೊಳ್ಳುವ ನಾವು ಈ ತರಹದ ಒಳ್ಳೆಯ ಅಭ್ಯಾಸಗಳನ್ನೇಕೆ ನಮ್ಮದಾಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಅಥವಾ ಹೋಗುತ್ತಿಲ್ಲ ಎಂಬುದು ದೊಡ್ಡ ಪ್ರಶ್ನೆಯಾಗುತ್ತದೆ. ಅಂತಹ ನಾಗರಿಕ ಪ್ರಜ್ಞೆ ನಮ್ಮಲ್ಲಿ ಮೂಡಲು ಇನ್ನೆಷ್ಟು ಯುಗಗಳು ಬೇಕೋ!

ನಾಯಿಯುಳ್ಳ ಜನರೇ, ಹಾಗಾಗಿ ಅಂತಹ ದೊಡ್ಡ ನಾಗರಿಕ ಪ್ರಜ್ಞೆ ಮೆರೆಯಲಾಗದಿದ್ದರೂ ಕನಿಷ್ಠಪಕ್ಷ ನನ್ನ ಮತ್ತೊಬ್ಬ ಗೆಳತಿ ಕೊಟ್ಟ ಸುದ್ದಿಯಂತಾದರೂ ನಡೆದುಕೊಳ್ಳಬಹುದಲ್ಲವೆ?

ಆ ಗೆಳತಿ ಒಂದು ಸುದ್ದಿ ಕೊಟ್ಟಿದ್ದಳು. ಯಾವಾಗ ಎನ್ನುತ್ತೀರಾ? ನಾವಾಗ ಸೋಕಾಲ್ಡ್ ವಿದ್ಯಾವಂತರೇ ಇರುವ, 'ನಾಗರಿಕ'ರನ್ನೇ ಒಳಗೊಂಡ ಕ್ವಾರ್ಟರ್ಸ್‌ನಲ್ಲಿದ್ದೆವು. ನಮ್ಮ ರಸ್ತೆಯ ಕೊನೆಯಂಚಿನಲ್ಲಿನ ಕ್ವಾರ್ಟರ್ಸ್‌ನಲ್ಲಿ ಗಂಡ-ಹೆಂಡತಿ ಇಬ್ಬರೂ ವಿದ್ಯಾವಂತರು, ಕೆಲಸದಲ್ಲಿರುವವರು. ಅವರ ಮಕ್ಕಳಾದರೂ ಅಷ್ಟೇ. ಅವರಲ್ಲಿ ಕೊನೆಯ ಮಗಳೊಬ್ಬಳು ದಿನವೂ ತಮ್ಮ ಮನೆಯ ತೋಳದಂತಹ ನಾಯನ್ನು ಹೊರತಂದು ಓಡಾಡಿಸುತ್ತಾ ಕಂಡವರ ಮನೆಯ ಎದುರು ಒಂದಾ, ಎರಡಾ ಮಾಡಿಸಿ ಹೋಗುತ್ತಿದ್ದ ಪುಣ್ಯಾತ್ಮಳು. ನಮ್ಮ ಮನೆಯ ಮುಂದೆಯೂ ದಿನವೂ ಅಷ್ಟಿಷ್ಟು ಹೇಸಿಗೆ. ಅಕ್ಕಪಕ್ಕದವರು ಮಾತನಾಡಲು ಹಿಂಜರಿದಿದ್ದರೂ ನಮ್ಮ ಮಕ್ಕಳು ಅದೇ ಮಣ್ಣಿನಲ್ಲಿ ಆಡುವುದು ಅವರಲ್ಲಿ ಹೆಚ್ಚಿನ ಭಯ ಮೂಡಿಸಿದಂತೆ ಒಂದೆರಡು ಸಲ ಹುಡುಗಿಗೆ ಹಾಗೆ ನಮ್ಮ ಮನೆಯ ಮುಂದೆ ಮಾಡಿಸಬಾರದೆಂದು, ಮಕ್ಕಳು ಅಲ್ಲೆಲ್ಲಾ ಆಟವಾಡುತ್ತಾರೆಂದು ಕಾಂತಾಸಂಹಿತೆಯಲ್ಲಿಯೇ ಹೇಳಿ ಹೇಳಿ, ಸಾಕಾಗಿಹೋಗಿದ್ದರು. ಆದರೆ ಅದಕ್ಕೆ ಅವಳಿಂದ ಉತ್ತರವೇನೂ ಇಲ್ಲದೆ ಬರೇ ದಿವೀನಾದ ಒಂದು ನೋಟವನ್ನು ನಮ್ಮ ಈ ಯಃಕಶ್ಚಿತ್ ಸ್ನೇಹಿತೆಯರ ಕಡೆಗೆ ತೂರಿ ಹೋಗಿಬಿಡುತ್ತಿದ್ದಳಂತೆ. ಮತ್ತೆ ಯಥಾಪ್ರಕಾರ ಮನೆಯ ಮುಂದೆ ನಾಯಿಯ ಎರಡಾ!

ಕೆಲಸಕ್ಕೆ ಹೋಗುವ ನನಗೆ ಅವಳನ್ನು ರೆಡ್‌ಹ್ಯಾಂಡಾಗಿ ಹಿಡಿಯುವುದು, ಏನಾದರೂ ನುಡಿಯುವುದು ಕಷ್ಟಸಾಧ್ಯವೇ. ಒಂದು ಭಾನುವಾರ ಮನೆಯಲ್ಲಿಯೇ ಇರುವಾಗ ಪಕ್ಕದ ಮನೆಯ ಗೆಳತಿಯ ಕೂಗು ಕೇಳಿಸಿತ್ತು. ''ಬನ್ನಿ, ಬನ್ನಿ. ಅವಳು ನಾಯಿ ಹಿಡ್ಕೊಂಡು ಬಂದಿದ್ದಾಳೆ.'' ಕೇಳಿದ್ದೇ ತಡ ನಾನೂ ಓಡಿ ಹೊರಬಂದಿದ್ದೆ.

''ಏನಮ್ಮಾ ಹೀಗೆ ಮಾಡ್ತೀಯಂತಲ್ಲ, ಮಕ್ಕಳೆಲ್ಲಾ ಇಲ್ಲೇ ಆಟ ಆಡ್ತಾರೆ. ಅಷ್ಟೂ ತಿಳಿವಳಿಕೆ ಬೇಡವಾ?'' ನಯವಾಗಿಯೇ ಗೇಟಿನ ಬಳಿ ನಿಂತು ನುಡಿದಿದ್ದೆ. ''ನಾನಲ್ಲ ಆಂಟಿ. ನಮ್ ನಾಯಿ. ಅದಕ್ಕೆ ಏನೂ ಗೊತ್ತಾಗಲ್ಲ'' ಅದೇ ದಿವೀನಾದ ನೋಟ, ಅದೇ ಉಡಾಫೆಯ ಧ್ವನಿ. ಇವಳು ಬೇರೆ ಕೂರಬೇಕಿತ್ತಾ ಇಲ್ಲಿ! ಶಿವ ಶಿವಾ!

ಯೋಚಿಸುತ್ತಿರುವಷ್ಟರಲ್ಲಿ ನಾಯಿಯಾಗಲೆ ನನ್ನ ಕಣ್ಣಮುಂದೆಯೇ ನಮ್ಮ ಕ್ವಾರ್ಟರ್ಸ್ ಮುಂದೆಯೇ ತನ್ನ ಕಾಲುಗಳನ್ನು ತಗ್ಗಿಸಿ ಎರಡಾ ಮಾಡಲು ಆರಂಭಿಸಿಯೇ ಬಿಟ್ಟಿತ್ತು. ಆ ಹುಡುಗಿಯತ್ತ ನೋಡಿದರೆ ಅವಳು ತನ್ನ ದಿವ್ಯಚಕ್ಷುಗಳನ್ನು ದೂರದಲ್ಲೆಲ್ಲೋ ಕಾಣುವ ಗೋಪುರದತ್ತ ನೆಟ್ಟುನಿಂತಿದ್ದಾಳೆ. ಕೋಪದಿಂದ ಹಿಡಿಗಾತ್ರದ ಕಲ್ಲೊಂದನ್ನು ಎತ್ತಿ ನಾಯಿಯತ್ತ ಜೋರಾಗಿ ಒಗೆದಿದ್ದೆ.

''ಎರಡಾ ನೀ ಮಾಡ್ತಾ ಇಲ್ಲ. ನಿನ್ನಂಥ ಹುಡುಗಿಗೂ ಬುದ್ಧಿ ಕಲಿಸಲಿಕ್ಕೆ ಆಗಲ್ಲ. ಆದರೆ ಪಾಪ ನಾಯಿ ಹಾಗಲ್ಲ. ನಾವು ಏನು ಕಲಿಸ್ತೇವೋ ಅದನ್ನ ಕಲೀತದೆ. ನಾಯಿಗೇ ಬುದ್ಧಿ ಕಲಿಸ್ತೀನಿ ನೋಡು.''

ದಿಟ, ನಾಯಿ ಕಲ್ಲೇಟಿನಿಂದ ತನ್ನ ಕೆಲಸ ನಿಲ್ಲಿಸಿ ಮುಂದಕ್ಕೆ ಓಡಿತ್ತು, ಹಿಂದೆ ಚೈನು ಹಿಡಿದಿದ್ದ ಆ ತನ್ನ ಕಿರಿಯ ಮಾಲೀಕಳನ್ನೂ ಎಳೆದೊಯ್ಯತ್ತಾ! ಆಶ್ಚರ್ಯವೆನ್ನಿಸುತ್ತದೆ, ಆ ಹುಡುಗಿಗ್ಯಾಕೆ ಇಂತಹ ಬುದ್ಧಿ ಇತ್ತೆಂದು ಆ ಸಂದರ್ಭದಲ್ಲಿ ನನ್ನ ಗೆಳತಿ ಹೇಳಿದ್ದಳು; ಅವರ ಪರಿಚಯದವರ ಮನೆಯಲ್ಲಿ, ನಾಯಿಗೆ ಒಂದಾ, ಎರಡಾವನ್ನು ಕಕ್ಕಸ್ಸು ಮನೆಯಲ್ಲಿಯೇ ಮಾಡಲು ಕಲಿಸಿದ್ದಾರಂತೆ! ಅದಲ್ಲವೇ ನಾಗರಿಕತೆ. ನಾಯಿಗಾಗಿ ಮನೆ ಕಟ್ಟಿಸುವ ಮಂದಿ ಒಂದು ಕಕ್ಕಸ್ಸನ್ನು ಕಟ್ಟಿಸಿಬಿಟ್ಟರೆ ಎಷ್ಟೆಲ್ಲಾ ಹೇಸಿಗೆಯ ಅಂಶಗಳು ಇಲ್ಲವಾಗುತ್ತವೆ. ಆದರೆ ನಾಯಿಯುಳ್ಳ ಎಷ್ಟು ಜನರು ಈ ಬಗೆಗೆ ಆಲೋಚಿಸುತ್ತಾರೆ, ಕಾರ್ಯರೂಪಕ್ಕಿಳಿಸುತ್ತಾರೆ? ನಮ್ಮದೊಂದು ಕೆಟ್ಟಗುಣ ಇದೆ. ಒಳ್ಳೆಯದೆಲ್ಲವೂ ನಮ್ಮ ಮನೆಯೊಳಗಿರಬೇಕು. ಕೆಟ್ಟದ್ದೆಲ್ಲವೂ ನಮ್ಮ ಮನೆಯ ಕಾಂಪೌಂಡು, ಗೇಟುಗಳ ಆಚೆ ಇರಬೇಕು ಎಂಬುದದು. ನಮ್ಮ ಮನೆಯಿಂದ ಜಗತ್ತಿನ ಅಸ್ತಿತ್ವವನ್ನು ನಾವು ಗುರುತಿಸಿಕೊಳ್ಳುತ್ತೇವೆಯೇ ವಿನಾ ಜಗತ್ತಿನ ಅಸ್ತಿತ್ವದಿಂದ ನಮ್ಮ ಮನೆಯನ್ನು ನಾವು ಗುರುತಿಸಿಕೊಳ್ಳಲು ಹೋಗುವುದಿಲ್ಲ. ಹಾಗಾದ್ದರಿಂದಲೇ ಇಷ್ಟೆಲ್ಲಾ ಅನಾಹುತ. ಅದರದೊಂದು ಸಣ್ಣ ರೂಪ ಈ ನಾಯಿಗಳದು. ಅಲ್ಲಲ್ಲ ನಾಯಿಯುಳ್ಳ ಜನಗಳದ್ದು.

ಕ್ಷಮಿಸಿ ನಾಯಿಯುಳ್ಳ ಜನರೆ. ಕಂಡದ್ದು ಕಂಡ ಹಾಗೆ ಹೇಳಿದರೆ ಯಾರಿಗೇನು ನನಗೂ ಕೆಂಡದಂತಹ ಕೋಪವೇ ಬರುತ್ತದೆ. ಕೋಪ ಬಿಟ್ಟು ಮೇಲಿನೆಲ್ಲದರ ಬಗೆಗೆ ಒಂದೇ ಒಂದು ಬಾರಿ ಆಲೋಚಿಸಿರಿ. ನಾಳೆಯೇ ಅದನ್ನು ಸರಿಪಡಿಸಿಕೊಳ್ಳಲು ಆರಂಭಿಸಿಬಿಡುತ್ತೀರಿ. ಚಿಂತನೆಯೇ ನಮ್ಮನ್ನು ಬೆಳಕಿನೆಡೆಗೆ ಕೊಂಡೊಯ್ಯುತ್ತದೆ. ''ಸರ್ವೇ ಜನಾಃ ಸುಖಿನೋ ಭವಂತು'' ಒಳಗೆ 'ಸಕಲ ಜಾಗಾಃ ಸ್ವಚ್ಛಾ ಭವಂತು'ವೂ ಸೇರಿಕೊಳ್ಳುತ್ತದೆ. ಅದರೊಂದಿಗೆ ನನ್ನಂತಹ ಲಕ್ಷಾಂತರ ಜನರ ಭಯವೂ ಹೋಗುತ್ತದೆ.

ನಾಯಿ ಸಾಕಿರಿ. ನಾಯಿಯ ಬಗೆಗಿನ ನಿಮ್ಮ ಸೈಕಾಲಜಿ ಜಗತ್ತಿನಲ್ಲಿರುವವರೆಲ್ಲರಿಗೂ ತಿಳಿದಿದೆಯೆಂಬ ಭ್ರಮೆ ಬಿಡಿರಿ. ನಿಮ್ಮ ಜೇಬಿನಿಂದ ಕೈಗಳನ್ನು ಹೊರತೆಗೆದು ನಾಯಿ ಚೈನುಗಳನ್ನು ಅದರಲ್ಲಿ ಹಿಡಿಯಿರಿ. ನಿಮ್ಮ ಮತ್ತು ನಿಮ್ಮ ನಾಯಿಯ ವಿಹಾರ 'ವಾಯು'ವಿಗೆ ಮಾತ್ರ ಸೀಮಿತ ಇರಲಿ. ಒಂದಾ ಎರಡಾವನ್ನು ಅದು ಒಳಗೊಳ್ಳದಿರಲಿ. ನನಗೂ ನಾಯಿ ಕಂಡರೆ ಪ್ರೀತಿ ಇದೆ – ಸಾಕಲು ಹೊರಟರೆ ನಾನೂ ಅನಾಗರಿಕಳಾಗಿಹೋದೇನೆಂಬ ಭಯವೂ ಇದೆ – ನಾಯಿ ಸಾಕಾಣಿಕೆ ನಮ್ಮನ್ನು ಅನಾಗರಿಕರನ್ನಾಗಿಸದಿರಲಿ, ಅಷ್ಟೆ.

ಎಂ. ಎಸ್. ವೇದಾ
... ಟಿ. ಕೆ. ಲೇಔಟ್, ಕುವೆಂಪುನಗರ, ಮೈಸೂರು - ೨೩

# ಸ್ವಧರ್ಮೇ ನಿಧನಂ ಶ್ರೇಯಃ.....?

> ಸ್ಮೃತಿಕಾರನ ಸ್ವಧರ್ಮ ಸಂಹಿತೆ ಈಗ ಸತ್ತು ಸಮಾಧಿ ಸೇರಿದೆ. ಮನುಧರ್ಮ ಪರಾಜಯಗೊಂಡು ಮಾನವಧರ್ಮ ವಿಜಯ ದುಂದುಭಿಯನ್ನು ಬಾರಿಸುತ್ತಿದೆ. ವ್ಯಕ್ತಿಯೊಬ್ಬನ ಸ್ವಧರ್ಮ ರೂಪುಗೊಳ್ಳುವ ವೈಖರಿ ಅತ್ಯಂತ ಕೌತುಕಮಯ. ತಂದೆಯಿಂದ ಮಗನಿಗೆ ಬರುವ ವೃತ್ತಿಯನ್ನು ಸ್ವಧರ್ಮ ಎಂದು ಕರೆಯಿಲಾಯಿತಾದರೂ ಅನುವಂಶೀಯತೆಯ ಅಂಶದೊಂದಿಗೆ ಇನ್ನೂ ಕೆಲವು ಅಂಶಗಳು ಸೇರಿಕೊಳ್ಳುತ್ತವೆ. ಉದಾಹರಣೆಗೆ, ವ್ಯಕ್ತಿಯೊಬ್ಬ ಜನಿಸುವ ಪರಿಸರ, ಅವನು ಪಡೆಯುವ ಶಿಕ್ಷಣ, ಅವನಿಗೆ ದೊರೆಯುವ ಸಂಸರ್ಗ, ಅವನ ಮೇಲೆ ಪ್ರಭಾವ ಬೀರುವ ವ್ಯಕ್ತಿಗಳು ಮತ್ತು ವಿಚಾರಗಳು ಇದರಿಂದ ಅವನಲ್ಲಿ ರೂಪುಗೊಳ್ಳುವ ಮನೋಧರ್ಮದ ಸ್ವರೂಪ...... ಇವೆಲ್ಲ ಅಂಶಗಳು ಅವನ ಸ್ವಧರ್ಮವನ್ನು ರೂಪುಗೊಳಿಸುತ್ತವೆ. ಈ ಸ್ವಧರ್ಮ ವಂಶಪಾರಂಪರ್ಯವಾಗಿ ಒಂದು ದತ್ತಕವಾಗಿ ಬಂದಿರಬಹುದಾದಂಥ ವೃತ್ತಿಧರ್ಮ ಆಗಿರಬಹುದು. ಅಥವಾ ತಾನೇ ತನ್ನ ಅಭಿರುಚಿಗೆ ತಕ್ಕಂತೆ ಹೊಸದಾಗಿ ಕಂಡುಕೊಂಡಂಥ ವೃತ್ತಿಧರ್ಮವೇ ಆಗಿರಬಹುದು.

ಯಾವುದು ವ್ಯಕ್ತಿಯೊಬ್ಬನ ತನ್ನದೇ ಆದ ಧರ್ಮವೋ ಅದನ್ನು ಸ್ವಧರ್ಮ ಎಂದು ಕರೆಯಲಾಗುವುದು. ತಂದೆಯಿಂದ ಮಗನಿಗೆ ಕೊಡಲ್ಪಡುವ ವೃತ್ತಿಧರ್ಮವನ್ನೂ ಸ್ವಧರ್ಮ ಎಂದೇ ಕರೆಯಲಾಗುವುದು.

ಸ್ವಧರ್ಮವೇ ಶ್ರೇಷ್ಠ; ಅದು ಯಾವುದೇ ಆಗಿದ್ದರೂ ಸಂಬಂಧಪಟ್ಟ ವ್ಯಕ್ತಿ ಅದನ್ನೇ ಆಚರಿಸಬೇಕು. ಗೀತೆಯಲ್ಲಿ ಈ ಕುರಿತು ಪ್ರಸ್ತಾಪಿಸಲಾಗಿದೆ :

*ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್।*
*ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩.೩೫॥*

ಪರಧರ್ಮ ಸುಲಭವಾಗಿದ್ದರೂ, ತನ್ನ ಧರ್ಮ ವಿಗುಣವಾಗಿದ್ದರೂ ಅದಕ್ಕಿಂತಲೂ ಹೆಚ್ಚು ಶ್ರೇಯಸ್ಕರ. ಸ್ವಧರ್ಮದಲ್ಲಿ ಇದ್ದು ಸಾಯುವುದೇ ಮೇಲು; ಪರಧರ್ಮ ಭಯಂಕರ.

ಗಾಂಧೀಜಿಯವರು ತಮ್ಮ 'ಗೀತಾಮಾತ' ಎಂಬ ಕೃತಿಯಲ್ಲಿ ಈ ಕುರಿತು ವಿಶದೀಕರಿಸಿದ್ದಾರೆ :

''ಸಮಾಜದಲ್ಲಿ ಕಸವನ್ನು ಗುಡಿಸುವ ಧರ್ಮ ಒಬ್ಬನದಾಗಿರಬಹುದು. ಗುಮಾಸ್ತಗಿರಿಯ ಧರ್ಮ ಮತ್ತೊಬ್ಬನದು. ಗುಮಾಸ್ತಗಿರಿ ಕಸ ಗುಡಿಸುವುದಕ್ಕಿಂತ ಉತ್ತಮವೆನಿಸಿಕೊಳ್ಳಲೂಬಹುದು. ಆದರೂ ಕಸ ಗುಡಿಸುವವನು ತನ್ನ ಧರ್ಮವನ್ನು ಬಿಡುವುದರಿಂದ ಧರ್ಮಭ್ರಷ್ಟನಾಗುವನಲ್ಲದೆ, ಸಮಾಜಕ್ಕೂ ಹಾನಿಯಾಗುತ್ತದೆ. ಈಶ್ವರನ ಸಭೆಯಲ್ಲಿ ಇಬ್ಬರ ಸೇವೆಯ ಬೆಲೆಯನ್ನೂ ಅವರವರ ನಿಷ್ಠೆಗೆ ಅನುಸಾರವಾಗಿ ನಿರ್ಣಯ ಮಾಡುತ್ತಾರೆ. ಅಲ್ಲಿ ಎಲ್ಲ ಉದ್ಯೋಗಕ್ಕೂ ಒಂದೇ ಬೆಲೆ. ಇಬ್ಬರೂ ಈಶ್ವರಾರ್ಪಣ ಬುದ್ಧಿಯಿಂದ ತಮ್ಮ ತಮ್ಮ ಕರ್ತವ್ಯ ಮಾಡಿದರೆ, ಇಬ್ಬರೂ ಮೋಕ್ಷಕ್ಕೆ ಸಮಾನ ಅಧಿಕಾರಿಗಳೇ ಆಗುತ್ತಾರೆ.''

ಇಲ್ಲಿ 'ಧರ್ಮ'ವೆಂದರೆ, ವ್ಯಕ್ತಿಯೊಬ್ಬ ತನ್ನ ಜೀವನೋಪಾಯಕ್ಕಾಗಿ ಕೈಗೊಳ್ಳುವ 'ವೃತ್ತಿ' ಅಥವಾ 'ಕರ್ಮ' ಎಂದರ್ಥ. ಪ್ರಾಚೀನ ಕಾಲದಿಂದ ಯಾರು ಯಾರು ಯಾವ ಯಾವ ವೃತ್ತಿಯನ್ನು ಅನುಸರಿಸಿಕೊಂಡು ಬಂದಿದ್ದಾರೋ ಅವರ ಮಕ್ಕಳು - ಮೊಮ್ಮಕ್ಕಳು - ಮರಿಮಕ್ಕಳೂ ಅದನ್ನೇ ಅನುಸರಿಸುವುದು ಸ್ವಧರ್ಮ ಪಾಲನೆಯಾಗುತ್ತದೆ.

ಚಾತುರ್ವರ್ಣ್ಯ ವ್ಯವಸ್ಥೆ ವೇದಗಳಲ್ಲಿ ಪ್ರಸ್ತಾವನೆಯಾಗಿದೆಯಾದರೂ ಪ್ರತಿಯೊಂದು ವರ್ಣದ ಕರ್ಮ ಕರ್ತವ್ಯಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿರುವುದು ಸ್ಮೃತಿಗಳೇ ಆಗಿವೆ. ಪ್ರಾಚೀನ ಕಾಲದ ಸಮಾಜದ ಆಚಾರ ಸಂಹಿತೆಯನ್ನು ವಿಶದೀಕರಿಸುವ ಗ್ರಂಥವೇ ಸ್ಮೃತಿ. ಗೌತಮ ಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ.... ಮೊದಲಾದ ಸ್ಮೃತಿಗಳು ಆ ಕಾಲದಲ್ಲಿ ಬಳಕೆಯಲ್ಲಿದ್ದರೂ ಸಮಾಜದ ಮೇಲೆ ಪ್ರಭಾವಶಾಲಿ ಹಿಡಿತವನ್ನು ಸಾಧಿಸಿದ್ದು ಮನುಸ್ಮೃತಿಯೇ. ಮನುಸ್ಮೃತಿಯ ಕಾಲ ಸರಿಯಾಗಿ ನಿರ್ಣಯವಾಗದಿದ್ದರೂ ರಾಮಾಯಣ ಕಾಲಕ್ಕೇ ಅದು ಪ್ರಚಲಿತವಾಗಿತ್ತು. ಅದು ನಾಲ್ಕೂ ವರ್ಣದವರಿಗೆ ಅನ್ವಯವಾಗುವಂತೆ ಕರ್ಮ ಕರ್ತವ್ಯಗಳನ್ನು ನಿರ್ದೇಶಿಸಿದೆ.

ಬ್ರಾಹ್ಮಣನ ಕರ್ತವ್ಯಗಳು : ಅಧ್ಯಯನ, ಅಧ್ಯಾಪನ, ಯಜ್ಞ ಮಾಡುವುದು, ಯಜ್ಞ ಮಾಡಿಸುವುದು, ದಾನ ತೆಗೆದುಕೊಳ್ಳುವುದು ಮತ್ತು ದಾನ ಕೊಡುವುದು.

ಕ್ಷತ್ರಿಯನ ಕರ್ತವ್ಯಗಳು : ಅಧ್ಯಯನ ಮಾಡುವುದು, ಪ್ರಜಾರಕ್ಷಣೆ ಮಾಡುವುದು,

ಎ. ಆರ್. ನಾರಾಯಣಘಟ್ಟ

ಯಜ್ಞ ಮಾಡುವುದು ಮತ್ತು ದಾನ ಕೊಡುವುದು (ಕ್ಷತ್ರಿಯ - ಅಧ್ಯಾಪನ ಮಾಡುವಂತಿಲ್ಲ, ಯಜ್ಞ ಮಾಡಿಸುವಂತಿಲ್ಲ ಮತ್ತು ದಾನ ತೆಗೆದುಕೊಳ್ಳುವಂತಿಲ್ಲ)

ವೈಶ್ಯನ ಕರ್ತವ್ಯಗಳು : ಅಧ್ಯಯನ ಮಾಡುವುದು, ವ್ಯಾಪಾರ ಮಾಡುವುದು, ಯಜ್ಞ ಮಾಡುವುದು ಮತ್ತು ದಾನ ಕೊಡುವುದು. (ಪ್ರಾರಂಭದಲ್ಲಿ ಕೃಷಿ ಮತ್ತು ಪಶುಪಾಲನೆಯ ಮೇಲ್ವಿಚಾರಣೆಯೂ ಸೇರಿತ್ತು.) (ವೈಶ್ಯ-ಅಧ್ಯಾಪನ ಮಾಡುವಂತಿಲ್ಲ, ಯಜ್ಞ ಮಾಡಿಸುವಂತಿಲ್ಲ ಮತ್ತು ದಾನ ತೆಗೆದುಕೊಳ್ಳುವಂತಿಲ್ಲ)

ಶೂದ್ರನ ಕರ್ತವ್ಯಗಳು : ಮೇಲಿನ ಮೂರೂ ವರ್ಣದವರ ಸೇವೆಯನ್ನು ನಿಷ್ಠೆಯಿಂದ ಮಾಡುವುದು. ಅಂದರೆ, ಸೇವೆಯೇ ಶೂದ್ರನ ಧರ್ಮ.

ಕಾಲಕ್ರಮೇಣ ಕೃಷಿ ಮತ್ತು ಪಶುಪಾಲನೆ ಹಾಗೂ ಇವುಗಳಿಗೆ ಪೂರಕವಾಗುವಂಥ ನೂಲುವುದು, ನೇಯುವುದು, ಕಮ್ಮಾರಿಕೆ, ಕುಂಬಾರಿಕೆ.... ಮೊದಲಾದ ಕೈಗಾರಿಕೆಗಳಲ್ಲಿ ತೊಡಗುವುದು ಮತ್ತು ದಾನಕೊಡುವ ಹಕ್ಕನ್ನು ಶೂದ್ರನಿಗೆ ನೀಡಲಾಯಿತಾದರೂ ಅಧ್ಯಯನ ಮಾಡುವ ಮತ್ತು ಯಜ್ಞ ಮಾಡುವ ಹಕ್ಕನ್ನು ನಿರಾಕರಿಸಲಾಯಿತು. ಯಜ್ಞ ಮಾಡುವ ಅಧಿಕಾರ ಇಲ್ಲದಿದ್ದರೂ ಅಧ್ಯಯನದ ಅಧಿಕಾರವನ್ನು ಶೂದ್ರನಿಗೆ ಕೊಡಬೇಕಾಗಿತ್ತು. ಆದರೆ ಏಕೆ ಕೊಡಲಿಲ್ಲ? ಶೂದ್ರನಿಗೆ ಶಿಕ್ಷಣ ಪಡೆಯುವ ಹಕ್ಕನ್ನು ನಿರಾಕರಿಸಲ್ಪಟ್ಟಿರುವುದನ್ನು ವಿಶ್ಲೇಷಿಸಿದರೆ ಕೆಲವು ಕುತೂಹಲಕಾರಿ ಅಂಶಗಳು ಬೆಳಕಿಗೆ ಬರುತ್ತವೆ :

೧. ಅಕ್ಷರ ವಿದ್ಯೆಯಿಂದ ಶೂದ್ರರು ವಿದ್ಯಾವಂತರಾದರೆ ಶ್ರುತಿ ಮತ್ತು ಸ್ಮೃತಿಗಳಲ್ಲಿ ಉಲ್ಲೇಖವಾಗಿರುವ ಎಲ್ಲ ವಿಷಯಗಳೂ ಅವರಿಗೆ ಗೊತ್ತಾಗಿಹೋಗುತ್ತದೆ. ಅವುಗಳಲ್ಲಿ ಪ್ರಸ್ತಾವನೆಯಾಗಿರುವ ವಿಷಯ-ವಿಚಾರಗಳನ್ನು ವಿಮರ್ಶಿಸುತ್ತಾರೆ. ಅವುಗಳಲ್ಲಿನ ಮೌಢ್ಯ ಮತ್ತು ಅವೈಚಾರಿಕತೆಯ ವಿರುದ್ಧ ದನಿಯೆತ್ತುತ್ತಾರೆ.
೨. ಮೇಲಿನ ಮೂರೂ ವರ್ಣದವರು ದೈಹಿಕ ಶ್ರಮದಿಂದ ಮುಕ್ತರಾಗಿ ಕೈಯನ್ನು ಕೆಸರು ಮಾಡಿಕೊಳ್ಳದೆಯೆ ಬಾಯಿಯನ್ನು ಮೊಸರು ಮಾಡಿಕೊಳ್ಳುವ ತಂತ್ರಗಾರಿಕೆ ಗೊತ್ತಾಗಿಬಿಡುತ್ತದೆ. ತಮ್ಮ ಮೇಲೆ ಮಾತ್ರ ಕಾಯಕ ಹೇರಲ್ಪಟ್ಟಿರುವುದರ ವಿರುದ್ಧ ಬಂಡಾಯ ಹೂಡುತ್ತಾರೆ. ವೈದಿಕರೂ ವಿಧಿಯಿಲ್ಲದೆ ಕಾಯಕ ಮಾಡಬೇಕಾಗುತ್ತದೆ.

೩. ಸಮಾಜದಲ್ಲಿ ಬ್ರಾಹ್ಮಣರು ಗಳಿಸಿಕೊಂಡಿರುವ ಸ್ಥಾನಮಾನಗಳನ್ನು ಶೂದ್ರರೂ ದಕ್ಕಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಬ್ರಾಹ್ಮಣರ ಪೌರೋಹಿತ್ಯ ಮೌಲ್ಯಹೀನ ವಾಗುತ್ತದೆ, ಬ್ರಾಹ್ಮಣರ ಪ್ರಾಮುಖ್ಯ ಕುಸಿದುಹೋಗುತ್ತದೆ.

೪. ಸೇವೆ ಮಾಡುವವರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗಿ ಹೋಗುತ್ತದೆ. ಬ್ರಾಹ್ಮಣರ ಸುಖಜೀವನಕ್ಕೆ ಭಂಗವುಂಟಾಗುತ್ತದೆ.

೫. ವಿದ್ಯಾವಂತರಾದ ಶೂದ್ರರು ಹಳೆಯ ಶಾಸ್ತ್ರಗಳನ್ನು ವಿಮರ್ಶಿಸಿ ಹೊಸ ಶಾಸ್ತ್ರಗಳನ್ನು ಬರೆಯುತ್ತಾರೆ. ರೂಢಿಗತ ಆಚಾರ ಸಂಹಿತೆಗಳು ಉಲ್ಲಟ ಪಲ್ಲಟವಾಗಿ ಮೂರ್ಖ ಬ್ರಾಹ್ಮಣರೂ ಸೇವಕರಾಗುವ ಸಂದರ್ಭ ಸೃಷ್ಟಿಯಾಗುತ್ತದೆ.

ವೈದಿಕರಿಗೆ-ವೈದಿಕ ಧರ್ಮಕ್ಕೆ ಇದೊಂದು ದುರಂತವಾಗುತ್ತದೆ. ಇದು ಸಂಭವಿಸದಿರ ಬೇಕಾದರೆ 'ಸ್ವಧರ್ಮ ಸಿದ್ಧಾಂತ'ವನ್ನು ಸೃಷ್ಟಿಸಿ, ಅದರ ಮಹತ್ವವನ್ನು ಗೋಪುರದ ಮೇಲೆ ನಿಂತು ಸಾರುವುದು ! ಇದಕ್ಕಿಂತ ಬೇರೇನು ತಾನೆ ಹೇಳಲು ಸಾಧ್ಯ ?

ಶೂದ್ರಾತಿಶೂದ್ರರನ್ನು ಶಾಶ್ವತ ಗುಲಾಮಗಿರಿಗೆ ದೂಡುವಂಥ ಈ ಅಪಸಿದ್ಧಾಂತಕ್ಕೆ ಗೀತೆಯಲ್ಲಿ ಕೃಷ್ಣನ ಬಾಯಿಂದ - ಸ್ವಧರ್ಮೇ ನಿಧನಂ ಶ್ರೇಯಃ... ಎಂಬ ಮಾತನ್ನು ಹೇಳಿಸಿ, ಅದಕ್ಕೆ ಧರ್ಮದ ಅಧಿಕೃತ ಮುದ್ರೆಯನ್ನೊತ್ತಿ, ಅದನ್ನು ಧರ್ಮದ ಆಯಾಮದಲ್ಲಿ ಪ್ರತಿಷ್ಠಾಪಿಸಿ,ಅದನ್ನು ಅನುಸರಿಸದಿದ್ದರೆ ಅಧರ್ಮವಾಗುತ್ತದೆ ಮತ್ತು ಅದರಿಂದ ಪಾಪ ಸಂಗ್ರಹವಾಗುತ್ತದೆ ಎಂಬ ಭಯವನ್ನು ಪ್ರಚುರಪಡಿಸಲಾಯಿತು.

ಸ್ವಧರ್ಮ ಪಾಲನೆಯ ಹೆಸರಿನಲ್ಲಿ ಸಮಾಜದ ಒಂದು ವರ್ಗದವರು ದೈಹಿಕ ದುಡಿಮೆಯಿಂದ ತಪ್ಪಿಸಿಕೊಂಡು ಒಂದು ರೀತಿಯಲ್ಲಿ ಹೆಳವರಾದರು. ಸಮಾಜದ ಬಹುಸಂಖ್ಯಾತ ವರ್ಗದವರು ಅಕ್ಷರ ವಿದ್ಯೆಯಿಂದ ವಂಚಿತರಾಗಿ ಒಂದು ರೀತಿಯಲ್ಲಿ ಕುರುಡರಾದರು. ಹೆಳವರು ಮತ್ತು ಕುರುಡರು ಜೀವನ ಪ್ರಯಾಣ ಮಾಡಲೇಬೇಕು; ಅದನ್ನು ಯಾವ ಕಾರಣಕ್ಕೂ ನಿಲ್ಲಿಸುವಂತಿಲ್ಲ. ಆದ್ದರಿಂದ ಕುರುಡನ ಮೇಲೆ ಹೆಳವನು ಕುಳಿತು ಈ ಪಯಣ ಮಾಡಬೇಕಾಯಿತು. ಎಷ್ಟೋ ವರ್ಷಗಳ ಕಾಲ ಈ ಹೀನ ಪಯಣ ಸಾಗಿತು. ಈ ಅವಾಂತರಕ್ಕೆ ಆಚಾರ ಸಂಹಿತೆಯಾಗಿ ಧಾರ್ಮಿಕ ಮುದ್ರೆಯನ್ನು ಪಡೆದುಕೊಂಡ 'ಸ್ವಧರ್ಮ ಸಿದ್ಧಾಂತ'ವೇ ಕಾರಣ.

ಪ್ರಾಚೀನ ಭಾರತದಲ್ಲಿ ಸಾರ್ವಜನಿಕ ಶಿಕ್ಷಣ ವ್ಯವಸ್ಥೆ ಎಂಬುದೇನೂ ಇರಲಿಲ್ಲ. ಅಲ್ಲಲ್ಲಿ ಕೆಲವು ಗುರುಕುಲಗಳಿದ್ದವು. ಅವುಗಳಲ್ಲಿ ಶಿಕ್ಷಣ ಪಡೆಯುತ್ತಿದ್ದವರು ಬಹುತೇಕ ಬ್ರಾಹ್ಮಣರು ಮತ್ತು ಕ್ಷತ್ರಿಯರು. ವೈಶ್ಯರಿಗೆ ಹೆಚ್ಚಿನ ಶಿಕ್ಷಣ ಬೇಕೆನಿಸಲಿಲ್ಲ. ವ್ಯಾಪಾರ-ವಾಣಿಜ್ಯ ಚಟುವಟಿಕೆಗಳಿಗೆ ಎಷ್ಟು ಬೇಕೋ ಅಷ್ಟಾದರೆ ಅವರಿಗೆ ಸಾಕಾಗಿತ್ತು. ಮುಖ್ಯವಾಗಿ ಲೆಕ್ಕಾಚಾರಕ್ಕೆ ಬೇಕಾದ ಅಂಕಗಣಿತದ ಜತೆಗೆ ಒಂದಷ್ಟು ಓದು ಬರೆಹದಲ್ಲಿ ಅವರು ಸುಖವಾಗಿದ್ದರು. ಆದರೆ ಯಾವುದೇ ಒಂದು ಗುರುಕುಲದಲ್ಲಿ ಶೂದ್ರರು ಶಿಕ್ಷಣ ಪಡೆದುದಕ್ಕೆ ಎಲ್ಲಿಯೂ ಉದಾಹರಣೆಗಳು ದೊರೆಯುವುದಿಲ್ಲ. ಮಹಾಭಾರತ ಕಾಲಕ್ಕೂ ಮೊದಲೇ ಧರ್ಮಜಿಜ್ಞಾಸೆಯಲ್ಲಿ ಖ್ಯಾತಿ ಪಡೆದಿದ್ದ ಧರ್ಮವ್ಯಾಧನ ಕಥೆ ಕೇವಲ ಕಾಲ್ಪನಿಕ. ವೈದಿಕ ಸೇವೆಯಲ್ಲಿ ನಿರತವಾಗಿದ್ದ ಶೂದ್ರರಲ್ಲಿ ಕೆಲವರು ಕುತೂಹಲಿಗಳು, ಮಹತ್ವಾಕಾಂಕ್ಷಿಗಳು ವೈದಿಕರ ಸಂಪರ್ಕದಿಂದ ಅಷ್ಟಿಷ್ಟು ಕಲಿತುಕೊಂಡಿರಬಹುದಷ್ಟೆ. ಆದರೆ ಅವರು ವೇದಮಂತ್ರಗಳನ್ನು ಕೇಳಿಸಿ ಕೊಳ್ಳುವಂತಿರಲಿಲ್ಲ ಮತ್ತು ಉಚ್ಚರಿಸುವಂತಿರಲಿಲ್ಲ. ಪ್ರಾಚೀನ ಭಾರತದ ನಲಂದಾ ಮತ್ತು ತಕ್ಷಶಿಲಾ ವಿಶ್ವವಿದ್ಯಾಲಯಗಳು ವಿಶ್ವವಿಖ್ಯಾತವಾಗಿದ್ದರೂ ಶೂದ್ರರಿಗೆ ಅವುಗಳ ಬಾಗಿಲುಗಳು ಸದಾ ಮುಚ್ಚಿರುತ್ತಿದ್ದವು. ಶೂದ್ರರು ಅಕ್ಷರ ವಿದ್ಯೆಯಿಂದ ವಂಚಿತರಾದರೂ ತಮ್ಮ ಜೀವನಾನುಭವದಿಂದ ಸೃಷ್ಟಿಸಿದ ಜನಪದ ಕಾವ್ಯ – ಅಕ್ಷರ ರೂಪವನ್ನು ಪಡೆಯದೆ ಧ್ವನಿ ಮಾಧ್ಯಮದಲ್ಲೇ ಇದ್ದರೂ – ವೈದಿಕ ವಿದ್ಯಾವಂತರು ಸೃಷ್ಟಿಸಿದ ಕಾವ್ಯವನ್ನೂ ಮೀರಿಸುವಂಥ ಸತ್ವವನ್ನು ಪಡೆದುಕೊಂಡಿದೆ !

ಕೃಷಿ, ಪಶುಪಾಲನೆ, ಕೈಗಾರಿಕೆಗಳಿಂದ ದೇಶ ಸಂಪದ್ಭರಿತವಾಯಿತೇ ವಿನಾ ವೇದಮಂತ್ರ ಪಠಣದಿಂದ, ಯಜ್ಞಯಾಗಾದಿಗಳಿಂದ ಅಲ್ಲ ಎಂಬುದನ್ನು ಸಾಮಾಜಿಕ ಜೀವನದ ಇತಿಹಾಸವನ್ನು ವಿಶ್ಲೇಷಿಸಿದರೆ ಅರಿಯಬಹುದು. ಇದೆಲ್ಲ ಸ್ವಧರ್ಮ ಎಂಬ ಪ್ರಮಾದಪೂರ್ಣ ಸಂಹಿತೆಯ ದೆಸೆಯಿಂದ ಸಂಭವಿಸಿದ್ದು. ವರ್ಷಗಳು ಉರುಳಿದಂತೆ ವೈದಿಕ ಧರ್ಮದ ವಿರುದ್ಧ ನಡೆದ ಬಂಡಾಯದಿಂದ ಜೈನ-ಬೌದ್ಧ ಧರ್ಮಗಳು ಉದಯಿಸಿದ ಮೇಲೆ, ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ನಿಂದಾಪಮಾನಗಳಿಗೆ ಗುರಿಯಾಗಿದ್ದ ಶೂದ್ರಾತಿಶೂದ್ರರೂ ಅಂತ್ಯಜರೂ ನೂತನ ಧರ್ಮಗಳನ್ನು ಆಶ್ರಯಿಸಿ, ಸ್ಮೃತಿಗಳು ವಿಧಿಸಿದ್ದ ಸ್ವಧರ್ಮ ಸಂಹಿತೆಯ ಶೃಂಖಲೆಗಳನ್ನು ಕಿತ್ತೆಸೆದು ಸ್ವತಂತ್ರರಾಗಿ, ಯಾರು ಯಾವ ವೃತ್ತಿಯನ್ನಾದರೂ ನಿರ್ವಹಿಸುವಂಥ ಹೊಸ ಆಯಾಮವನ್ನು ಕಂಡುಕೊಂಡರು.

ಶೂದ್ರ ವಿದ್ಯೆ ಕಲಿತು ವಿಪ್ರನಾದ; ಕ್ಷತ್ರಿಯ ನೇಗಿಲು ಹಿಡಿದು ಶೂದ್ರನಾದ. ಶೂದ್ರರೂ, ಕ್ಷತ್ರಿಯರೂ ಬ್ರಾಹ್ಮಣರ ಬೀಗರಾಗಲು ಯಾವ ಸಂಹಿತೆಯೂ ಅಡ್ಡಿಬರಲಿಲ್ಲ. ಈ ಪರಿವರ್ತನೆಗೆ ವಂಶಪಾರಂಪರ್ಯ ಸಿದ್ಧಾಂತವೂ ತಡೆಯಾಗಲಿಲ್ಲ. ಅಧ್ಯಾಪನ ಮತ್ತು ತೋಟಗಾರಿಕೆಯಲ್ಲಿ ಮೇಲು-ಕೀಳು ಕಾಣಿಸಿಕೊಳ್ಳಲಿಲ್ಲ. ಎಲ್ಲ ವೃತ್ತಿಗಳೂ ಸಮಾನ ಮೌಲ್ಯವನ್ನು ಗಳಿಸಿ ಪವಿತ್ರವೇ ಆದವು. ಸಮಾಜಾಭಿವೃದ್ಧಿಗೆ ಎಲ್ಲ ವೃತ್ತಿಗಳೂ ಬೇಕು; ಎಲ್ಲವೂ ಪರಸ್ಪರ ಸಮಾನ ಎಂಬ ಪರಿಕಲ್ಪನೆಯಿಂದ ದೈಹಿಕ ದುಡಿಮೆ ಅರ್ಥಾತ್ ಕಾಯಕ ಗೌರವಯುತ ಸ್ಥಾನವನ್ನು ಪಡೆದುಕೊಂಡಿತು. ಬಳೆಗಾರ ಮನೆತನದಲ್ಲಿ ಹುಟ್ಟಿದ ರನ್ನ ವಿದ್ಯಾಭ್ಯಾಸದಿಂದ ಅತಿಶಯ ಪ್ರತಿಭೆ-ಪಾಂಡಿತ್ಯಗಳನ್ನು ಗಳಿಸಿ ಮಹಾಕವಿಯಾದ. ಅತಿಶೂದ್ರನಾದ ಕನಕದಾಸ ಸ್ವಯಂ ಪ್ರತಿಭೆಯಿಂದ ದಾಸಶ್ರೇಷ್ಠ ಕವಿಯಾದ. ಶರಣರ ಕಾಲದಲ್ಲಿ ಶೂದ್ರರೂ ಅತಿಶೂದ್ರರೂ ದಲಿತರೂ ಅನುಭಾವಿಗಳಾಗಿ ಕಾವ್ಯಕ್ಕೆ ಸರಿಮಿಗಿಲಾಗುವಂಥ ವಚನಗಳನ್ನು ರಚಿಸಿ ಚಾತುರ್ವರ್ಣ್ಯ ವ್ಯವಸ್ಥೆಯನ್ನು ಎತ್ತಿ ಹಿಡಿಯುವ ವೈದಿಕ ಧರ್ಮದ ಪೊಳ್ಳುತನವನ್ನು ಬಯಲಿಗೆಳೆದರು.

ಬ್ರಿಟಿಷರು ಭಾರತಕ್ಕೆ ಬಂದಮೇಲೆ ದೇಶದ ಸ್ಥಿತಿಗತಿಗಳೆಲ್ಲ ಬದಲಾದವು. ಅವರು ರಾಷ್ಟ್ರದ ಸಂಪತ್ತನ್ನು ಕೊಳ್ಳೆ ಹೊಡೆದು ಭಾರತೀಯರ ಮೇಲೆ ದಬ್ಬಾಳಿಕೆ ನಡೆಸಿದರೂ ಕೆಲವು ಉಪಯುಕ್ತ ಕೆಲಸ ಕಾರ್ಯಗಳನ್ನೂ ಮಾಡಿದ್ದಾರೆ. ಅವುಗಳಲ್ಲಿ ಅತ್ಯಂತ ಮುಖ್ಯವಾದುದು ಸಾರ್ವಜನಿಕ ಶಿಕ್ಷಣ ವ್ಯವಸ್ಥೆ. ಶಿಕ್ಷಣದ ಬಗೆಗೆ ಅತ್ಯಂತ ಕಳಕಳಿಯನ್ನು ಹೊಂದಿದ್ದ ಶೂದ್ರರೂ ಅತಿಶೂದ್ರರೂ ಮತ್ತು ದಲಿತರೂ ಈ ಸುವರ್ಣಾವಕಾಶವನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡು ವಿದ್ಯಾವಂತರಾಗಿ ಅರಿವಿನ ಹಬ್ಬವನ್ನೇ ಆಚರಿಸಿದರು. ಸಾಮಾಜಿಕವಾಗಿ ಕೆಳವರ್ಗದವರಾಗಿದ್ದವರು ಶ್ರದ್ಧಾಸಕ್ತಿಗಳಿಂದ ವಿದ್ಯಾಭ್ಯಾಸ ಮಾಡಿ ಮೇಲ್ವರ್ಗದವರನ್ನು ಮೀರಿಸಿ ಮುನ್ನಡೆದರು. ಅಕ್ಷರ ವಿದ್ಯೆಯಿಂದ ವಂಚಿತರಾದವರು ಅಕ್ಷರವಿದ್ಯಾ ಸಾರ್ವಭೌಮರಾಗಿ, ಬ್ರಾಹ್ಮಣರು ವಿಸ್ಮಯಪಡುವಂತೆ ಹೊಸ ಹೊಸ ಮಾರ್ಗಗಳನ್ನು ನಿರ್ಮಿಸಿ ಮುನ್ನಡೆದರು. ಕುವೆಂಪು ಮತ್ತು ಅಂಬೇಡ್ಕರ್ ಇದಕ್ಕೆ ಜ್ವಲಂತ ಉದಾಹರಣೆ.

ಸ್ಮೃತಿಕಾರನ ಸ್ವಧರ್ಮ ಸಂಹಿತೆ ಈಗ ಸತ್ತು ಸಮಾಧಿ ಸೇರಿದೆ. ಮನುಧರ್ಮ ಪರಾಜಯಗೊಂಡು ಮಾನವಧರ್ಮ ವಿಜಯ ದುಂದುಭಿಯನ್ನು ಬಾರಿಸುತ್ತಿದೆ. ವ್ಯಕ್ತಿಯೊಬ್ಬನ ಸ್ವಧರ್ಮ ರೂಪುಗೊಳ್ಳುವ ವೈಖರಿ ಅತ್ಯಂತ ಕೌತುಕಮಯ. ತಂದೆಯಿಂದ ಮಗನಿಗೆ ಬರುವ ವೃತ್ತಿಯನ್ನು ಸ್ವಧರ್ಮ ಎಂದು ಕರೆಯಲಾಯಿತಾದರೂ ಅನುವಂಶೀಯತೆಯ ಅಂಶದೊಂದಿಗೆ ಇನ್ನೂ ಕೆಲವು

## ಸುದ್ದಿಚಿತ್ರ



ಬೆಂಗಳೂರಿನ ಬನಶಂಕರಿ ೧ನೇ ಹಂತ, ಶ್ರೀನಿವಾಸನಗರದ ಬನಶಂಕರಿ ಹೌಸ್‌ನಲ್ಲಿ ನಡೆದ ನವಕರ್ನಾಟಕ ಪುಸ್ತಕ ಪ್ರದರ್ಶನದ ಒಂದು ದೃಶ್ಯ.

ಅಂಶಗಳು ಸೇರಿಕೊಳ್ಳುತ್ತವೆ. ಉದಾಹರಣೆಗೆ, ವ್ಯಕ್ತಿಯೊಬ್ಬ ಜನಿಸುವ ಪರಿಸರ, ಅವನು ಪಡೆಯುವ ಶಿಕ್ಷಣ, ಅವನಿಗೆ ದೊರೆಯುವ ಸಂಸರ್ಗ, ಅವನ ಮೇಲೆ ಪ್ರಭಾವ ಬೀರುವ ವ್ಯಕ್ತಿಗಳು ಮತ್ತು ವಿಚಾರಗಳು ಇದರಿಂದ ಅವನಲ್ಲಿ ಸಂಕೀರ್ಣವಾಗಿ ರೂಪುಗೊಳ್ಳುವ ಮನೋಧರ್ಮದ ಸ್ವರೂಪ.... ಇವೆಲ್ಲ ಅಂಶಗಳು ಅವನ ಸ್ವಧರ್ಮವನ್ನು ರೂಪುಗೊಳಿಸುತ್ತವೆ. ಈ ಸ್ವಧರ್ಮ ವಂಶಪಾರಂಪರ್ಯವಾಗಿ ಒಂದು ದತ್ತಕವಾಗಿ ಬಂದಿರಬಹುದಾದಂಥ ವೃತ್ತಿಧರ್ಮ ಆಗಿರಬಹುದು. ಅಥವಾ ತಾನೇ ತನ್ನ ಅಭಿರುಚಿಗೆ ತಕ್ಕಂತೆ ಹೊಸದಾಗಿ ಕಂಡುಕೊಂಡಂಥ ವೃತ್ತಿಧರ್ಮವೇ ಆಗಿರಬಹುದು. ಉನ್ನತ ಶಿಕ್ಷಣ ಪಡೆದ ಶೂದ್ರ ಅಧ್ಯಾಪಕನಾಗಬಹುದು : ಸಾಧಾರಣ ಶಿಕ್ಷಣಕ್ಕೇ ತೃಪ್ತಿಪಡೆದ ಬ್ರಾಹ್ಮಣ ಕೃಷಿಕನಾಗಬಹುದು. ಈ ಎರಡೂ ವೃತ್ತಿಗಳು ಸಾಮಾಜಿಕ ವಿಕಸನಕ್ಕೆ ಅಗತ್ಯವಾದವುಗಳಾದ್ದರಿಂದ ಮೇಲು-ಕೀಳು ಎನ್ನುವ ಸ್ಥಾನಮಾನ ಪಡೆಯುವುದಿಲ್ಲ. ಪ್ರತಿಯೊಂದು ಕರ್ಮವೂ ಅರ್ಪಣ ಮನೋಭಾವದಿಂದ ಕೂಡಿದ್ದರೆ ಅದು ನಿಷ್ಕಾಮ ಕರ್ಮವಾಗಿ ಶ್ರೇಷ್ಠತೆಯನ್ನು ಪಡೆಯುತ್ತದೆ.

ಬೌದ್ಧಿಕವಾಗಿ ಮೂರನೇ ದರ್ಜೆಯ ಬ್ರಾಹ್ಮಣ ಅಧ್ಯಾಪಕನಾಗುವುದಕ್ಕಿಂತ ಪ್ರಥಮ ದರ್ಜೆಯ ಶೂದ್ರ ಅಧ್ಯಾಪಕನಾದರೆ ಸಮಾಜಕ್ಕೆ ಒಳಿತಲ್ಲವೆ? ಸದಾ ಬೌದ್ಧಿಕ ಕ್ರಿಯೆಗಳಲ್ಲಿ ತೊಡಗಿರುವ ಶೂದ್ರನಿಗಿಂತ ಕಾಯಕದಲ್ಲಿ ಒಲವುಳ್ಳ ಬ್ರಾಹ್ಮಣ ಕೃಷಿ ಕ್ರಿಯೆಗಳಲ್ಲಿ ತೊಡಗುವುದು ಒಳಿತಲ್ಲವೆ? ಇದೇ ಅಲ್ಲವೆ ನಿಜವಾದ ಸ್ವಧರ್ಮ? ಆದರೆ ಬ್ರಾಹ್ಮಣರು ಈ ತತ್ವವನ್ನು ಅನುಮೋದಿಸುತ್ತಾರೆಯೆ? ಗೀತೆಯಲ್ಲಿ ಹೇಳಲ್ಪಟ್ಟಿರುವ ಸ್ವಧರ್ಮಕ್ಕೂ ಈ ಧಾರ್ಮಿಕ ಧುರಂಧರರು ಹೇಳುತ್ತಿರುವ ಸ್ವಧರ್ಮಕ್ಕೂ ಏನೇನೂ ಸಂಬಂಧವಿಲ್ಲ. ಸ್ವಧರ್ಮ ಈಗ ವೃತ್ತಿ ಧರ್ಮದ ಸಂಬಂಧವನ್ನು ಗೌಣಗೊಳಿಸಿ ಮತಧರ್ಮದ ಸಂಬಂಧವನ್ನು ಪ್ರಾಧಾನ್ಯಗೊಳಿಸುತ್ತಿದೆ. ಹಾಗೆಂದರೆ, ವ್ಯಕ್ತಿಯೊಬ್ಬ ತಾನು ಯಾವ ಧರ್ಮದಲ್ಲಿ ಹುಟ್ಟಿದ್ದಾನೋ ಅದೇ ಅವನ ಸ್ವಧರ್ಮ ಎನ್ನುವ ಅರ್ಥ ವಿಸ್ತರಣೆಯನ್ನು ಪಡೆದುಕೊಂಡಿದೆ. ಹಾಗಾದರೆ ಇದು ಚಾಲ್ತಿಗೆ ಬಂದುದಾದರೂ ಹೇಗೆ ಮತ್ತು ಏಕೆ? ಚಿಂತಿಸಬೇಕಾದ ವಿಷಯ.

ಹಿಂದೂ ಧರ್ಮವೆಂದು ಕರೆಯಲಾಗುತ್ತಿರುವ ವೈದಿಕಧರ್ಮ ಮತ್ತು ಅವೈದಿಕ ಧರ್ಮಗಳಾದ ಬೌದ್ಧಧರ್ಮ, ಜೈನಧರ್ಮ, ಕ್ರೈಸ್ತ ಧರ್ಮ, ಇಸ್ಲಾಂಧರ್ಮ, ವೀರಶೈವ ಧರ್ಮ, ಸಿಖ್‌ಧರ್ಮ.... ಇವೇ ಮೊದಲಾದ ಮತಧರ್ಮಗಳನ್ನೇ ಈಗ 'ಧರ್ಮ' ಎಂಬ ಪರಿಭಾಷೆಯಲ್ಲಿ ಕರೆಯಲಾಗುತ್ತಿದೆ. ವೈದಿಕ ಧರ್ಮ ವಿಕಸನಗೊಂಡಂತೆ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಎಂಬ ಮೂರು ಶಾಖೆಗಳು ಹುಟ್ಟಿಕೊಂಡವು. ಯಾರು ಯಾರು ಈ ಧಾರ್ಮಿಕ ಪಂಥಗಳಲ್ಲಿ ಹುಟ್ಟಿ ಅದನ್ನು ಅನುಸರಿಸಿಕೊಂಡು ಬರುತ್ತಿರುವರೋ ಅವರ ಮಕ್ಕಳೂ ಸಹ ಆಯಾಯ ಧರ್ಮವನ್ನೇ ನಂಬಬೇಕು ಮತ್ತು ಅದರ ಸಿದ್ಧಾಂತಕ್ಕನುಸಾರವಾಗಿಯೇ ಜೀವನ ಶೈಲಿಯನ್ನು ರೂಪಿಸಿಕೊಳ್ಳಬೇಕು. ಇದೇ ಸ್ವಧರ್ಮ ಎಂದು ಈಗ ಎಲ್ಲ ಮಠಾಧಿಪತಿಗಳೂ ಹೇಳುತ್ತಾರೆ. ಸ್ಮಾರ್ತ, ಸ್ಮಾರ್ತನಾಗೇ ಬದುಕಿ, ಸಾಯಬೇಕು. ಹಾಗೆಯೇ ಮಾಧ್ವ ಮತ್ತು ಶ್ರೀ ವೈಷ್ಣವ. ಇವರು ಯಾರೂ ಜೈನ, ಬೌದ್ಧ.... ಇತ್ಯಾದಿ ಅವೈದಿಕ ಧರ್ಮಗಳನ್ನು ಅವಲಂಬಿಸಬಾರದು. ಹಾಗೆ ಮಾಡಿದರೆ ಅದು ಮತಾಂತರವಾಗುತ್ತದೆ. ಮತಾಂತರ ಎಂದರೆ ಧರ್ಮಾಂತರ; ಸ್ವಧರ್ಮದ ಉಲ್ಲಂಘನೆ – ಎಂಬ ಅಭಿಪ್ರಾಯ ರೂಪುಗೊಂಡಿದೆ. ಇದು ಕೇವಲ ಬ್ರಾಹ್ಮಣರಿಗೆ ಮಾತ್ರ ಅನ್ವಯಿಸುತ್ತದೆ. ಕ್ಷತ್ರಿಯ ಮತ್ತು ವೈಶ್ಯರಲ್ಲಿ ಈ ಶಾಖೆಗಳಿಲ್ಲ. ಇವರಲ್ಲಿ ಶೈವ ಅಥವಾ ವೈಷ್ಣವ ಪಂಥಗಳಿವೆಯಷ್ಟೆ. ಶೂದ್ರರು ವೈದಿಕರಲ್ಲದಿರುವುದರಿಂದ ಅವರು ಯಾವ ಶಾಖೆಗೂ ಒಳಪಡುವುದಿಲ್ಲ. ಆದ್ದರಿಂದ ಇವರು ಯಾವುದೇ ಧಾರ್ಮಿಕ ಪಂಥಕ್ಕೆ ಸೇರಿದವರಲ್ಲ. ಇವರ ಪೂರ್ವಜರು ಕೇವಲ ಬ್ರಾಹ್ಮಣರ ಕಿಂಕರರಾಗಿದ್ದವರು ಮಾತ್ರ.

ಆಯಾಯಾ ಪ್ರದೇಶದಲ್ಲಿ ಶೈವ ಬ್ರಾಹ್ಮಣರನ್ನು ಸೇವಿಸುತ್ತಿದ್ದ ಶೂದ್ರರು ಶೈವರಾದರು; ವೈಷ್ಣವ ಬ್ರಾಹ್ಮಣರನ್ನು ಸೇವಿಸುತ್ತಿದ್ದ ಶೂದ್ರರು ವೈಷ್ಣವರಾದರು.



## ಬಾದಾಮಿಯಲ್ಲಿ ಕಂಡದ್ದು

ಬನಶಂಕರಿಯ ಎದುರಿನಲ್ಲಿ  
ಉರಿ- ಉರಿ ಬಿಸಿಲಿನಲ್ಲಿ  
ಮಾರುತ್ತಾರೆ ಹೆಂಗಸರು-  
ರೊಟ್ಟಿ-ಪಲ್ಯೆ-ಮೊಸರು ;  
ಚೌಕಾಸಿ ಮಾಡಿ ಕಾಸು ಉಳಿಸುತ್ತಾರೆ-  
'ಏಸಿ'ಕಾರಿನ ಪ್ರವಾಸಿ ಗಂಡಸರು !

ಅಲಕ ತೀರ್ಥಹಳ್ಳಿ  
ಅಲಕ, ನಂ.೮೨, ತ್ಯಾಗರಾಜ ರಸ್ತೆ  
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ-೫೭೭೪೩೨

ಅದೇ ಅವರ ಸ್ವಧರ್ಮವಾಯಿತು. ಅವರ ಪೀಳಿಗೆಯವರು ತಮ್ಮ ಪೂರ್ವಜರ ಧರ್ಮವನ್ನೇ ಅನುಸರಿಸಿಕೊಂಡು ಬಂದರು. ಈಗ ಅದೇ ಅವರಿಗೆ ಸ್ವಧರ್ಮ ಎಂಬಂತಾಗಿದೆ. ಯಾವುದೇ ಒಂದು ಅವೈದಿಕ ಧರ್ಮದಲ್ಲಿ ಸ್ವಧರ್ಮ ಎಂಬ ತತ್ವಶೃಂಖಲೆ ಇಲ್ಲ. ಅಲ್ಲಿ ಎಲ್ಲವೂ ಮುಕ್ತ. ಸಾಮಾಜಿಕ ಸಮಾನತೆ ಮತ್ತು ಸಮಾನ ಸಹೋದರತೆ ಈ ಧರ್ಮಗಳಲ್ಲಿ ಓತಪ್ರೋತವಾಗಿ ಹರಡಿಕೊಂಡಿದೆ. ಎಲ್ಲ ವೃತ್ತಿಗಳೂ ಪರಸ್ಪರ ಸಮಾನ. ಸ್ವಧರ್ಮದಲ್ಲೇ ಇರಬೇಕು ; ಪರಧರ್ಮಕ್ಕೆ ಪ್ರವೇಶಿಸಬಾರದು ಎಂದು ಅವೈದಿಕ ಧರ್ಮದವರು ಹೇಳುವುದಿಲ್ಲ. ಅದನ್ನು ಹೇಳುವವರು ವೈದಿಕ ಧರ್ಮದ ಮುಖಂಡರು. ಅದರಲ್ಲೂ ಬ್ರಾಹ್ಮಣ್ಯವನ್ನು ಪೋಷಿಸುತ್ತಿರುವ ಬ್ರಾಹ್ಮಣರು.

ಬ್ರಾಹ್ಮಣರು ಬೇರೆ ಬೇರೆ ಧರ್ಮಗಳಿಗೆ ಹೋಗುವುದಿಲ್ಲ. ಏಕೆಂದರೆ ಅವೆಲ್ಲಾ ಅವೈದಿಕ ಧರ್ಮಗಳು. ಅಲ್ಲಿ ಸಮಾನತೆ ನೆಲೆಸಿರುವುದರಿಂದ ಸಮಾನತೆಯ ವಿರೋಧಿಗಳಾದ ವೈದಿಕರು-ಬ್ರಾಹ್ಮಣರು ಅವೈದಿಕ ಧರ್ಮಗಳಿಗೆ ಹೋದರೆ ಸ್ಮೃತಿಗಳು ದತ್ತಕವಾಗಿ ನೀಡಿರುವ ಸಾಮಾಜಿಕ-ಧಾರ್ಮಿಕ ಯಾಜಮಾನ್ಯದಿಂದ ವಂಚಿತರಾಗಿ ಆ ಧರ್ಮಗಳವರೊಂದಿಗೆ ಸಮಾನತೆಗೆ ಸಮ್ಮತಿಸಬೇಕಾಗುತ್ತದೆ. ಇತ್ತ ವೈದಿಕರೂ ಅಲ್ಲದ, ಅತ್ತ ಅವೈದಿಕರೂ ಅಲ್ಲದ ಶೂದ್ರರು ಮತ್ತು ದಲಿತರು ಅನ್ಯ ಧರ್ಮಗಳಿಗೆ ಹೋಗಕೂಡದೆಂದು ತಾಕೀತು ಮಾಡುವವರು ಬ್ರಾಹ್ಮಣ ಧುರಂಧರರು. ಯಾಕೆ ಹಾಗೆ ಹೇಳುತ್ತಾರೆ? ಶೂದ್ರರು, ಸ್ಮೃತಿಗಳ ಪ್ರಕಾರ ಬ್ರಾಹ್ಮಣರ ದಾಸರು. ಅವರು ಅನ್ಯಧರ್ಮಗಳಿಗೆ ಹೊರಟುಹೋದರೆ ತಮಗೆ ಸೇವೆ ಮಾಡುವವರು ಯಾರು? ಅಲ್ಲದೆ ಬ್ರಾಹ್ಮಣರು ಯಾರ ಮೇಲೆ ತಮ್ಮ ಯಾಜಮಾನ್ಯವನ್ನು ಸ್ಥಾಪಿಸಬೇಕು? ಪುರೋಹಿತ ವರ್ಗದವರು ಸುಖಜೀವನ ನಡೆಸುವುದಾದರೂ ಹೇಗೆ? ಆದ್ದರಿಂದ ಸ್ವಧರ್ಮದ ಹೆಸರಿನಲ್ಲಿ ಈ ವರ್ಗದ ಜನಕೋಟಿಯನ್ನು ಇವರಿಗೆ ಅರಿವಿಲ್ಲದ ರೀತಿಯಲ್ಲಿ ಬಂಧಿಸಿಡಲಾಗಿದೆ – ಧಾರ್ಮಿಕ ಬಯಲು ಬಂದೀಖಾನೆಯಲ್ಲಿ!

ವೈದಿಕ ಧರ್ಮವನ್ನೇ ಹಿಂದೂಧರ್ಮವೆಂದು ಕರೆದು, ಶೂದ್ರಾದಿಗಳು ವೈದಿಕರಲ್ಲದಿದ್ದರೂ ಹಿಂದುಗಳೆಂದು ಕರೆಸಿಕೊಂಡು ಬ್ರಾಹ್ಮಣ ಪುರೋಹಿತರಿಗೆ ತಮ್ಮನ್ನು ಒಪ್ಪಿಸಿಕೊಂಡಿದ್ದಾರೆ. 'ಸ್ವಧರ್ಮೇ ನಿಧನಂ ಶ್ರೇಯಃ......' ಎಂಬ ತಂತ್ರಗಾರಿಕೆಯ ಬ್ರಾಹ್ಮಣ ಜಗದ್ಗುರುಗಳ ಅವೈಜ್ಞಾನಿಕ ವ್ಯಾಖ್ಯಾನವನ್ನು ವಿಮರ್ಶೆ ಮಾಡುವ ಗೋಜಿಗೆ ಹೋಗದೆ, ವಿದ್ಯಾವಂತರಾದರೂ ಹಲವಾರು ಪದವಿಗಳನ್ನು ಸಂಪಾದಿಸಿದ್ದರೂ ತಮ್ಮ ಚಿಂತನ ಶಕ್ತಿಯನ್ನು ಜಾಗೃತಗೊಳಿಸದೆ ಶೂದ್ರವರ್ಗದವರು ಮೌಢ್ಯದೊಂದಿಗೆ ಸಾಗುತ್ತಿರುವುದು ಎಷ್ಟರ ಮಟ್ಟಿಗೆ ಸರಿ?

ಎ.ಆರ್. ನಾರಾಯಣಭಟ್ಟ  
ನಂ. ೭೦, ರತ್ನವಿಲಾಸ ರಸ್ತೆ, ಬಸವನಗುಡಿ,  
ಬೆಂಗಳೂರು-೫೬೦೦೦೪

ಅಸಿಸ್ಟೆಂಟ್ ಪೊಲೀಸ್ ಕಮೀಷನರ್ ಶರವಣ ಪೆರುಮಾಳ್ ಜೀಪನ್ನು ಬಿಟ್ಟು ಕೆಳಗಿಳಿದು ತನ್ನ ಆಫೀಸಿನೆಡೆಗೆ ನಡೆಯುತ್ತಿದ್ದಂತೆ, ವೆರಾಂಡದ ಬದಿಯಲ್ಲಿ ನಿಂತುಕೊಂಡಿದ್ದ ಓರ್ವ ವಯಸ್ಕ ಮತ್ತು ಆತನೊಡನಿದ್ದ ಆ ಸುಂದರಿಯಾದ ಹದಿನೆಂಟರ ಯುವತಿಯ ಮೇಲೆ ಒಮ್ಮೆ ದೃಷ್ಟಿ ಬೀರಿದರು.

ವಯಸ್ಕನಿಗೆ ಅಂದಾಜು ಅರ್ವತ್ತು ವಯಸ್ಸು ಇರಬೇಕು. ಪಂಚೆ, ಒಂದು ಬಿಳಿಯ ಶರ್ಟು, ಹೆಗಲಿನಲ್ಲಿ ಒಂದು ವಸ್ತ್ರ, ಮುಖದಲ್ಲಿ ಯಾವುದೋ ಒಂದು ಖೇದದ ಛಾಯೆ ಮೂಡಿತ್ತು. ಅವರೊಡನಿದ್ದ ಯುವತಿ ತುಂಬು ತಾರುಣ್ಯದ ಗೌರವರ್ಣದವಳು. ಆಕೆಯ ಶರೀರದ ಯಾವ ಅಂಗದಲ್ಲೂ ಒಂದು ಎಳ್ಳಷ್ಟೂ ಬಂಗಾರದ ಒಡವೆಗಳಿರಲಿಲ್ಲ; ಕಿವಿಗಳನ್ನು ಬಿಟ್ಟು. ಗೋಲ್ಡ್ ಕವರಿಂಗಿನ ಲೋಲಾಕುಗಳು ನೇತಾಡುತ್ತಿದ್ದವು.

ಶರವಣ ಪೆರುಮಾಳ್ ತನ್ನ ಕೊಠಡಿಯೊಳಗೆ ಪ್ರವೇಶಿಸಿ, ಕುರ್ಚಿಗೆ ಒರಗಿ ಕರೆಗಂಟೆಯನ್ನು ಒತ್ತಲು.... ಸೆಂಟರಿ ಪಿ.ಸಿ. ಓರ್ವ ಒಳ ಧಾವಿಸಿ ಬಂದು ಸೆಲ್ಯೂಟಿನೊಡನೆ ಅವರೆದುರಿಗೆ ನಿಂತ.

''ಯಾರಯ್ಯ ಅವರು ?''

''ಶಿವಾನಂದ ನಗರದಿಂದ ಬಂದಿದ್ದಾರಂತೆ ಸರ್.... ತಂದೆ ಮಗಳು....''

''ಏನಂತೆ....?''

''ನಿಮ್ಮನ್ನು ಕಂಡು ಏನೋ ಕಂಪ್ಲೈಂಟ್ ಕೊಡಬೇಕಂತೆ.... ಎರಡು ಗಂಟೆಯಿಂದ ಕಾಯ್ತುಕೊಂಡಿದ್ದಾರೆ ಸರ್....''

''ಸರಿ, ಒಳಗೆ ಬರ್ಲಿಕ್ಕೆ ಹೇಳು...''

ಆ ಪಿ.ಸಿ. ಹೋದ ಒಂದು ನಿಮಿಷದೊಳಗೆ ಆ ವಯಸ್ಕನೂ ಆತನ ಮಗಳೂ ಕೈ ಮುಗಿಯುತ್ತಲೇ ಒಳಗೆ ಬಂದರು.

''ನಮಸ್ಕಾರ ಸರ್....''

ಶರವಣ ಪೆರುಮಾಳ್ ಸಿಗರೇಟನ್ನು ತುಟಿಗಳ ಮಧ್ಯೆ ಇರಿಸಿಕೊಂಡು ಅಲಕ್ಷ್ಯದಿಂದ ''ಏನು ವಿಷಯ ?'' ಎಂದು ಕೇಳಿದರು.

ವಯಸ್ಕ ಮುಂದೆ ಬಂದು, ಕೈಯಲ್ಲಿ ಇಟ್ಟುಕೊಂಡಿದ್ದ ಕಂದುಬಣ್ಣದ ಕವರನ್ನು ಅವರೆದುರಿಗೆ ನೀಡಿದ.

ಸಿಗರೇಟಿನ ತುದಿ ಕೆಂಪಾಗತೊಡಗಿತು.

''ಏನು ಇದು ?''

''ಕಂಪ್ಲೈಂಟ್ ಸರ್....''

ಕವರನ್ನು ಎಡಗೈಯಿಂದ ತೆಗೆದುಕೊಂಡ ಶರವಣ ಪೆರುಮಾಳ್, ಅದನ್ನು ಮೇಜಿನ ಮೇಲಿರಿಸಿ, ಸಿಗರೇಟಿನ ಹೊಗೆಯನ್ನು ಮುಖ ಮೇಲೆ ಮಾಡಿ ಉಗಿಯುತ್ತಾ, ಎದುರಿಗಿದ್ದ ಆ ವಯಸ್ಕನನ್ನು ''ವಿಷಯ ಏನೂಂತ ನೀನೇ ಹೇಳಿಬಿಡು...'' ಎಂದರು.

ಆತ ಮುಜುಗರದಿಂದ '' ಸ್ವಾಮಿ ! ನನ್ನ ಹೆಸರು ದೊರೈಸ್ವಾಮೀಂತ. ಇವಳು ನನ್ನ ಮಗಳು ಸರೋಜಾ ಅಂತ. ಶಿವಾನಂದ ನಗರದ ಭಾರತೀ ಬಡಾವಣೆಯಲ್ಲಿ ಐದು ವರ್ಷಗಳಿಂದ ವಾಸವಿದ್ದೇವೆ.''

''ಸರಿ, ವಿಷಯಕ್ಕೆ ಬಾ...'' ಎಂದು ಎರಡನೇ ಸುತ್ತು ಹೊಗೆಯನ್ನು ಅಸಿಸ್ಟೆಂಟ್ ಕಮೀಷನರ್ ಸಿಗರೇಟ್ ಸವಿಯಹತ್ತಿದರು.

ವಯಸ್ಕ ಸಮೀಪದಲ್ಲಿದ್ದ ಸರೋಜಾಳನ್ನು ಒಮ್ಮೆ ದೀನ ಭಾವದಿಂದ ನೋಡುತ್ತಾ ಮಾತನಾಡಲು ತೊಡಗಿದ. ಕಂಠ ಈಗ ತೀರಾ ಇಳಿದುಹೋಗಿತ್ತು.

''ಸ್ವಾಮಿ, ನಿನ್ನೆ ನಗರದಲ್ಲಿ ಗಲಾಟೆ ನಡೆದ ಸಮಯ, ನನ್ನ ಹುಡುಗಿ ಬಸ್ಸು ಸಿಗದೆ ಮನೆಗೆ ವಾಪಸ್ ಬರುತ್ತಿರುವಾಗ, ರಾತ್ರಿ ಸುಮಾರು ಒಂಬತ್ತು ಗಂಟೆ ಆಗಿರಬೇಕು. ಬರುವಾಗ ದಾರಿಯಲ್ಲಿ ಇಬ್ಬರು ರೌಡಿಗಳು ಅವಳನ್ನು ಹಿಂಬಾಲಿಸಿಕೊಂಡು ಬಂದರು. ಒಂಟಿ ಆದುದರಿಂದ ಇವಳು ಹೆದರಿ ಓಡಿಹೋಗಿ ಪಿ.ವಿ.ಎಸ್. ಸರ್ಕಲಿನ ಪೊಲೀಸ್ ಸ್ಟೇಷನಿನೊಳಗೆ ನುಗ್ಗಿ ಇನ್‌ಸ್ಪೆಕ್ಟರಿಗೆ ವಿಷಯ ತಿಳಿಸಿ ಕಾಪಾಡುವಂತೆ ಬೇಡಿಕೊಂಡಳು. ಅಷ್ಟರಲ್ಲಿ ರೌಡಿಗಳು ಓಡಿಹೋದರು. ಆಗ ಮಳೆ ಜೋರಾಗಿ ಬೀಳ್ತಾ ಇದ್ದುದರಿಂದ, ಇನ್‌ಸ್ಪೆಕ್ಟರ್ ನನ್ನ ಮಗಳನ್ನು ಸ್ಟೇಷನಿನಲ್ಲಿಯೇ ತಂಗುವಂತೆ ಹೇಳಿದರು.''

ಶರವಣ ಪೆರುಮಾಳ್ ಸ್ವಾರಸ್ಯದಿಂದ ಕಿವಿಗೊಟ್ಟು ಆಲಿಸಿಕೊಳ್ಳತೊಡಗಿದರು.

''ಆಮೇಲೆ.... ?''

''ಸ್ಟೇಷನ್‌ಗೆ ಬಂದು ಅರ್ಧಗಂಟೆ ಸಮಯವಾದೊಡನೆ ಆ ಇನ್‌ಸ್ಪೆಕ್ಟರ್, ನನ್ನ ಮಗಳಿಗೆ ಜ್ಞಾನತಪ್ಪಿಸುವ ಔಷಧಿಯನ್ನು ಟೀಯಲ್ಲಿ ಬೆರೆಸಿಕೊಟ್ಟು ಅವಳನ್ನು ಲಾಕಪ್ ಒಳಗೆ ಸಾಗಿಸಿದರು. ಅವಳಿಗೆ ಪ್ರಜ್ಞೆ ಬಂದ ಕೂಡಲೆ ಒಂದು ಆಟೋನ ಗೊತ್ತುಮಾಡಿ ಮನೆಗೆ ಕಳುಹಿಸಿಕೊಟ್ಟರು. ನನ್ನ ಮಗಳು ಅಳುತ್ತ ನನ್ನೊಡನೆ ನಡೆದದ್ದನ್ನೆಲ್ಲಾ ಹೇಳಿದಾಗ ನನ್ನ ಕೋಪ ಕುದಿಯಕ್ಕೆ ಶುರುವಾಯಿತು. ಅದೇ ಇನ್‌ಸ್ಪೆಕ್ಟರ್ ಬಳಿ ನ್ಯಾಯ ಕೇಳಲು ಸ್ಟೇಷನಿಗೆ ಹೋದೆ. ಆತ ಸ್ಟೇಷನಿನಲ್ಲೇ ಇದ್ದರು. 'ನನ್ನ ಮಗಳು ಏನೂ ಅರಿಯದ ಮುಗ್ಧೆ. ಅವಳನ್ನು ಹೀಗೆ ಹಾಳುಮಾಡಿದಿರಲ್ಲ ಸರ್, ಇದು ನ್ಯಾಯವೇ ?'



# ಅಪರಾಧ

ಮೂಲ : ರಾಜೇಶ್ ಕುಮಾರ್

ಕನ್ನಡಕ್ಕೆ : ಕೋವರ್‌ಕೊಲ್ಲಿ ಕರುಣಾಕರ

ಎಂದು ಕೇಳಿದೆ. ಅದಕ್ಕೆ ಆ ಇನ್‌ಸ್ಪೆಕ್ಟರ್ ಹೇಳಿದರು, 'ನಿನ್ನ ಮಗಳು ಚೆನ್ನಾಗಿದ್ದಾಳೆ.... ಮುಟ್ಟಿದೆ.... ಚೆನ್ನಾಗಿರೋ ಯಾವುದನ್ನೂ ನಾನು ಸುಮ್ನೆ ಬಿಡೋದಿಲ್ಲ' ಎಂದು ಹೇಳಿದರು. ನಾನು ಮೇಲಧಿಕಾರಿಗೆ ಕಂಪ್ಲೇಂಟ್ ಕೊಡ್ತೇನಿ ಅಂದಿದ್ದಕ್ಕೆ.... 'ನೀನು ವಿಧಾನಸಭೆಗೆ ಬೇಕಾದರೂ ಹೋಗು, ನಾನು ಯಾವುದಕ್ಕೂ ಹೆದ್ರೋನಲ್ಲ' ಅಂದರು.''

ಶರವಣ ಪೆರುಮಾಳ್ ಅರ್ಧ ಸೇದಿದ ಸಿಗರೇಟಿನ ತುಂಡನ್ನು ಆಷ್‌ಟ್ರೇಯೊಳಗೆ ತುರುಕಿ ಚುರುಕಾದರು.

''ಆ ಇನ್‌ಸ್ಪೆಕ್ಟರ್ ಹೆಸರೇನು ?''

''ಬಲರಾಮ ಸರ್.''

''ಈಗ ನೀನು ಹೇಳಿದ್ದೆಲ್ಲವನ್ನು ನಿನ್ನ ಈ ಕಂಪ್ಲೈಂಟಿನಲ್ಲಿ ಬರೆದಿದ್ದೀಯಾ ?''

''ಬರೆದಿದ್ದೇನೆ ಸರ್ !''

''ನಿನ್ನ ಹೆಸರೇನಮ್ಮಾ !''

''ಸರೋಜಾ... ಸರ್.''

''ಆ ಇನ್‌ಸ್ಪೆಕ್ಟರ್ ನಿನ್ನೊಡನೆ ಕೆಟ್ಟದಾಗಿ ನಡೆದುಕೊಂಡರೇನು ?''

''ಹೌದು ಸರ್....''

''ಆ ಹೊತ್ತಿನಲ್ಲಿ ಸ್ಟೇಷನಿನಲ್ಲಿ ಯಾರ್‍ಯಾರು ಇದ್ದರು ?''

''ಪೊಲೀಸ್ ಒಬ್ಬರು ಇದ್ದರು. ಅವರು ಮುಂಚೇನೆ ಹೊರಟುಹೋದರು ಸರ್.... ಅವರು ಹೋದೊಡನೆ ಇನ್‌ಸ್ಪೆಕ್ಟರ್ ನನ್ನ ಸಮೀಪಕ್ಕೆ ಬಂದು 'ಟೀ ಕುಡಿಯುತ್ತೀಯಾ' ಅಂತ ಕೇಳಿದರು. ನಾನು 'ಬೇಡಾ' ಅಂದೆ. ಅವರು ಕೇಳಲಿಲ್ಲ ಸರ್.... ಚಳಿಗೆ ಒಳ್ಳೆದಾಗತ್ತೆ ಕುಡೀಂತ ಹೇಳಿ ಫ್ಲಾಸ್ಕಿನಲ್ಲಿದ್ದ ಟೀಯನ್ನು ಒಂದು ಗಾಜಿನ ಲೋಟಕ್ಕೆ ಬಗ್ಗಿಸಿಕೊಟ್ಟರು. ಅವರು ಎಷ್ಟೊಂದು ಒಳ್ಳೆಯ ಮನಸ್ಸಿನಿಂದ ಕೊಡುತ್ತಿದ್ದಾರೆಂದು ಭಾವಿಸಿ ನಾನು ಕುಡಿದುಬಿಟ್ಟೆ ಸರ್. ಕುಡಿದ ಎರಡು ನಿಮಿಷಗಳಲ್ಲಿ ನನ್ನ ಕಣ್ಣೆಲ್ಲ ಮಂಜು ಮಂಜಾಗ ತೊಡಗಿತು. ಶರೀರದಲ್ಲಿ ಒಂದಿಷ್ಟೂ ಸ್ಮೃತಿ ಇಲ್ಲದಂತೆ ಬಿದ್ದುಬಿಟ್ಟೆ. ಇನ್‌ಸ್ಪೆಕ್ಟರ್ ನನ್ನನ್ನು ಎತ್ತಿ ಹಿಡಿಯುವಾಗ ಸ್ವಲ್ಪ ಸ್ವಲ್ಪ ನೆನಪು ಇದ್ದಂತಿತ್ತು.'' ಹೇಳಿ ಮುಗಿಸಿದ ಸರೋಜಾಳ ಕಣ್ಣಲ್ಲಿ ನೀರು ಸುರೀತಾ ಇತ್ತು. ಬಿಕ್ಕಳಿಸತೊಡಗಿಳು. ತನ್ನ ಸೆರಗಿನಿಂದ ಬಾಯನ್ನು ಮುಚ್ಚಿಕೊಳ್ಳುವುದಕ್ಕೆ ಪ್ರಯತ್ನಿಸಿದಳು.

ಶರವಣ ಪೆರುಮಾಳ್ ಆಷ್‌ಟ್ರೇಯಿಂದ ಹೊರ ಬರುತ್ತಿದ್ದ ಸಿಗರೇಟಿನ ತುಂಡನ್ನು ಮತ್ತೊಮ್ಮೆ ಅದರೊಳಗೆ ಸರಿಯಾಗಿ ಅದುಮಿ, ಟೆಲಿಫೋನ್ ರಿಸೀವರನ್ನು ಕೈಗೆತ್ತಿಕೊಂಡು ನಂಬರನ್ನು ಒಂದೊಂದಾಗಿ ಒತ್ತುತ್ತ ಮಾತನಾಡಲು ತೊಡಗಿದರು.

''ಪಿ.ವಿ.ಎಸ್. ಸರ್ಕಲ್ ಪೊಲೀಸ್ ಸ್ಟೇಷನ್ ಏನು ?''

''........''

''ಇನ್‌ಸ್ಪೆಕ್ಟರ್ ಇದ್ದಾರಾ ?''

''.......''

''ಹಾಗೇನು.... ಅವರು ಎಲ್ಲಿ ಇದ್ದರೂ ಸರಿ.... ಮುಂದಿನ ಕಾಲುಗಂಟೆ ಒಳಗೆ ನನ್ನ ಮುಂದೆ ನಿಲ್ಲಬೇಕು, ಮ್ಯಾಟರ್ ವೆರಿ ಅರ್ಜೆಂಟ್ !''

ರಿಸೀವರನ್ನು ಇಟ್ಟು, ವಯಸ್ಕನತ್ತ ತಿರುಗಿದರು.

''ಇಬ್ಬರೂ ಹೊರಗಿರುವ ಬೆಂಚಿನಲ್ಲಿ ಹೋಗಿ ಕೂಡಿ... ಆ ಇನ್‌ಸ್ಪೆಕ್ಟರ್ ಬಂದ ಮೇಲೆ ಕರೀತೇನೆ...''

ಹದಿನೈದು ನಿಮಿಷ ಆದೊಡನೆ ಇನ್‌ಸ್ಪೆಕ್ಟರ್ ಬಲರಾಮನು ಬೆವತುಕೊಂಡು ಬುಲೆಟ್ ಬೈಕಿನಲ್ಲಿ ಬಂದನು. ಮುಖದಲ್ಲಿ ಯಾವ ಕಳೆಯೂ ಇರಲಿಲ್ಲ. ವಯಸ್ಸು ಮೂವತ್ತು ಇರಬೇಕು. ದಪ್ಪ ಮೀಸೆ. ಅದಕ್ಕೆ ತಕ್ಕಂತೆ ದೇಹ.

ಶರವಣ ಪೆರುಮಾಳ್‌ಗೆ ಶಿಸ್ತಿನ ಸೆಲ್ಯೂಟ್ ಹೊಡೆದು ಅವರೆದುರಿಗೆ ನಿಂತ.

''ಹೊರಗೆ ಕುಳಿತಿರುವ ಯುವತಿಯನ್ನೂ ಅವಳ ತಂದೆಯನ್ನೂ ನೋಡಿದೆಯಾ ?''

''ನೋಡಿದೆ ಸರ್....''

''ನಿನ್ನೆ ರಾತ್ರಿ ಆ ಯುವತಿ ಸರೋಜಾಳನ್ನು



**ಒಂದು ಕ್ಷಣ ದರ್ಶನ**

ಕೇವಲ ಆಕೆಯ ಸೆರಗು ಅಲ್ಲಾಡಿತು
ಕಾಮನಬಿಲ್ಲಿನ ಬಣ್ಣಗಳು ಆಗಸವನ್ನೆ ಮುತ್ತಿದವು
ನನ್ನ ಧಮನಿಯಲ್ಲಿ ರಕ್ತ ವೇಗವಾಗಿ ಸಂಚರಿಸಿತು
ಈಗಷ್ಟೆ ಯಾರೋ ನನ್ನ ಹೃದಯ ತಟ್ಟಿದರು
ಕನಸಿನ ಗುಲಾಬಿ ಅರಳಿತು
ನನ್ನ ಬಯಕೆಯ ಮಡಿಲು ತುಂಬಿ ತುಳುಕಿತು

ಮೂಲ : ಅಲಿ ಸರ್ದಾರ ಜಾಫ್ರಿ
ಕನ್ನಡಕ್ಕೆ : ವಿಭಾ

ಸ್ಟೇಷನಿನ ಲಾಕಪ್ಪಿನಲ್ಲಿ ಹಾಕಿ ಮಾನಭಂಗ ಮಾಡಿದೆಯಂತೆ ? ನೋಡು, ಆಕೆಯ ಅಪ್ಪ ಬರೆದುಕೊಟ್ಟ ಕಂಪ್ಲೈಂಟ್'' ಎನ್ನುತ್ತಾ ನೇರವಾಗಿ ಅದನ್ನು ಇನ್‌ಸ್ಪೆಕ್ಟರ್‌ಗೆ ಕೊಟ್ಟರು . ಶರವಣ ಪೆರುಮಾಳ್. ಇನ್‌ಸ್ಪೆಕ್ಟರ್ ಬಲರಾಮ ಅದನ್ನು ಇಸಿದುಕೊಂಡು ಓದಿ ನೋಡುತ್ತಾ ಅಲ್ಪ ಬಿಗಿದ ಕಂಠದೊಡನೆ ಮಾತನಾಡಲು ತೊಡಗಿದ.

''ಸರ್, ಇದು ಸುಳ್ಳು. ಈಕೇನ, ಇವಳ ತಂದೇನ ನಾನು ಇದಕ್ಕಿಂತ ಮೊದಲು ನೋಡಿದ್ದೇ ಇಲ್ಲ....''

''ನಿನ್ನೆ ರಾತ್ರಿ ಸ್ಟೇಷನ್ ಡ್ಯೂಟಿಯಲ್ಲಿ ಇದ್ದವರು ಯಾರ್‍ಯಾರು ?''

''ನಾನು ಒಂದು ಕೇಸು ವಿಷಯವಾಗಿ ನಾಲ್ಕು ಕಾನ್‌ಸ್ಟೇಬಲ್‌ಗಳನ್ನು ಕರೆದುಕೊಂಡು ಹೋಗಿದ್ದೆ. ಮತ್ತೆ ಸ್ಟೇಷನಿನಲ್ಲಿ ಉಳಿದದ್ದು ಒಬ್ಬ ಕಾನ್‌ಸ್ಟೇಬಲ್ ಮಾತ್ರ ಸರ್.''

''ಯಾರದು ?''

''ಕಾನ್‌ಸ್ಟೇಬಲ್ ಕುಮಾರವೇಲು ಸರ್.''

''ಆ ಕಾನ್‌ಸ್ಟೇಬಲ್ ಹೊರಗಡೆ ಎಲ್ಲೂ ಹೋಗಿರಲಿಲ್ಲವೇ ?''

''ಇಲ್ಲ ಸರ್....''

''ನೀನು ಹೀಗೆ ಹೇಳ್ತಿದ್ದೀಯಾ. ಆದರೆ ಈ ಹೆಣ್ಣನ್ನೂ, ಆತನನ್ನೂ ನೋಡಿದರೆ ಸುಳ್ಳು ಹೇಳುವವರಂತೆ ಕಾಣೋದಿಲ್ಲವಲ್ಲ....''

''ಸರ್ ! ನನಗೆ ಬೇಡದವರು ಯಾರೋ ಹಿಂದೆ ನಿಂತುಕೊಂಡು ಮಾಡ್ತಿರೋ ಸಂಚು ಅಂತ ಅನಿಸುತ್ತೆ ಸರ್.''

''ಹೊರಗಡೆ ಕುಳಿತಿರೋ ಆ ವಯಸ್ಕನನ್ನ, ಅವನ ಮಗಳ್ನ ಕರಕೊಂಡು ಬಾ....''

ಬಲರಾಮ ಹೋಗಿ ಕರೆದುಕೊಂಡು ಬಂದ.

ತಲೆತಗ್ಗಿಸಿ ನಿಂತಿದ್ದ ಸರೋಜಾನ ಶರವಣ ಪೆರುಮಾಳ್ ಕೇಳಿದರು :

''ಏನಮ್ಮ! ಇವರೇನಾ ನಿನ್ನೆ ರಾತ್ರಿ ಸ್ಟೇಷನಿನಲ್ಲಿ ನಿನ್ನನ್ನು ಕೆಡಿಸಿದವರು....''

''ಹೌ..... ಹೌದು ಸರ್.''

''ಇವರು ಇದಕ್ಕಿಂತ ಮೊದಲು ನಿನ್ನನ್ನು ನೋಡಿದ್ದೇ ಇಲ್ಲಾಂತ ಹೇಳ್ತಿದ್ದಾರೆ ?''

''ಸುಳ್ಳು ಸರ್....'' ಹೇಳುತ್ತಿದ್ದಂತೆ ಸರೋಜಾ ಅಳೋದಿಕ್ಕೆ ಶುರುಮಾಡಿದಾಗ ಆಕೆಯ ತಂದೆ ಬಲರಾಮನ ಕಡೆ ನೋಡಿ ಕೆಂಡ ಆದರು.

''ನಿಮ್ಮ ಹತ್ತಿರ ನಾನು ನ್ಯಾಯ ಕೇಳಲು ಬಂದಾಗ, ಹುಡುಗಿ ಅಂದವಾಗಿದ್ದಾಳೆ ಮುಟ್ಟಿ ನೋಡಿದೆ ಅಂತ ನೀವು ಹೇಳಲಿಲ್ಲವೇ ?''

''ಹೇಯ್ ! ಯಾರೋ ಕೈ ಬಿಸಿ ಮಾಡಿದ್ದಾರೆ. ಆದ್ದರಿಂದಾಗಿ ದೊಡ್ಡ ಮನುಷ್ಯನಂತೆ ದೊಡ್ಡ ಕಂಪ್ಲೈಂಟ್ ಬರೆದುಕೊಂಡು ಬಂದುಬಿಟ್ಟ, ಇವನ ಹುಡುಗೀನ್ನ ಹಾಳು ಮಾಡಿಬಿಟ್ಟೇಂತ.....!''

''ಎಲೆ ಪಾಪಿ ! ನೀನು ನಾಶವಾಗಿ ಹೋಗ್ತಿಯಾ. ಖಾಕಿ ಉಡುಪು ಧರಿಸಿಕೊಂಡು ಯಾಕಯ್ಯ ಹೀಗೆ ಪಾಪದವರ ಗೋಳು ಹೊಯ್ಯುಸ್ತೀರಿ. ನೀನು ಉದ್ಧಾರ ಆಗಲ್ಲ.''

ಶರವಣ ಪೆರುಮಾಳ್ ಮಧ್ಯ ಬಾಯಿ ಹಾಕಿದರು.

''ನೋಡಿ ದೊರೆಸ್ವಾಮಿ, ಹೀಗೆಲ್ಲಾ ಪೊಲೀಸ ನೋರ್‍ನ ಬಾಯಿಗೆಬಂದ ಹಾಗೆ ಬೈಬಾರ್‍ದು.. ನಿಮ್ಮ ಕಂಪ್ಲೈಂಟನ್ನು ನನ್ನ ಹತ್ತಿರ ಕೊಟ್ಟಿದ್ದೀರಲ್ಲವಾ, ಇನ್ನು ನೀವು ಹೋಗಬಹುದು ! ಕಾನೂನು ಪ್ರಕಾರ ಇಲಾಖೆಯ ಮೂಲಕ ಕ್ರಮ ತೆಗೆದುಕೊಂಡು, ನಿಮ್ಮ ಆಪಾದನೆ ಸುಳ್ಳೋ ನಿಜವೋ ನಾನು ತೀರ್ಮಾನ ಮಾಡ್ತೇನೆ ! ನೀವು ಹೇಳಿದ ಅಪರಾಧ ಸಾಬೀತಾದರೆ, ಕಾನೂನು ಪ್ರಕಾರ ಇವರ ಮೇಲೆ ಕ್ರಮ ಕೈಗೊಳ್ಳುತ್ತೇವೆ. ನೀವು ಹುಡುಗೀನ ಕರೆದುಕೊಂಡು ಹೋಗಿ.''

ವಯಸ್ಕ, ಇನ್‌ಸ್ಪೆಕ್ಟರ್ ಬಲರಾಮನನ್ನು ದುರು ಗುಟ್ಟುತ್ತಾ ನೋಡಿಕೊಂಡು ಶರವಣ ಪೆರುಮಾಳಿಗೆ ಶಿರಬಾಗಿ ನಮಸ್ಕರಿಸಿ ಮಗಳೊಡನೆ ಭಾರವಾದ ಹೃದಯ ಹೊತ್ತು ಹೊರಗೆ ಕಾಲಿಟ್ಟ ಮೇಲೆ ಶರವಣ ಪೆರುಮಾಳ್ ಇನ್‌ಸ್ಪೆಕ್ಟರ್ ಬಲರಾಮನನ್ನು ತರಾಟೆಗೆ ತೆಗೆದುಕೊಂಡರು. ''ಹೇಯ್, ಸತ್ಯ ಹೇಳಯ್ಯ, ಆ ಹುಡುಗಿಯನ್ನು ಸ್ಟೇಷನಿನ ಲಾಕಪ್ಪಿನಲ್ಲಿ ಹಾಕಿ ನೀನು

ರೇಪ್ ಮಾಡಿದೆ ಅಲ್ವಾ ?''

''ಅದು ಸರ್.... ಅದು....''

''ಸತ್ಯವನ್ನು ಒಪ್ಪಿಕೋ. ಸುಳ್ಳನ್ನು ಸಾಬೀತು ಪಡಿಸಕ್ಕೆ ಹೋದರೆ ಪರಿಸ್ಥಿತಿ ವಿಕೋಪಕ್ಕೆ ತಿರುಗತ್ತೆ. ನೀನು ತಪ್ಪು ಮಾಡಿದ್ದರೆ.... ಅದನ್ನು ಹೇಗೆ ಸಾಲ್ವ್ ಮಾಡ್ಬೇಕೋ ಹಾಗೇ ಮಾಡಿದರಾಯ್ತು. ಡಿಪಾರ್ಟ್‌ಮೆಂಟಿಗೆ ಒಂದು ಕೆಟ್ಟ ಹೆಸರು ಬರೋದಿಕ್ಕೆ ನಾನು ಬಿಡಲಾರೆ.... ನಡೆದ ನಿಜ ಸಂಗತಿ ಏನೂಂತ ಹೇಳು....''

ತನ್ನ ಅಧಿಕಾರಿಯ ಪ್ರಶ್ನೆಗೆ ಬಲರಾಮ ಬೆವತು ಬೇರೆ ದಾರಿ ಇಲ್ಲದೆ :

''ಆಕೇನ ನಾನು ಮುಟ್ಟಿದ್ದು ಸತ್ಯ ಸರ್.''

''ಸರಿ, ನೀನು ಮುಟ್ಟಿದಾಗ ಅವಳಿಗೆ ಸ್ಮೃತಿ ಇತ್ತಾ ?''

''ಇಲ್ಲ ಸಾರ್.''

''ಇಷ್ಟು ಸಾಕು'' ಎಂದು ಹೇಳುತ್ತಲೇ ಮುಗುಳು ನಕ್ಕ ಶರವಣ ಪೆರುಮಾಳ್, ಮೇಜಿನ ಮೇಲಿದ್ದ ಕಂಪ್ಲೈಂಟನ್ನು ಬಲರಾಮನಿಗೆ ಕೊಟ್ಟರು.

''ನೀನೇ ಇದನ್ನು ಹರಿದುಹಾಕಿಬಿಟ್ಟು ಸುಮ್ಮನೆ ಹೋಗಿ ಬಿಡು.... ಈ ಹೆಣ್ಣು, ಅವಳ ತಂದೆಯು ಮತ್ತೆ ಈ ಪುಕಾರು ವಿಷಯವಾಗಿ ನನ್ನನ್ನು ನೋಡಲು ಬಂದರೆ, ನಾನು ಸ್ವಲ್ಪ ಪೊಲೀಸ್ ಟೆಕ್‌ನಿಕ್ಕನ್ನು ತೋರಿಸುತ್ತ ಸಮಸ್ಯೆಯನ್ನು ಮುಚ್ಚಿಹಾಕಲು ನೋಡ್ತೇನೆ....''

''ತುಂಬಾ ಥ್ಯಾಂಕ್ಸ್ ಸರ್....''

''ಮಿಸ್ಟರ್, ಬರೀ ಥ್ಯಾಂಕ್ಸ್‌ನಿಂದಲೇ ಮುಗಿಸಿ ಬಿಡಬೇಡ.''

''ಇಲ್ಲ ಸರ್, ಸ್ವಲ್ಪ ಅಮೌಂಟ್ ಕೊಟ್ಟುಬಿಡ್ತೇನೆ ಸರ್.....''

''ಈಗ ಹೇಳಿದೆಯಲ್ಲ ಅದು ಸರಿ. ಕೊಡಲಿರುವ ಅಮೌಂಟ್ ಐದು ಸಂಖ್ಯೆಯದಾಗಿರಲಿ. ಯಾಕೆಂದರೆ, ಸಮಸ್ಯೆ ಬಹಳಾ ದೊಡ್ಡದು ನೋಡು ....'' ಇನ್‌ಸ್ಪೆಕ್ಟರ್ ಬಲರಾಮನ ಕೈಯಲ್ಲಿದ್ದ ಕಂಪ್ಲೈಂಟ್ ಎರಡಾಗಿ, ನಾಲ್ಕಾಗಿ ಮತ್ತೆ ಎಂಟಾಗಿ ಟೇಬಲಿನ ಸಮೀಪದಲ್ಲಿದ್ದ ಕಸದ ಬುಟ್ಟಿಯನ್ನು ಹೊಕ್ಕಿತು.

* * *

ಸಂಜೆ ಐದು ಗಂಟೆ.

ಹಜಾರದ ಎದುರುಗಡೆ ಬಾಗಿಲು ಬಡಿದಂತೆ ಕೇಳಿಸಿತು. ಹುರಿಹಗ್ಗದ ಮಂಚದ ಮೇಲೆ ಮಲಗಿದ್ದ ಸರೋಜಾಳ ತಂದೆ, ಅಡುಗೆ ಮನೆಯ ಕಡೆ ಕೊರಳು ಬಾಗಿ ಮಗಳನ್ನು ಕರೆದನು.

''ಅಮ್ಮ.... ಸರೋಜಾ, ಯಾರೋ ಬಾಗಿಲು ತಟ್ಟುತ್ತಿದ್ದಾರೆ. ಹೋಗಿ ನೋಡಮ್ಮ.''

ಅಡುಗೆ ಕೆಲಸದಲ್ಲಿ ನಿರತಳಾಗಿದ್ದ ಸರೋಜಾ, ಬೇಗನೆ ಹಜಾರದೆಡೆಗೆ ಧಾವಿಸಿ ಬಾಗಿಲು ತೆರೆದಳು.

ಹೊರಗಡೆ....

ಅಚ್ಚರಿಯಾಗದೇ ಇರಲಿಲ್ಲ.

ಅಸಿಸ್ಟೆಂಟ್ ಕಮೀಷನರ್ ಶರವಣ ಪೆರುಮಾಳ್ ಯೂನಿಫಾರಂ ಇಲ್ಲದೆ, ಬಿಳಿಯ ಪಂಚೆ ಮತ್ತು ಬಿಳಿಯ ಶರ್ಟು ಧರಿಸಿ ನಿಂತಿದ್ದರು. ಕೈಗಳನ್ನು ಎತ್ತಿ ಜೋಡಿಸಿ ನಮಸ್ಕರಿಸಿದಳು ಸರೋಜಾ.

''ಬನ್ನಿ ಸರ್....''

''ತಂದೆ ಮನೇಲಿ ಇದ್ದಾರೇನಮ್ಮ ?''

''ಇದ್ದಾರೆ ಸರ್.''

ಶರವಣ ಪೆರುಮಾಳ್ ಒಳಗೆ ಬಂದಾಗ ಆಕೆಯ ತಂದೆ ಎದುರುಗೊಂಡು ಕೈ ಮುಗಿದನು. ಪಕ್ಕದಲ್ಲಿದ್ದ ಕಬ್ಬಿಣದ ಕುರ್ಚಿಯನ್ನು ಅವರ ಎದುರು ಇರಿಸಿ,

''ಸರ್, ನೀವು ಇಲ್ಲಿಯವರೆಗೆ....''

''ಹೇಳ್ತೇನೆ.''

''ಕುಳಿತುಕೊಳ್ಳಿ ಸರ್.''

ಕುರ್ಚಿಯಲ್ಲಿ ಕುಳಿತುಕೊಂಡರು.

''ನೋಡಿ ಹಿರಿಯರೇ ! ನಾನೀಗ ಪೊಲೀಸ್ ಅಧಿಕಾರಿಯ ಘನತೆಯ ಗೌರವದೊಡನೆ ಬರಲಿಲ್ಲ. ನಿನ್ನೆ ರಾತ್ರಿ ಪಿ.ವಿ.ಎಸ್. ಸರ್ಕಲ್ ಪೊಲೀಸ್ ಸ್ಟೇಷನ್‌ನಲ್ಲಿ ನಿಮ್ಮ ಮಗಳಿಗೆ ಆದ ಅಪಾರ ಹಾನಿಗೆ ಪರಿಹಾರ ಹುಡುಕಲು ಬಂದಿದ್ದೇನೆ....''

ಸರೋಜಾಳ ತಂದೆ ದೊರೆಸ್ವಾಮಿ ಹಣೆಯನ್ನು ಒಂದು ಕೈಯಿಂದ ನೇವರಿಸಿಕೊಳ್ಳುತ್ತಾ,

''ಪರಿಹಾರಾನಾ ?''

''ಹೌದು ರೀ ! ಆ ಇನ್‌ಸ್ಪೆಕ್ಟರ್ ಬಲರಾಮನಿಂದ ನಿಜ ಸಂಗತಿ ಹೊರಬೀಳುವಂತೆ ಮಾಡಲು, ಹಲವು ಉಪಾಯಗಳಿಂದ ಮಾತನಾಡಿದೆ. ಈಗ ಸತ್ಯ ಸಂಗತಿ ಹೊರಬಂದಿದೆ. ಬಳಿಕ, ನನ್ನ ನಿಜ ರೂಪವನ್ನು ಬಹಿರಂಗಪಡಿಸಿ ಆತನನ್ನು ಅರೆಸ್ಟ್ ಮಾಡಿದೆ. ಮತ್ತೆ ಆತ ನನ್ನ ಕಾಲಿಗೆ ಬಿದ್ದ. 'ಕಾನೂನು ಪ್ರಕಾರ ಯಾವ ದಂಡನೆಯನ್ನೂ ಕೊಡಬೇಡಿ' ಅಂತ ಬೇಡಿಕೊಂಡ. ನಾನು ಯೋಚಿಸಿದೆ. ಇನ್‌ಸ್ಪೆಕ್ಟರ್ ಬಲರಾಮನಿಗೆ ಕಾನೂನು ಪ್ರಕಾರ ಶಿಕ್ಷೆ ವಿಧಿಸುವುದು ಬಹಳ ಸುಲಭ. ಆದರೆ, ಪೆಟ್ಟಾಗಿ ನೋವು ಅನುಭವಿಸುತ್ತಿರುವ ನಿಮ್ಮ ಮಗಳಿಗೆ, ಅವಳ ಬಾಳಿಗೆ ಏನು ವಿಮೋಚನೆ ? ಹಾಗೆ ಯೋಚಿಸಿದಾಗ, ಇನ್‌ಸ್ಪೆಕ್ಟರಿಗೆ ನಿಮ್ಮ ಹುಡುಗಿಯನ್ನು ಕೊಟ್ಟು ಮದುವೆ ಮಾಡಿದರೆ ಹೇಗೆ ಅಂತ ಆಲೋಚನೆ




ಮಾಡಿದೆ. ಹಾಗಂತ ಇನ್‌ಸ್ಪೆಕ್ಟರ್ ಹತ್ತಿರ ಹೇಳಿದೆ. ಆತ ಒಪ್ಪಿದ್ದಾನೆ. ಈಗ ನೀವು ಕೂಡ ಈ ಮದುವೆಗೆ ಮಾತು ಕೊಟ್ಟರೆ, ಬರುವ ಮುಹೂರ್ತದಲ್ಲಿಯೇ ಮದುವೆ ಮಾಡಿಬಿಡಬಹುದು. ಏನು ಹೇಳ್ತೀರಿ ?''

ಕೂಡಲೇ ಸರೋಜಾ ಮಧ್ಯ ಬಾಯಿ ಹಾಕಿದಳು.

''ಕ್ಷಮಿಸಿ ಸರ್ ! ನನಗೆ ದೊರಕಬೇಕಾಗಿರೋ ನ್ಯಾಯ, ಇದಲ್ಲ. ಆ ಇನ್‌ಸ್ಪೆಕ್ಟರ್, ಆತ ಖಾಕಿ ಯೂನಿಫಾರಂ ಹಾಕಿಕೊಂಡಿರೋ ಎರಡು ಕಾಲಿನ ಒಂದು ದುಷ್ಟ ಮೃಗ ಮಾತ್ರ. ಒಂದು ಮೃಗದ ಜೊತೆ ಬಾಳ್ವೆ ನಡೆಸೋದಕ್ಕೆ ನಾನು ತಯಾರಿಲ್ಲ. ಆ ಇನ್‌ಸ್ಪೆಕ್ಟರಿಗೆ ನೀವು ಕೊಡಬೇಕಾಗಿರುವುದು ದಂಡನೇನೆ ಹೊರತು ನಿವಾರಣೆ ಅಲ್ಲ.''

ಶರವಣ ಪೆರುಮಾಳ್ ಮಧ್ಯ ಬಾಯಿ ಹಾಕಿದರು.

''ನೋಡಮ್ಮ ನಾನು ಏನು ಹೇಳಲಿಕ್ಕೆ ಬರ್ತೇನೆಂದರೆ....''

''ಗೊತ್ತಿದೆ ಸರ್, ನೀವು ಏನು ಹೇಳ್ಬೇಕು ಅಂತ ಇದ್ದೀರೀ ಅದು ಚೆನ್ನಾಗಿ ಗೊತ್ತಿದೆ. ಶೀಲ ಕಳೆದುಕೊಂಡಿರೋ ನನ್ನ ಮದುವೆಯಾಗೋದಿಕ್ಕೆ ಯಾವ ಗಂಡೂ ಮುಂದೆ ಬರೋದಿಲ್ಲ ಆದ್ದರಿಂದ ನನ್ನ ಬಾಳು ಪೂರಾ ಏಕಾಂತಳಾಗಿ ಸೊರಗಬೇಕಾಗುತ್ತೆ ಅಂತ ಹೇಳಲಿಕ್ಕೆ ಹೋಗುತ್ತಿದ್ದೀರಿ. ಪರ್ವಾಗಿಲ್ಲ ಸರ್, ಕೊನೇವರೆಗೂ ನನ್ನ ಅಪ್ಪನಿಗೆ ಮಗಳಾಗಿ ಇದ್ದುಬಿಡ್ತೀನಿ. ನನ್ನ ಮುಂದಿನ ಬಾಳನ್ನು ನೆಪ ಇಟ್ಟುಕೊಂಡು ಇನ್‌ಸ್ಪೆಕ್ಟರ್ ಬಲರಾಮನಂತಿರುವ ಗೋಮುಖ ವ್ಯಾಘ್ರಗಳು ಕಾನೂನಿನ ಹಿಡಿತದಿಂದ ತಪ್ಪಿಸ್ಕೋಬಾರದು. ಅಂಥವರಿಗೆ ಶಿಕ್ಷೆ ಆಗಲೇ ಬೇಕು. ಆ ಶಿಕ್ಷೆ ಉಳಿದವರಿಗೆ ಬೆಳಕಾಗಿ ತೋರಬೇಕು.''

''ಚೆನ್ನಾಗಿ ಯೋಚನೆ ಮಾಡಮ್ಮ. ಇದು ನಿನ್ನ ಬಾಳಿನ ಭವಿಷ್ಯದ ವಿಚಾರ.''

''ಹೀಗಂತ ಹೇಳಿ, ಈ ಸಮಸ್ಯೆಯನ್ನು ಸುಲಭವಾಗಿ ಮುಕ್ತಾಯ ಮಾಡಿಬಿಡೋದಿಕ್ಕೆ ಪ್ರಯತ್ನಿಸಬೇಡಿ ಕಮೀಷನರ್ ಸರ್. ಒಂದು ಹೆಣ್ಣಿನ ಮನಸ್ಸು, ಶೀಲ ಎರಡೂ ಪೊಲೀಸ್ ಲಾಕಪ್ಪಿನೊಳಗೆ ಕರಗಿಹೋಗುವ ವಿಚಾರ ಈ ದೇಶಕ್ಕೆ ಬಲುದೊಡ್ಡ ಅವಮಾನ. ಈ ಅಪರಾಧಕ್ಕೆ ಪರಿಹಾರ ತಾಳಿ ಮಾತ್ರ ಅಲ್ಲ ಸರ್. ಕಾನೂನು ಕೊಡುವ ಶಿಕ್ಷೆ. ಪರಿಹಾರಗಳಿಂದ ನನ್ನಂಥ ಅಬಲೆಯರನ್ನು ತೃಪ್ತಿಪಡಿಸುವುದು ಸಾಧ್ಯವಿಲ್ಲ. ಅದಕ್ಕೆ ಸರಿಯಾದ ಪರಿಹಾರ ತಪ್ಪಿತಸ್ಥರಿಗೆ ದಂಡನೆ.''

ಆ ಗ್ರಾಮದ ಒಂದು ಹೆಣ್ಣು ಮಗಳ ಬಾಯಿಂದ ಬಂದ ಮಾತುಗಳು ಕಮಿಷನರ್ ಶರವಣ ಪೆರುಮಾಳ್ ಮನಸ್ಸಿನೊಳಗೆ ಕಾಂಕ್ರೀಟ್ ತಳಪಾಯದಂತೆ ಗಟ್ಟಿಯಾಗಿ ನಿಂತುಬಿಟ್ಟಿತು. ಈಗ ಅವರು ಯೂನಿಫಾರಂ ಧರಿಸಿದ್ದ ಅಸಿಸ್ಟೆಂಟ್ ಪೊಲೀಸ್ ಕಮೀಷನರ್ ಗತ್ತಿನಲ್ಲಿ ದೃಢವಾಗಿ ಹೇಳಿದರು, ''ಮತ್ತೊಂದು ಕಂಪ್ಲೈಂಟ್ ಬರೆದು ಕೊಡಮ್ಮ...''

**ಕೋವರ್‌ಕೊಲ್ಲಿ ಕರುಣಾಕರ**
ಶ್ರೀ ಸಾಯಿದುರ್ಗಾ, ೩ನೇ ತಿರುವು, ವೇಗಸ್‌ಟೌನ್‌ಶಿಪ್
ಕಿನ್ನಿಮುಲ್ಕಿ, ಉಡುಪಿ - ೫೭೬ ೧೦೧

# ವಾದ ಭಯಂಕರ ಶ್ರೀಪಾದು

■ ಸತ್ಯವತಿ

"ವಿಷ್ಣೂ, ವಿಷ್ಣು, ಏ ವಿಷ್ಣೂ!"

ಗೆಳೆಯನ ಮನೆಯೊಳಗೆ ಗೂಳಿಯ ಹಾಗೆ ನುಗ್ಗುತ್ತ, ಗಂಟಲು ಹರಿದು ಹೋಗುವ ಹಾಗೆ ಕೂಗಿ ಕರೆದ ಶ್ರೀಪಾದು.

"ಏನೋ ಶ್ರೀಪಾದು ? ಯಾಕೆ ಹೀಗೆ ಕಿರುಚಿಕೊಳ್ತಾ ಇದ್ದಿ ?"

ಗಡಬಡಿಸಿ ಓಡಿ ಬಂದ ವಿಷ್ಣುವಿನ ಕೈಯಲ್ಲಿ ಅರ್ಧ ಕುಡಿದ ಕಾಫಿ ಲೋಟವೂ ಇತ್ತು.

"ವ್ಯಾಸ ಎಲ್ಲೋ ?"

"ಯಾವ ವ್ಯಾಸನೋ ?"

"ಅದೇ ವ್ಯಾಸಮಹರ್ಷಿ."

"ಮಹರ್ಷಿ ?!"

"ಹೌದೋ, ಮಹಾಭಾರತ ಬರೆದ ವ್ಯಾಸಮಹರ್ಷಿ ಕಣೋ."

ಈ ಗಡಿಬಿಡೀಶ್ವರನದ್ದು ಯಾವಾಗಲೂ ಇಂಥದ್ದೇ ಏನಾದರೊಂದು ಪ್ರಶ್ನೆ ಎಂದು ಮನದಲ್ಲೇ ನಗುತ್ತ,

"ಆ ಚಿರಂಜೀವಿ ಹಿಮಾಲಯ ಪರ್ವತದ ಬದರಿಕಾಶ್ರಮದಲ್ಲಿ ಇಂದಿಗೂ ಇದ್ದಾರೆಂದು ಕೇಳಿದ್ದೀನಿ" ಎಂದ.

"ಹಾಗಾದರೆ ನಾನೀಗಲೇ ಅಲ್ಲಿಗೆ ಹೊರಟೆ."

ಉಟ್ಟ ಬಟ್ಟೆಯಲ್ಲೇ ಹೊರಟುಬಿಟ್ಟ ಶ್ರೀಪಾದು. ಅವನ ಕೈಹಿಡಿದು ನಿಲ್ಲಿಸಿದ ವಿಷ್ಣು,

"ಏಯ್ ನಿಲ್ಲೋ, ಈಗ ಜನ ಹೋಗ್ತಾರಲ್ಲ.. ಆ ಬದ್ರೀಲಿ ಅವರು ಸಿಗಲ್ವಂತೆ. ಪೂರಾ ವಿಷಯ ತಿಳ್ಕೊಳ್ಳದೆ ರೊಂಯ್ ಅಂತ ಹೊರಟ್ಬಿಟ್ಟ!"

"ಹಾಗಾದ್ರೆ ಇನ್ಯಾವ ಬದ್ರಿಯಲ್ಲಿ ಇದ್ದಾರೆ ಅವರು ?"

"ಹಿಮಾಲಯದ ಒಳಗೆಲ್ಲೋ 'ದೊಡ್ಡಬದ್ರಿ' ಅಂತ ಒಂದು ಜಾಗ ಇದೆಯಂತೆ. ಅಲ್ಲಿ ಋಷಿಗಳಿಗೆ ಪಾಠ ಹೇಳ್ತಾ ಇರ್ತಾರಂತೆ. ಅಲ್ಲಿಗೆ ನಮ್ಮಂಥ ನರಪ್ರಾಣಿಗಳಿಗೆ ಹೋಗಲಿಕ್ಕೆ ಆಗಲ್ವಂತೆ."

"ಹೋಗಕ್ಕೆ ಆಗಲ್ಲಾಂದ್ರೆ ಏನಯ್ಯ ಅರ್ಥ ? ಚಂದ್ರಲೋಕಕ್ಕೇ ಹೋಗೋ ನರನಿಗೆ ಹಿಮಾಲಯ ಏರಿ ಹೋಗಕ್ಕೆ ಆಗಲ್ವ ?"

"ಯಾರಿಗೂ ಆಗ್ತಿಲ್ವಲ್ಲ ?"

"ಅದೇ ಯಾಕೇಂತ"

"ಚಂದ್ರಲೋಕದಲ್ಲಿ ಪಾಕಿಗಳು, ನಾಕಿಗಳು ಅಂತ ಯಾರೂ ಇಲ್ವಲ್ಲ ತಡೆಯೋಕೆ ? ಇಲ್ಲಿ ಆದ್ರೆ ಹಾಗಲ್ವಲ್ಲ!"

"ಅದೂ ಸರೀನ್ನು, ಹಾಂ, ವಾಲ್ಮೀಕಿಗಳೂ ಅಲ್ಲೆ ಸಿಗ್ತಾರೋ ಹೇಗೆ ?"

"ಅವರೂ ಚಿರಂಜೀವಿಗಳಾಗಿದ್ರೆ, ಆ ಋಷಿಗಳ ಮಧ್ಯೆ ಸಿಕ್ಕರೂ ಸಿಗಬಹುದು. ಪ್ರಯತ್ನಿಸಿ ನೋಡು." ಎಂದು ನುಡಿದ ವಿಷ್ಣು ಪುನಃ ಕುತೂಹಲಭರಿತನಾಗಿ "ಅವರೆಲ್ಲ ನಿಂಗೆ ಈಗ ಯಾಕೋ ?" ಎಂದು ಪ್ರಶ್ನಿಸಿದ.

ಅಷ್ಟರಲ್ಲಿ ವಿಷ್ಣು ಪತ್ನಿ ಲಕ್ಷ್ಮಿ ಕಾಫಿ ತಂದಿತ್ತಳು. ಈಗ ವಿಧಿಯಿಲ್ಲದೆ ಅಲ್ಲೇ ಆಸೀನನಾದ ಶ್ರೀಪಾದು ನಿಧಾನವಾಗಿ ಕಾಫಿಯನ್ನು ಹೀರತೊಡಗಿದ.

"ಕಾಫಿ ರುಚಿ ಅದ್ಭುತವಾಗಿದೆ" ಎಂದು ಹೊಗಳುತ್ತ, ನಿಧಾನವಾಗಿ ಕಾಫಿಯನ್ನು ಕುಡಿಯುವುದರಲ್ಲಿ ಮಗ್ನನಾದ ಶ್ರೀಪಾದುಗೆ ತನ್ನ 'ದೊಡ್ಡಬದ್ರಿ'ಗೆ 'ಅವಸರದ ಪ್ರಯಾಣ'ದ ವಿಷಯ ಮರೆತೇಹೋಯ್ತು.

ಆದರೆ ಕುತೂಹಲಪೀಡಿತನಾದ ವಿಷ್ಣು ಮಾತ್ರ ಮರೆತಿರಲಿಲ್ಲ. ಆದ್ದರಿಂದಲೇ ಪ್ರಶ್ನಿಸಿದ :

"ತ್ರೇತಾಯುಗದ ವಾಲ್ಮೀಕಿ, ದ್ವಾಪರಯುಗದ ವ್ಯಾಸ, ಇವರನ್ನೆಲ್ಲ ಸಂಧಿಸೋ ವಿಚಿತ್ರ ಆಸೆ ಕಲಿಯುಗ ಸಂಭವನಾದ ನಿನ್ನಲ್ಲಿ ಹೇಗೆ ಉದ್ಭವ ಆಯ್ತೋ ಶ್ರೀಪಾದು ? 'ಬ್ಯಾಕ್ ಟು ದಿ ಫ್ಯೂಚರ್' ಸಿನೇಮಾದ ಸ್ಫೂರ್ತಿನೋ ಹೇಗೆ ? ಅಥವಾ ಹಳೇವಸ್ತು ಸಂಶೋಧಕರ ಹಾಗೆ ಪ್ರಾಚೀನ ಮಾನವರ ಸಂಶೋಧನೆ ನಡೆಸಿದ್ದೀಯಾ ?"

"ಅಂಥದ್ದೆಲ್ಲ ಏನೂ ಇಲ್ಲಯ್ಯ. ನಮ್ಮ ಅಜ್ಜನ ದೆಸೆಯಿಂದ ಇತ್ತೀಚೆಗೆ ಮೂಲ ರಾಮಾಯಣ, ಮೂಲ ಮಹಾಭಾರತದ ಕತೆಗಳು ಗೊತ್ತಾಯ್ತು. ಆದರೆ ಯಾಕೋ ಇತ್ತೀಚಿನ ಈ ಕತೆಗಳಲ್ಲಿ ತುಂಬಾ ಎಡವಟ್ಟು ಆದ್ಹಂಗೆ ಕಾಣಿಸ್ತು. ಕೆಟ್ಟೋರೆಲ್ಲ ಒಳ್ಳೆಯವರೂ, ಒಳ್ಳೆಯವರೆಲ್ಲಾ ಕೆಟ್ಟವರು ಅಂತ ಹೊಸ ರಾಮಾಯಣ, ಮಹಾಭಾರತದಲ್ಲಿ ತಿರುಗ ಮುರುಗ ಆಗಿಬಿಟ್ಟಿದ್ದಾರೆ. ಈ

ವ್ಯತ್ಯಾಸಗಳನ್ನೆಲ್ಲ ನೋಡ್ತಾ ನೋಡ್ತಾ ನನ್ನ ತಲೇನೇ ಕೆಟ್ಟುಹೋಯ್ತು ಮರಿ.''

''ಸರಿ, ಹೊಸ ಕತೆ ನೋಡಿ ನಿನ್ ತಲೆ ಕೆಡೋದಕ್ಕೂ, ಆ ವ್ಯಾಸ - ವಾಲ್ಮೀಕಿಗಳಿಗೂ ಏನು ಸಂಬಂಧಾನೋ ?''

''ಥತ್ ! ಎಂಥಾ ಬಕರಾನೋ ನೀನು ? ಇವು ಅವ್ರು ಬರೆದ ಕತೆ ಅಲ್ವಾ ? ತಮ್ಮ ಕತೆ ಹೆಂಗ್ಹೆಂಗೋ ಆಗಿಬಿಟ್ಟಿದೆ ಅಂದ್ರೆ ಅವರಿಗೆ ಬೇಜಾರಾಗಲ್ವ ?''

''ಅವರು ಇಲ್ಲಿ ಇಲ್ವಲ್ಲ ಬೇಜಾರಾಗೋಕೆ.''

''ಅದಕ್ಕೇ ಹೇಳಿದ್ದು, ನಾನು ಹೋಗಿ ಕರೆದುಕೊಂಡು ಬರ್‍ತೀನೀಂತ.''

''ಕರ್‍ಕೊಂಡು ಬಂದು ?......'' ಅವಾಕ್ಕಾಗಿ ಪ್ರಶ್ನಿಸಿದ ವಿಷ್ಣು.

''ಕೇಸ್ ಹಾಕಿಸ್ತೀನಿ.'' ಗರಂ ಆಗಿ, ಬಿಗಿಯಾಗಿ ಹೇಳಿ ಬೀಗಿದ ಶ್ರೀಪಾದು.

ಇವನು ಲಾಯರ್ ಆದ ಮೇಲೆ ಇವನಿಗೆ ಕೇಸ್ ಹಾಕೋದೊಂದೇ ಧ್ಯಾನ ಆಯ್ತಲ್ಲ ಅಂತ ವಿಷ್ಣು ಮನದೊಳಗೇ ಪೇಚಾಡಿಕೊಂಡ. ಆದರೂ ಯಾರ ಮೇಲೆ ಯಾಕಾಗಿ ಕೇಸ್ ಹಾಕ್ತಾನೇಂತ ಕೇಳಿದ.

ತಾನೊಬ್ಬ ಜವಾಬ್ದಾರಿಯುತ ವಕೀಲನಾದ್ದರಿಂದ, ಯಾರಿಗೆ ಎಲ್ಲಿಯೇ ಅನ್ಯಾಯವಾಗಿರಲಿ, ತಾನು ಅಲ್ಲಿಗೇ ಹೋಗಿ ಅವರಿಗೆ ನ್ಯಾಯ ದೊರಕಿಸಿಕೊಡಲು ಹೋರಾಡುತ್ತೇನೆ ಎಂದು ತನ್ನ ಸಂಕಲ್ಪವನ್ನು ಗೆಳೆಯನಿಗೆ ಮನದಟ್ಟು ಮಾಡಿಕೊಟ್ಟ ಶ್ರೀಪಾದು.

ಮಹಾಭಾರತ, ರಾಮಾಯಣಗಳು ಕೇವಲ ಕಾವ್ಯವೆ, ಸತ್ಯಕಥೆಯೆ, ಐತಿಹಾಸಿಕ ಪುರಾಣವೇ ಎಂಬುದನ್ನು ಮೊಟ್ಟಮೊದಲಿಗೆ ಅವರಿಂದ ಕೇಳಿ ತಿಳಿದುಕೊಂಡ ಬಳಿಕ, ಈ ಕತೆಗಳು ಈಗ ವ್ಯತ್ಯಾಸವಾಗಿರುವುದರಿಂದ ಸತ್ಯವನ್ನು ತಿರುಚಿದಂತೆ ಆಗಿದೆಯೇ, ಅಥವಾ ಮೂಲಕತೆಯನ್ನು ವಿಕಾರ ಗೊಳಿಸಿದ ದೋಷ ಬಂತೆ ಎಂಬುದನ್ನು ಪರಾಮರ್ಶಿಸ ಲಾಗುವುದು. ಮತ್ತೆ ಅದಕ್ಕೆ ಬೇಕಾದ ಕಾಯಿದೆಗಳನ್ನು ಇರಿಸಿಕೊಂಡು ಹೋರಾಡಲಾಗುವುದು ಎಂದು ಶ್ರೀಪಾದು ವಿವರಿಸಿದ. ಅಂದಂದಿನ ಜನಜೀವನ, ಸಂಸ್ಕೃತಿಗಳನ್ನು ಬಿಂಬಿಸುವ ಕೃತಿಗಳನ್ನು ಬದಲಿಸುವ ಬಗ್ಗೆ ತನ್ನ ವಿರೋಧ ಉಂಟೆಂದು ಸಾರಿದ.

ಹಳತ್ತನ್ನು ಕೆದಕಿ ಋಷಿಮೂಲ, ಕತೆಮೂಲಗಳ ಪತ್ತೆಗೆ ಕೈಹಾಕಿ ಕೈಸುಟ್ಟುಕೊಳ್ಳಬಾರದೆಂದು ವಿಷ್ಣು ಕೇಳಿಕೊಂಡ. ಶ್ರೀಪಾದು ಒಪ್ಪಲಿಲ್ಲ. ಬೀದಿಯಲ್ಲಿ ಹೋಗೋ ಮಾರಿಯನ್ನು ಮನೆಯೊಳಗೆ ಕರೆತರುವಂಥ ಪ್ರಮಾದದಲ್ಲಿಯೇ ಒಲವು ತೋರುವ ಗೆಳೆಯನಿಗೆ ವಿಷ್ಣು ನಾನಾ ಪರಿಯಲ್ಲಿ ಬುದ್ಧಿ ಹೇಳಿದ. ಆದರೆ ಅದು ನೀರಲ್ಲಿ ಮಾಡಿದ ಹೋಮದಂತಾಯ್ತು. ವಿಷ್ಣುವಿನ ತಲೆ ಬಿಸೀ ಆಯ್ತು. ಆದರೆ ಆ ಬಿಸಿ ಶ್ರೀಪಾದುಗೆ ತಟ್ಟಲೇ ಇಲ್ಲ. ಅವನದು ಒಳ್ಳೇ ಫೈರ್ ಪ್ರೂಫ್ ದೇಹಾನೇ ಇರಬೇಕು ! ಅಷ್ಟೇ ದೊಡ್ಡದಾದ ಬೇರೆ ಕಾವ್ಯವನ್ನು ರಚಿಸದೆ ಇವುಗಳನ್ನೇ ಬದಲಿಸುತ್ತಿರು ವುದರಿಂದ, ಅದನ್ನ ಇನ್‌ವೆಸ್ಟಿಗೇಟ್ ಮಾಡಲೇ ಬೇಕೆಂಬುದು ಶ್ರೀಪಾದು ವಾದ.

''ನಿನ್ನ ವಾದವನ್ನ ಒಂದು ಕಡೆ ಕಟ್ಟಿಡು. ಅವರಿಗೂ ವ್ಯಾಸ ಮುಂತಾದವರಿಗೂ ಏನಾದರೂ ಅಂಡರ್ ಸ್ಟ್ಯಾಂಡಿಂಗ್ ಇರಬೋದು. ನೀನ್ಯಾಕೆ ಸುಮ್‌ಸುಮ್ನೆ ಮಧ್ಯದಲ್ಲಿ ಮೂಗು ತೂರಿಸ್ಬೇಕು ?'' ವಿಷ್ಣುವಿನ ಅಡ್ಡಗಾಲು !

''ಅಂದ್ರೆ ನಂಗಿಂತ ಮೊದಲು ಅವರೆಲ್ಲ ವ್ಯಾಸ - ವಾಲ್ಮೀಕಿಗಳನ್ನು ಮೀಟ್ ಮಾಡಿದ್ದಾರಾ ? ಮತ್ತೆ ನಂಗ್ಯಾಕೆ ಆಗಲ್ಲ? ನಾನೂ ಹೋಗಿ ವಿಷಯಾನ್ನ ಕ್ಲ್ಯಾರಿಫೈ ಮಾಡ್ಕೊಂಡು ಬಂದು ಪೇಪರಲ್ಲಿ ಹಾಕಿಸ್ತೀನಿ.''

ತಪ್ಪೋ ಸರಿಯೋ ತಾನು ಹಿಡಿದ ಪಟ್ಟನ್ನು ಬಿಡದ ಶ್ರೀಪಾದುವಿನ ಗಮನವನ್ನು ಬೇರೆಡೆಗೆ ಸೆಳೆಯಲು ವಿಷ್ಣು ಪ್ರಯತ್ನಿಸಿದ.

''ಪಾದು, ಮೊನ್ನೆಯ ಪೇಪರ್ ನೋಡಿದ್ಯೇನೋ ? ಖಂಡಾಲಾದ ಮಹಿಳೆಯರು ಮಾಡಿದ ಘೇರಾವ್ ಬಗ್ಗೆ ಫೋಟೋ, ವರದಿ ಎಲ್ಲ ಬಂದಿತ್ತು.''

''ನೋಡದೆ ಏನು ? ಶರಾಬು ಅಂಗಡಿ ಕಿತ್ತುಹಾಕಿ, ತಮ್ಮ ಗಂಡಂದಿರ ದುಶ್ಚಟಕ್ಕೆ ವಿದಾಯ ಕೋರಿ ಅಂತ ತಾನೆ ?''

''ಹೌದು, ಉಡುಪಿಯ ಮಧ್ವನಗರದ ಜನರೂ ಇದೇ ತರ ಗಲಾಟೆ ಎಬ್ಬಿಸಿದ್ರು. ಹೀಗೇ ಹತ್ತಾರು ಕಡೆ ಗಲಾಟೆಗಳು ನಡೆದರೆ ಬಾರ್‌ಗಳು ಮಾಯವಾಗಿ, ಕುಡಿದು ದಾರಿಯಲ್ಲಿ ಬೀಳುವವರು ಇಲ್ಲವಾಗಬಹುದಲ್ವ ?''

''ಖಂಡಿತ ಸಾಧ್ಯವಿಲ್ಲ. ಸರಕಾರ ಬಾರ್‌ಗಳನ್ನು ತೆಗೆಯಲು ಸಾಧ್ಯವಿಲ್ಲ, ತೆಗೆಯಲೂಬಾರದು.''

''ಏನೋ ಇದು ಅನ್ಯಾಯ ? ಕುಡಿತ ನೂರ್‍ಕಾಲ ಬಾಳ್ಬೇಕಾ ?'' ಕಂಗಾಲಾಗಿ ಕೂಗಿಕೊಂಡ ವಿಷ್ಣು.

''ನೂರ್‍ಕಾಲ ಅಲ್ಲ, ಸಾವಿರಾರು ಕಾಲ ಬಾಳ್ಬೇಕು.'' ಕೂಲಾಗಿ ಉತ್ತರಿಸಿದ ಶ್ರೀಪಾದು.

''ಅದು ಯಾಕೇಂತ ?''

''ನೋಡೋ ವಿಷ್ಣು, ಕಳ್ಳು ಗಿಡ ಹತ್ತುವವನು ಬಡವ, ಕಳ್ಳು ಇಳಿಸುವವನು ಬಡವ, ಅದನ್ನು ಕುಡಿಯುವವನೂ ಬಡವ, ಕುಡಿದು ಎಲ್ಲ ನೋವು ಗಳನ್ನು ಮರೆಯುವವನೂ ಬಡವ.....''

''ಇದ್ದ ಬದ್ದದ್ದನ್ನು ಕಳೆದುಕೊಳ್ಳೋನೂ ಬಡವ.'' ವಿಷ್ಣು ಮಧ್ಯೆ ಬಾಯಿ ಹಾಕಿದ.

''ಇದ್ದರೆ ತಾನೆ ಕಳೆದುಕೊಳ್ಳೋಕೆ ? ಏನೂ ಇಲ್ಲಾಂತ್ಲೇ ಅವ್ನು ಕುಡ್ದು ಬದುಕಿರೋದು.''

''ಕುಡಿತದಿಂದ ಆರೋಗ್ಯ ಕೆಡುತ್ತಲ್ಲೋ.''

''ಸರಕಾರ ಫ್ರೀ ಟ್ರೀಟ್‌ಮೆಂಟ್ ಕೊಡಿಸುತ್ತೆ ಬಿಡು'' ನಿರಾತಂಕವಾಗಿ ನುಡಿದ ಶ್ರೀಪಾದು.

ವಿಷ್ಣುಗೆ ಹೊಟ್ಟೆ ಉರಿದುಹೋಯ್ತು.

''ನೀನೇನೇ ಹೇಳು ಶ್ರೀಪಾದು, ಈ ಬೀಡಿ, ಸಿಗರೇಟು, ಹೆಂಡ ಎಲ್ಲ ಬ್ಯಾನ್ ಆಗ್ಲೇಬೇಕು.'' ರೋಷಾವೇಷದಿಂದ ನುಡಿದ ವಿಷ್ಣುವನ್ನು ಕನಿಕರದಿಂದ ನೋಡುತ್ತ ಶ್ರೀಪಾದು ವಿಷಯವನ್ನು ಮತ್ತಷ್ಟು ವಿವರಿಸಿದ.

''ನೋಡೋ ವಿಷ್ಣು, ಇವೆಲ್ಲವನ್ನೂ ಬ್ಯಾನ್ ಮಾಡಿದ್ರೆ, ಅದರಲ್ಲಿ ದುಡೀತಿರೋ ಸಾವಿರಾರು ಜನರಿಗೆ ನೀನು ಯಾವ ಉದ್ಯೋಗ ಕೊಡ್ತಿ ? ವಿದ್ಯೆ ಕಲ್ತು ಕೆಲ್ಸ ಮಾಡಿ ಅಂದ್ರೆ, ವಿದ್ಯೆ ಕಲ್ತು ಕೆಲ್ಸ ಬಿಡ್ತಾ ಬರ್‍ತಿದ್ದಾರೆ ನಮ್ಮೋರು. ಮನೆ ಕೆಲ್ಸ, ಮರಗೆಲ್ಸ, ಗದ್ದೆ ಕೆಲ್ಸ ಎಲ್ಲ 'ಜಾಬ್' ಅಲ್ವಂತೆ. ನಾಲ್ಕನೇ ಕ್ಲಾಸು ಕಲ್ತೋನಿಗೂ ಎ.ಸಿ.ರೂಮಲ್ಲಿ ಕೆಲ್ಸ (ಜಾಬ್) ಬೇಕಂತೆ. ಗೊತ್ತಾಯ್ತ? ಈಗ ನೀನೇ ಹೇಳು ನಾನು ಹೇಳಿದ್ದು ಸರಿನೋ ತಪ್ಪೋಂತ.''

'ಸರಿ' ಅಂತ ಒಪ್ಪಿಕೊಳ್ಳಲು ವಿಷ್ಣುಗೆ ಇಷ್ಟವಾಗಲಿಲ್ಲ. ಆದರೆ ಈಗಿನ ಪರಿಸ್ಥಿತೀಲಿ ಒಪ್ಪಿಕೊಳ್ಳದೆ ಇರೋ ಹಾಗೂ ಇಲ್ಲ. ಅವನ ಮನೆ ತೆಂಗಿನಮರಕ್ಕೆ ಹತ್ತಿ, ಕಾಯಿ ಕೊಯ್ಯಲು ಇತ್ತೀಚೆಗೆ ಜನನೇ ಸಿಗುತ್ತಾ ಇಲ್ಲ. ತೆಂಗಿನಕಾಯಿ ಕೊಯ್ಯಲಿಕ್ಕೆ ಪರದೇಶದಿಂದ ಟ್ರೈನ್ಡ್ ಮಂಗಗಳನ್ನು ತರಿಸುವ ಯೋಜನೆ ಎಷ್ಟೋ ಸಲ ಅವನ ತಲೆಯಲ್ಲಿ ಹಾದುಹೋಗಿತ್ತು.

ಗೆಳೆಯನ ಬಾಯಿ ಕಟ್ಟಿಹೋಗಿ, ಕಣ್ಣುಗಳು ಪಿಳಿಪಿಳಿ ಆಗುತ್ತಿರುವುದನ್ನೇ ಗಮನಿಸುತ್ತಿದ್ದ ಶ್ರೀಪಾದುಗೆ ಒಮ್ಮೆಲೇ ವ್ಯಾಸ-ವಾಲ್ಮೀಕಿಗಳ ನೆನಪಾಯ್ತು.

''ದೊಡ್ಡಬದ್ರಿಗೆ ಹೋಗಿ ಬರಕ್ಕೆ ಆಗುತ್ತಾಂತ ನೋಡ್ತೀನಿ ಕಣಯ್ಯ. ಬಾಯ್'' ಎಂದು ಒಂದೇ ನೆಗೆತಕ್ಕೆ ಹಾರಿಹೋದ ಶ್ರೀಪಾದು.

ಶ್ರೀಪಾದುಗೆ ಹಿಡಿದ ಹುಚ್ಚಿಗೆ ಮದ್ದುಂಟೆ ? ಎಂದು ಚಿಂತಿಸುತ್ತ ಕಣ್ಮುಚ್ಚಿ ಕುಳಿತ ವಿಷ್ಣು ಹಗಲು ನಿದ್ದೆಯೊಳಗೆ ಜಾರಿಬಿದ್ದ. ನಿದ್ದೆಯಲ್ಲಿ ಬಿದ್ದವನಿಗೆ ಕನಸು ಎದುರಾಯ್ತು, ಅದರಲ್ಲಿ ವ್ಯಾಸ, ವಾಲ್ಮೀಕಿ, ಶ್ರೀಪಾದು, ಕೋರ್ಟು, ಕಚೇರಿ, ಗಲಾಟೆ, ಕೂಗಾಟ ಎಲ್ಲ ಕಂಡು ಬಂದು ಕಿಟಾರೆಂದು ಕಿರುಚಿ ಎದ್ದ.

''ಏನ್ರೀ ಅದು ?'' ಎಂದು ಅಡುಗೆಮನೆಯಿಂದ ಹೊರಬಂದು ಪ್ರಶ್ನಿಸಿದ ಪತ್ನಿಗೆ ''ದುಃಸ್ವಪ್ನ'' ಎಂದುತ್ತರಿಸಿದ.

''ಹಾಡು ಹಗಲಲ್ಲಿ ದುಃಸ್ವಪ್ನ ? !'' ಎಂದು ಹುಬ್ಬೇರಿಸಿದ ಆಕೆಗೆ ಉತ್ತರಿಸದೆ, ಎಲ್ಲಾ ಗಂಡಸರು ಮಾಡುವ ತೆರದಲ್ಲೇ, ಭಾರೀ ಕೆಲಸವಿದ್ದವನಂತೆ ನಟಿಸುತ್ತ ಎದ್ದು ಹೊರನಡೆದ.

(ಈತನೂ ಶ್ರೀಪಾದುವಿನ ಹಿಂದೆ 'ದೊಡ್ಡಬದ್ರಿ'ಗೇ ಹೋದನೋ ಏನೋ ! ಕಾದು ನೋಡಬೇಕು.)



ಸತ್ಯವತಿ
W/O ಡಾ|| ಎಸ್. ಹರಿಕೃಷ್ಣನ್, ಸರ್ಜನ್ ಡೆಂಟಿಸ್ಟ್
ಸುರತ್ಕಲ್ - ೫೭೫೦೧೪

# ಎಲ್ಲೋ ಜೋಗಪ್ಪ ನಿನ್ನರಮನೆ

**ಭ್ರಮಾಧೀನನಾದ ಮನುಷ್ಯ ಪುಣ್ಯ ಸಂಪಾದನೆಯ ದಾರಿಯಲ್ಲಿ ಇನ್ನಷ್ಟು ಜೀವವಿರೋಧಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳತ್ತಾ , ಮೂಢನಂಬಿಕೆಗಳ ದಾಸನಾಗುತ್ತಾನೆ. ಸ್ವರ್ಗಲೋಕ ಪ್ರಾಪ್ತಿಗಾಗಿ ಸುಲಭ ಮಾರ್ಗಗಳನ್ನು ತಿಳಿಸುವ, ಮೇಲಿನ ಲೋಕದ ವರ್ಣನೆಯ ಸಾಹಿತ್ಯ ಕೃತಿಗಳು, ನಮ್ಮ ದೇಶದಲ್ಲಿ ಇಂದಿಗೂ ಬಹುವಾಗಿ ಮಾರಾಟವಾಗುತ್ತಿವೆ. ಸೃಜನಶೀಲ, ವೈಚಾರಿಕ ಸಾಹಿತ್ಯವೆಂದರೆ, ನಾಸ್ತಿಕರ ಸಾಹಿತ್ಯವೆಂಬ ಹುಸಿ ಕಲ್ಪನೆ ಬೆಳೆದುಬಂದಿದೆ.**

**ಜಯದೇವಪ್ಪ ಜೈನಕೇರಿ**

ಬದುಕಿನ ಮುಖ್ಯ ಉದ್ದೇಶವೇ ಸರಿಯಾದ ರೀತಿಯಲ್ಲಿ ಬದುಕುವುದು. ಬುದ್ಧಿವಂತನಾದವನು ಸರಿಯಾಗಿ ಯೋಚಿಸಿ ಬದುಕು ನಡೆಸುತ್ತಾನೆ. ತಾನು ಮಾಡಬೇಕಿರುವುದನ್ನು ಹೇಳುತ್ತಾ ತಿರುಗುವವನು ತಾನು ಹಿಂದೆ ಮಾಡಿದ್ದನ್ನೇ ಅತಿ ರಂಜಿತವಾಗಿ ಹೇಳಿಕೊಳ್ಳುವವನು ಮೂರ್ಖನೆನಿಸಿಕೊಳ್ಳುತ್ತಾನೆ. ಮನುಷ್ಯ ಹುಟ್ಟುತ್ತಾನೆ ಬೆಳೆಯುತ್ತಾನೆ. ತಾನು ಹುಟ್ಟಿ ಬೆಳೆದ ವಾತಾವರಣ ಮತ್ತು ಬೆಳೆದ ರೀತಿಗೆ ತಕ್ಕ ಹಾಗೆ ಕಾರ್ಯವೆಸಗುತ್ತಾನೆ. ಒಂದು ದಿನ ಮೃತ್ಯುವಶನಾಗುತ್ತಾನೆ. ಪ್ರಕೃತಿಯ ಈ ಸಾಮಾನ್ಯ ಪ್ರಕ್ರಿಯೆಯ ವಿರುದ್ಧ ಮನುಷ್ಯನ ಇಷ್ಟಗಳು ಏನೇನೂ ಪರಿಣಾಮ ಬೀರುವುದಿಲ್ಲ. ಸತ್ತ ನಂತರ ಹೆಚ್ಚಿನ ಪಾಲು ಜನರು ಮರೆತು ಹೋಗುತ್ತಾರೆ. ಆದರೆ ಕೆಲವರು ಕೆಲವು ಸಮಯದವರೆಗೆ ಮಾತ್ರ ನೆನಪಿನಲ್ಲಿ ಉಳಿಯುತ್ತಾರೆ. ಮತ್ತೆ ಕೆಲವರು ಶತಶತಮಾನಗಳ ಕಾಲ ನೆನಪಿನಲ್ಲಿ ಉಳಿಯುತ್ತಾರೆ. ಇದಕ್ಕೆ ಕಾರಣಗಳೇನು ? ಕೆಲವರ ಸಾವು ಅವರ ಕುಟುಂಬದವರಿಗೆ ಮಾತ್ರ ದುಃಖ ನೀಡುತ್ತದೆ. ಇನ್ನು ಕೆಲವರ ಸಾವು ಕೆಲವು ವಲಯಗಳಲ್ಲಿ ಶೂನ್ಯವನ್ನು ಸೃಷ್ಟಿಸಿ, ಚರ್ಚೆಯ ವಸ್ತುವಾಗುತ್ತದೆ, ಮತ್ತೆ ಕೆಲವರ ನಿಧನ ಶೂನ್ಯಭಾವನೆಯ ಜೊತೆಗೆ ಸಾಮಾಜಿಕ ಜೀವನದಲ್ಲಿ ಅಶ್ರುಪೂರಿತ ಶ್ರದ್ಧಾಂಜಲಿಗೆ ಕಾರಣವಾಗಿ ಜನಮಾನಸದಲ್ಲಿ ಬಹುಕಾಲ ಅವರು ಮಾಡಿದ ಸೇವೆ, ಅವರ ಮಾನವೀಯ ಗುಣಗಳ ನೆನಪು ಮೂಡಿಸುತ್ತಲೇ ಇರುತ್ತದೆ. ಜನರ ಬದುಕನ್ನು ಶ್ರೀಮಂತಗೊಳಿಸಿದ ಜೀವನ ಮೌಲ್ಯಗಳಿಗೆ ಕಾರಣರಾದವರ ಜೀವನದಿಂದ ಸ್ಫೂರ್ತಿ, ಪ್ರೇರಣೆ ಪಡೆಯಲು ಮನುಷ್ಯ ಪ್ರಯತ್ನಿಸುತ್ತಾನೆ. ಆ ಮೂಲಕ ಅಂಥವರ ಚೇತನ ಮನುಕುಲಕ್ಕೆ ಮಾರ್ಗದರ್ಶನ ಮಾಡುತ್ತಲೇ ಇರುತ್ತದೆ. ಈ ಬದುಕು ಜೀವ ತಳೆದ ಮರುಕ್ಷಣದಿಂದಲೇ ಸಾವಿನ ಕಡೆಗೆ ಮುಖ ಮಾಡುತ್ತದೆ. ಹಾಗೆಯೇ ಜೀವನ್ಮುಖಿ ಯಾಗಿಯೂ ಪ್ರವಹಿಸುತ್ತದೆ. ಈ ಎರಡೂ ಸತ್ಯಗಳನ್ನು ಏಕಕಾಲಕ್ಕೆ ಗ್ರಹಿಸುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು.

ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಸುಖ, ಆನಂದ ಎಂಬುದು ಕೈಗೆಟುಕದ, ಕಣ್ಣಿಗೆ ಕಾಣದ, ವಾಸ್ತವವಾಗಿ ಇಲ್ಲದ, ಕಲ್ಪನೆಯ ಸ್ವರ್ಗವನ್ನು ಪ್ರವೇಶಿಸುವುದರಲ್ಲೇ ಇದೆ ಎಂಬ ಸತ್ಯ ಸಂಗತಿಗಳನ್ನೇ ನಮ್ಮ ಪುರಾಣಗಳು, ನಂಬಿಕೆಗಳು, ಪ್ರಾಚೀನ ಗ್ರಂಥಗಳು ಪ್ರತಿಪಾದಿಸುತ್ತಾ ಬಂದಿರುವುದನ್ನು ಕಾಣಬಹುದು. ಸ್ವರ್ಗವೆಂದರೆ, ಎಲ್ಲ ಐಷಾರಾಮಿ ವಸ್ತುಗಳು ಪುಕ್ಕಟೆಯಾಗಿ ಸಿಗುವ ಸ್ಥಳ, ದೇವಾನುದೇವತೆಗಳು ಇರುವ ಸ್ಥಳ, ಬೇಕಾದಷ್ಟು ಅಮೃತಪಾನ ಮಾಡಬಹುದಾದ, ರಂಭೆ, ಊರ್ವಶಿ, ಮೇನಕಾ ಮುಂತಾದ ಸುಂದರಿಯರು ನರ್ತನ ಮಾಡುವ ಸ್ಥಳ, ಭೂಲೋಕದಲ್ಲಿ ನಾವು ಊಹಿಸಲೂ ಸಾಧ್ಯವಾಗದ ಎಲ್ಲ ಸುಖ, ಸಂತೋಷಗಳೂ ಇರುವ ಸ್ಥಳ ''ಸ್ವರ್ಗ'' ಎಂಬ ಕಲ್ಪನೆ ಇದೆ. ಸಾವು ಇಲ್ಲದ ಸ್ಥಳವೆಂದರೆ ''ಸ್ವರ್ಗ'' ಎಂಬ ನಂಬಿಕೆಯೂ ಬೆಳೆದುಬಂದಿದೆ. ಇಂತಹ ಕಲ್ಪನೆಯ ಸ್ವರ್ಗವನ್ನು ನಮ್ಮ ಕೈಗೆಟುಕಿಸಲು, ಈ ಭೂಮಿಯ ಮೇಲೆ ಹಲವಾರು ಬಾಬಾಗಳು, ಢೋಂಗಿ ಸ್ವಾಮಿಗಳು, ದೇವಮಾನವರು, ತಾಂತ್ರಿಕರೂ ಸದಾಕಾಲ ಕಾದಿರುತ್ತಾರೆ. ಅವರು ವಾಸ್ತವ ಲೋಕದ ಅನೇಕ ಕಷ್ಟ-ನಷ್ಟ, ರೋಗ-ರುಜಿನಗಳನ್ನು, ಮೋಸ - ವಂಚನೆಗಳನ್ನು ಹೇಳುತ್ತಲೇ, ಕಾಣದ ಪರಲೋಕ, ಕಲ್ಪನೆಯ ಸ್ವರ್ಗಲೋಕವನ್ನು ನಮಗೆ ದೊರಕಿಸುವುದಕ್ಕಾಗಿ ನಮ್ಮ ಜೇಬುಗಳಿಗೆ ಕನ್ನ ಕೊರೆಯುತ್ತಾರೆ. ಭ್ರಮಾಧೀನನಾದ ಮನುಷ್ಯ ಪುಣ್ಯ ಸಂಪಾದನೆಯ ದಾರಿಯಲ್ಲಿ ಇನ್ನಷ್ಟು ಜೀವ ವಿರೋಧಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಾ, ಮೂಢನಂಬಿಕೆಗಳ ದಾಸನಾಗುತ್ತಾನೆ. ಸ್ವರ್ಗಲೋಕ ಪ್ರಾಪ್ತಿಗಾಗಿ ಸುಲಭ ಮಾರ್ಗಗಳನ್ನು ತಿಳಿಸುವ, ಮೇಲಿನ ಲೋಕದ ವರ್ಣನೆಯ ಸಾಹಿತ್ಯ ಕೃತಿಗಳು, ನಮ್ಮ ದೇಶದಲ್ಲಿ ಇಂದಿಗೂ ಬಹುವಾಗಿ ಮಾರಾಟವಾಗುತ್ತಿವೆ. ಸೃಜನಶೀಲ, ವೈಚಾರಿಕ ಸಾಹಿತ್ಯವೆಂದರೆ, ನಾಸ್ತಿಕರ ಸಾಹಿತ್ಯವೆಂಬ ಹುಸಿ ಕಲ್ಪನೆ ಬೆಳೆದು ಬಂದಿದೆ. ಈ ಲೋಕದಲ್ಲಿ ಇದ್ದೇ ಸುಂದರ ಬದುಕನ್ನು, ಸಹಜೀವಿಗಳಿಗೂ ಹಿತವಾದ ಬದುಕನ್ನು, ತಿಳುವಳಿಕೆಯನ್ನು ನೀಡುವ ಸಾಹಿತ್ಯವನ್ನು ಓದುವವರು ತುಂಬ ಕಡಿಮೆ ಎಂಬುದು ವಾಸ್ತವ ಸತ್ಯ. ವಿಪರ್ಯಾಸದ ಸಂಗತಿಯೆಂದರೆ, ನಮ್ಮ ವಿಜ್ಞಾನಿಗಳೂ ವೈಚಾರಿಕ ಚಿಂತಕರೂ ಅನುಭಾವಿಗಳೂ ವೇದಿಕೆಯ ಮೇಲೆ ಹೇಳುತ್ತಲೇ, ವೈಯಕ್ತಿಕ ಜೀವನದಲ್ಲಿ ಎಲ್ಲೋ ಒಂದು ಕಡೆ ಮೂಢನಂಬಿಕೆಗಳ ದಾಸರಾಗಿರುತ್ತಾರೆ.

ಈ ಲೋಕದಲ್ಲಿದ್ದೇ ಕಾಯಕ ಮಾಡಿ, ದಾಸೋಹ ಮಾಡಿ, ಪರರಿಗುಪಕಾರಿಯಾಗಿ ಬದುಕು ನಡೆಸುತ್ತಾ ಸುಖ, ಸಂತೋಷ ಪಡೆಯಬಹುದೆಂಬ ವಾಸ್ತವವನ್ನು ಅರಿತು, ಅದರಂತೆ ನಡೆಯುವವರು ತುಂಬ ಅಪರೂಪ ಎನ್ನಬಹುದು. ಸತ್ಯ, ನ್ಯಾಯ, ಪ್ರಾಮಾಣಿಕತೆಗಳಿಂದ ಸ್ವರ್ಗ ಸುಖ ಇಲ್ಲಿಯೇ ಇದೆ ಎಂಬ ವಾಸ್ತವವನ್ನು ಜನಮಾನಸದಲ್ಲಿ ಬಿತ್ತುವ ಕಾರ್ಯವನ್ನು ೧೨ನೇ ಶತಮಾನದ ಶರಣರು ಪರಿಣಾಮಕಾರಿಯಾಗಿ ಮಾಡಿದರು. ಪುನಃ ಮುಂದಿನ ಜನಾಂಗ, ದೇವರ ಮೇಲೆ ಭಾರ ಹಾಕುತ್ತಾ ಪಲಾಯನ ವಾದವನ್ನೇ ಆಧ್ಯಾತ್ಮಿಕ ಚಿಂತನೆ ಎಂದು ಹೇಳುತ್ತಾ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದಾರೆ. ಕಾಣದ ದೇವರಲ್ಲಿ ನಂಬಿಕೆ ಹೊಂದಿರುವುದು ಮಾನವನ ಸಹಜ ಗುಣ. ತಂದೆ, ತಾಯಿ, ಹೆಂಡತಿ, ಮಕ್ಕಳು ತುಂಬ ನಂಬಿಕೆಯವರು ಎಂದೇ ತಿಳಿದು ಬಾಳಬೇಕಾಗುತ್ತದೆ. ಕೆಲವು ಗೆಳೆಯರು, ಸಂಬಂಧಿಕರು ಮುಂತಾದವರೂ ತುಂಬ ಒಳ್ಳೆಯವರೆಂದು ನಂಬಿಕೊಂಡೇ ಬದುಕಬೇಕಾಗುತ್ತದೆ. ನಂಬಿಕೆ ಮನುಷ್ಯನಿಗೆ ಉತ್ತೇಜನ ನೀಡಿ, ಬದುಕಿಗೆ ಒಂದು ಭರವಸೆ ನೀಡುತ್ತದೆ. ನಾವಿರುವ ಗುಡಿಸಲನ್ನೇ ಅರಮನೆಯನ್ನಾಗಿಸಿಕೊಳ್ಳುವುದು ನಮ್ಮ ಕೈಯಲ್ಲೇ ಇದೆ. ನಮ್ಮ ಸುತ್ತಲ ಜಗತ್ತಿನಲ್ಲಿ ಇಷ್ಟೊಂದು ಅಶಾಂತಿ, ತಲ್ಲಣ, ಸೆಳೆತಗಳು ಇರುವಾಗ ಬದುಕಿನಲ್ಲಿ ನೆಮ್ಮದಿ, ಶಾಂತಿಗಳನ್ನು ಕಾಣುವುದು ಹೇಗೆ? ಗಂಡ-ಹೆಂಡತಿ, ತಂದೆ-ಮಗ, ಅತ್ತೆ-ಸೊಸೆ, ಅಣ್ಣ-ತಮ್ಮ ಸ್ನೇಹಿತರು, ಬಂಧು-ಮಿತ್ರರು ಹೀಗೆ ಪ್ರತಿಯೊಬ್ಬರೊಂದಿಗೆ ವ್ಯವಹರಿಸುವಾಗಲೂ ಹೊಂದಾಣಿಕೆ ಇರಬೇಕಾಗುತ್ತದೆ. ಜೀವನದಲ್ಲಿ ಮುಖ್ಯವಾಗಿ ಹೊಂದಾಣಿಕೆ ಇಲ್ಲದಿದ್ದರೆ ಬಾಳು ನರಕವಾಗುತ್ತದೆ. ಮೈತ್ರಿ, ಹೊಂದಾಣಿಕೆ ಯಿಂದಲೇ ಬಾಳಿಗೊಂದು ಮೆರುಗು, ಮನಸ್ಸಿಗೆ ಶಾಂತಿ, ನೆಮ್ಮದಿ ಸಾಧ್ಯ. ಗಂಡನ ಕೋಪ, ಹೆಂಡತಿಯ ಅಸಹಕಾರ, ಸ್ನೇಹಿತರ ಕುಹಕದ ಮಾತುಗಳು, ತಂದೆಯ ಗೊಣಗಾಟ ಎಲ್ಲವನ್ನು ಒಂದು ಮಿತಿಯೊಳಗೆ ಸಹನೆಯಿಂದ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ಇದು ಕೆಲವೊಮ್ಮೆ ಕಷ್ಟವಾದರೂ ಅನಿವಾರ್ಯ ಕೂಡ ಹೌದು. ಬದುಕಿನಲ್ಲಿ ಎದುರಾಗುವ ಸುಳಿಗೆ ಸಿಕ್ಕರೆ ಸಮಸ್ಯೆಗಳುಗೊಂದಲವನ್ನುಂಟುಮಾಡುತ್ತವೆ. ಕ್ರಿಯಾಶೀಲ ಬದುಕಿನಿಂದ ವಿಮುಖರಾಗುತ್ತೇವೆ, ಕನಸುಗಳು ಅರಳಲು ಸಾಧ್ಯವಾಗದೆ ಪ್ರತಿಭೆ ಮುರುಟಿಹೋಗುತ್ತದೆ. ಜೀವನ ಒಂದು ಪ್ರವಾಹ, ಅದರಲ್ಲಿ ತೇಲುವುದನ್ನು ರೂಢಿಸಿಕೊಳ್ಳಬೇಕು. ಅಡ್ಡಿ-ಆತಂಕಗಳು ಎದುರಾದಾಗ ನಂಬಿಕೆ ಎಂಬ ಬಲವಾದ ಬಂಡೆಯನ್ನು ಆಶ್ರಯಿಸಿ, ಆತಂಕ ಕಳವಳಗಳನ್ನು ಎದುರಿಸಿ, ಆತ್ಮವಿಶ್ವಾಸದಿಂದ ಮುಂದುವರಿಯಬೇಕು.

ಯುವ ಜನಾಂಗ ತಂತ್ರಜ್ಞಾನದ ಬೆನ್ನು ಹತ್ತಿ ಹೊರಟಿದೆ. ಎಲ್ಲರೂ ಮಾಹಿತಿ ತಂತ್ರಜ್ಞಾನ ಪಂಡಿತರಾದರೆ ಇನ್ನುಳಿದ ಅಧ್ಯಯನ ಶಿಸ್ತುಗಳ ಗತಿ ಏನು ? ನಮ್ಮ ನೆಮ್ಮದಿಯ ಜೀವನಕ್ಕೆ ವಿಜ್ಞಾನಿಗಳು, ಕೈಗಾರಿಕೋದ್ಯಮಿಗಳು, ಉತ್ಪಾದಕರಾದ ಕಾರ್ಮಿಕರು,

ಚರಿತ್ರಕಾರರು, ಕಲಾವಿದರು ಬೇಡವೇ ? ಯಾವುದೇ ವಸ್ತುಗಳನ್ನು ಉತ್ಪಾದನೆ ಮಾಡದ ಬರೀ ಮಾಹಿತಿ ಸಂಗ್ರಹದಿಂದ ೯೫ ಪಾಲು ಜನರ ಹೊಟ್ಟೆ ತುಂಬುವುದು ಸಾಧ್ಯವೇ ? ಈ ಕುರಿತು ನಮ್ಮ ಸಮಾಜ ವಿಜ್ಞಾನಿಗಳು, ನಮ್ಮನ್ನಾಳುವವರು ಚಿಂತನೆ ನಡೆಸಬೇಕಾದ ಕಾಲಘಟ್ಟದಲ್ಲಿದ್ದೇವೆ. ಕನ್ನಡ ಭಾಷೆಯ ಉಳಿವಿಗೆ ಮಾಹಿತಿ ತಂತ್ರಜ್ಞಾನದ ಬಳಕೆ ಸಾಧ್ಯವೇ ? ಜಾಗತೀಕರಣ ಸಂದರ್ಭದಲ್ಲಿ ನಮ್ಮ ಶತಮಾನಗಳ ಹಿಂದಿನ ತಂತ್ರಜ್ಞಾನ, ಯಂತ್ರಗಳು ಉದ್ಯೋಗಗಳು ಅಪ್ರಸ್ತುತವಾಗುತ್ತಿರುವ ಸತ್ಯವನ್ನು ಎದುರಿಸುವ ಪ್ರಯತ್ನ ಮಾಡಿದ್ದೇವೆಯೇ ? ಎಂಬ ಪ್ರಶ್ನೆಯನ್ನು ಹಾಕಿಕೊಂಡು, ನಮ್ಮ ಚಿಂತನೆಗಳ ಮೂಲಕ ಉತ್ತರ ಕಂಡುಕೊಳ್ಳಬೇಕಾಗಿದೆ. ತಂತ್ರಜ್ಞಾನ ಮತ್ತು ಕನ್ನಡ ಭಾಷೆ ಜೊತೆ ಜೊತೆಯಾಗಿ ಹೋಗಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ. ಜಾಗತೀಕರಣದ ಪ್ರಭಾವದಿಂದಾಗಿ ವಿಶ್ವವೇ ಒಂದು ಹಳ್ಳಿ ಎಂಬ ಹುಸಿ ಪ್ರಚಾರ ನಡೆದಿದೆ. ಆಧುನಿಕ ತಂತ್ರಜ್ಞಾನದಿಂದಾಗಿ ಇಂದು ಪ್ರಪಂಚ ಕಿರಿದಾಗಿರಬಹುದು. ಆದರೆ ಮಾನವೀಯ ಸಂಬಂಧಗಳು ಕಿರಿದಾಗುತ್ತಾ ಸಂಕೀರ್ಣವಾಗುತ್ತಿರುವ ಕಟು ವಾಸ್ತವ ನಮ್ಮ ಮುಂದಿದೆ. ಹಿಂದೆ ನಮ್ಮ ಭಾರತದ ಪ್ರತಿಯೊಂದು ಹಳ್ಳಿಯೂ ಒಂದು ವಿಶ್ವವಾಗಿತ್ತು. ಪ್ರತಿಯೊಂದು ಹಳ್ಳಿಯೂ ಸ್ವಯಂ ಪರಿಪೂರ್ಣವಾಗಿ ತನ್ನ ಕಾಲಮೇಲೆ ತಾನು ನಿಂತಿತ್ತು. ಪ್ರತಿಯೊಂದಕ್ಕೂ ಸರ್ಕಾರವನ್ನು ಅವಲಂಬಿಸಿರಲಿಲ್ಲ. ಈಗ ಪರಿಸ್ಥಿತಿ ಏನಾಗಿದೆ ? ಹಳ್ಳಿಯ ರೈತನ ಮನೆ ಮುಂದಿನ ರಸ್ತೆ ಗುಂಡಿ ಮುಚ್ಚಲು, ಚರಂಡಿ ಸರಿಪಡಿಸಲು, ಕುಡಿಯುವ ನೀರು ಒದಗಿಸಲು ಪೇಟೆಯಿಂದ ಇಂಜನಿಯರ್‌ಗಳು, ಗುತ್ತಿಗೆದಾರರು, ಕಾರ್ಮಿಕರು ಬರುವಂತಾಗಿರುವುದು ನಮ್ಮ ಕಾಲಘಟ್ಟದ ವಿಪರ್ಯಾಸ ಎನ್ನಬಹುದು. ಸ್ವಯಂ ಪರಿಪೂರ್ಣ ಹಳ್ಳಿ ಮಹಾತ್ಮ ಗಾಂಧೀಜಿಯವರ ಕನಸಾಗಿತ್ತು. ನಾವೀಗ ಗಾಂಧೀಜಿಯವರ ಕನಸಿನ ವಿರುದ್ಧ ದಿಕ್ಕಿನಲ್ಲಿ ಸಾಗಿದ್ದೇವೆ. ಅಂದರೆ ಸ್ವಯಂ ಸ್ವಾತಂತ್ರ್ಯದಿಂದ ಪರಾವಲಂಬೀ ಜೀವನದತ್ತ ನಮ್ಮ ಪಯಣ ಸಾಗಿದೆ. ಎಲ್ಲೋ ಜೋಗಪ್ಪ ನಿನ್ನರಮನೆ ? ಎಂದರೆ, ವಿಧಾನಸೌಧದತ್ತ ನಮ್ಮ ಮನಸ್ಸು ಕಣ್ಣುಗಳು ಹೊರಳುತ್ತವೆ. ಜಾಗತೀಕರಣ ಎಂಬ ಭೂತಕ್ಕೆ ಸೆಡ್ಡು ಹೊಡೆದು ನಿಲ್ಲುವ, ಈ ದಿಸೆಯಲ್ಲಿ ಎದುರಾಗುವ ಹುನ್ನಾರಗಳನ್ನು ಎದುರಿಸುವ ದಾರಿ ಕಂಡುಕೊಳ್ಳಬೇಕಾಗಿದೆ.

ಜಯದೇವಪ್ಪ ಜೈನಕೇರಿ
೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

## ಗುಬ್ಬಿ ಗೂಡು ಕಟ್ಟುವ ಕಾಲವಿದೆ



ಬಂದೂಕಿನ ಬಾಯಲ್ಲಿ
ಗುಬ್ಬಿಗೂಡು ಕಟ್ಟುವ ಕಾಲ
ದೂರವಿದೆ ಗೆಳೆಯಾ.

ನಿಜ
ಆ ಕಾಲದಲ್ಲಿ ನಮ್ಮ ನಡುವೆ ಗಡಿಗಳಿರುವುದಿಲ್ಲ
ಗುಡಿಗಳಿರುವುದಿಲ್ಲ
ಒಂದು ಸಮತೆಯ ಹಾಡಷ್ಟೇ
ಮೊಳಗುತ್ತಿರುತ್ತದೆ.

ನಿನ್ನೆ ಗುಜರಾತ್ ಹತ್ತಿ ಉರಿದ ಹಾಗೆ
ನಾಳಿನ ಗುಜರಾತ್ ಉರಿಯದು
ಈ ಕಾಶ್ಮೀರ ಅಯೋಧ್ಯ
ಈ ಕಾವೇರಿ ಕೃಷ್ಣ ತುಂಗೆಯರೆಲ್ಲ
ಒಂದು ನಿರುಮ್ಮಳ ಹಗಲಿನಲ್ಲಿ ನಿದ್ರಿಸುತ್ತವೆ.

ಸೂರ್ಯ ಇವರನ್ನು ಸುಡಲಾರ
ಚಂದ್ರ ಹುಣ್ಣಿಮೆಯಾಗಿ ಕಾಡಲಾರ

ನಿನ್ನ ಗುಬ್ಬಚ್ಚಿ ರೆಕ್ಕೆ ಬಡಿದು ಹಾರುವೆಡೆಯಲ್ಲೆಲ್ಲ
ಮರಗಿಡಗಳ ಹಸಿರು ತಂಗಾಳಿ ತೂಗುತ್ತಿರುತ್ತದೆ
ಗೂಡುಗಳು
ನಮ್ಮ ಹೊಲದ ಜೋಳದ ತೆನೆಗಳ ಹಾಗೆ
ಬಾಗಿ ಬೀಗಿ ಕಣ್ಣಿಗೆ ಚಿಲಿಪಿಲಿಯ
ಸೊಬಗು ಮೂಡಿಸಿರುತ್ತವೆ.

ಆಗ ತುಕ್ಕು ಹಿಡಿದ ಬಂದೂಕನ್ನು ಮನುಷ್ಯನೂ ಮುಟ್ಟಲಾರ
ಗುಬ್ಬಚ್ಚಿಗೆ
ನನ್ನ ಮನೆಯೇ ಗೂಡಾಗಿರುತ್ತದೆ.

ಮುಂದೊಂದು ದಿನ
ದೇವರುಗಳು ದೇವರುಗಳಾಗಿಯೇ ಸಾಯುತ್ತವೆ
ಅವನ್ನು ಮನುಷ್ಯರನ್ನಾಗಿಸುವುದು ಬೇಡ.

ಡಾ|| ನಿಂಗಪ್ಪ ಮುದೇನೂರು, ಕನ್ನಡ ಉಪನ್ಯಾಸಕ, ಎಡಿಬಿ ಕಾಲೇಜು, ಹರಪನಹಳ್ಳಿ - ೫೮೩ ೧೩೧, ದಾವಣಗೆರೆ ಜಿಲ್ಲೆ

# ಧೂರ್ತ

ನಮ್ಮ ಗುಂಪಿನಲ್ಲಿ ಆಗ ನಾವು ಏಳು ಜನರು ಇದ್ದೆವು. ಹಾಗೆ ನೋಡಿದರೆ, ನಾವು ಆರು ಜನರೆ ಇದ್ದೆವು ಎಂದರೆ ಇನ್ನೂ ಸೂಕ್ತವಾದೀತೇನೊ. ಯಾಕೆಂದರೆ ಏಳನೆಯವನು ಒಂದರ್ಥದಲ್ಲಿ ಹೆಸರಿಗೆ ಮಾತ್ರ ಇದ್ದಂತಿದ್ದ. 'ತನ್ನದು' ಎನ್ನಬಹುದಾದ ಯಾವುದೇ ತರಹದ ವ್ಯಕ್ತಿತ್ವವನ್ನು ಇಟ್ಟುಕೊಳ್ಳಲಾರದೆ ನಮ್ಮಲ್ಲಿಯೆ ಕರಗಿಹೋಗಿದ್ದ. ನಿಜವಾದ ಅರ್ಥದಲ್ಲಿ ನಮ್ಮ ಹಿಂಬಾಲಕನಾಗಿದ್ದ. ಹಗಲು-ರಾತ್ರಿ ನಾವು ಎಲ್ಲೇ ಹೋದರೂ, ನಾವು ಏನು ಯೋಜನೆಗಳನ್ನು ಹಾಕಿಕೊಂಡರೂ ನೆರಳಿನಂತೆ ನಮ್ಮನ್ನು ಹಿಂಬಾಲಿಸುತ್ತಿದ್ದ. ನಾವು ಆಗಿಂದಾಗ್ಗೆ ನಡೆಸುತ್ತಿದ್ದ ಗಂಭೀರ ಚರ್ಚೆಗಳಲ್ಲಿ ಆತ ಯಾವಾಗಲೂ ಉಪಸ್ಥಿತನಿರುತ್ತಿದ್ದ. ಆದರೆ ತನ್ನದೇ ಆದ ಅಭಿಪ್ರಾಯವೊಂದನ್ನು ವ್ಯಕ್ತಪಡಿಸಿದ್ದು ಎಂದಿಗೂ ಇಲ್ಲ. ಎಷ್ಟೋ ಸಲ ರಾತ್ರಿ ನಿದ್ರೆಗೆಡುತ್ತ ನಮ್ಮೊಂದಿಗೆ ಎಚ್ಚರವಾಗಿರುತ್ತಿದ್ದ. ನಾವು ಏನು ಅಭಿಪ್ರಾಯ ವ್ಯಕ್ತಪಡಿಸಿದರೂ, ಅದರ ಯೋಗ್ಯಾಯೋಗ್ಯತೆಯನ್ನು ಎಂದೂ ಲೆಕ್ಕಕ್ಕೆ ತರದೆ, ಅದನ್ನು ಚಾಚೂ ತಪ್ಪದೆ ಕೊನೆಯ ಶಬ್ದದವರೆಗೂ ಯಾಂತ್ರಿಕವಾಗಿ ಪುನರುಚ್ಚರಿಸುತ್ತಿದ್ದ. ನಾವು "ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಯೋಗ್ಯತೆಯ ಅರಿವಿರಬೇಕು" ಎಂದರೆ ಅವನೂ ಯಾವುದೇ ದೂಸರಾ ವಿಚಾರ ಮಾಡದೆ, "ಹೌದು, ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಯೋಗ್ಯತೆಯ ಅರಿವಿರಬೇಕು" ಎಂದು ಚಾಚೂ ತಪ್ಪದೆ ಒಪ್ಪಿಸಿಬಿಡುತ್ತಿದ್ದ.

ಆದಾಗ್ಯೂ ವಿಶೇಷವೆಂದರೆ ಆತ ಬರಿ 'ಹೌದಪ್ಪ' ಅಷ್ಟೇ ಆಗಿರಲಿಲ್ಲ. ಮೇಲ್ನೋಟಕ್ಕೆ ಆತ ಹಾಗೆ ಕಂಡರೂ, ಆತನ ಒಳಗೆ ಬಹಳ ದಿನಗಳಿಂದ ಪ್ರಯತ್ನಿಕವಾಗಿ ಅದುಮಿಟ್ಟ – ವ್ಯಕ್ತಪಡಿಸಲೂ ಅಸಾಧ್ಯವಾದ ಪರಸ್ಪರ ವಿರೋಧಿ ಭಾವನೆಗಳ ತಾಕಲಾಟ ನಡೆಯುತ್ತಿರುವಂತೆ, ಆತನನ್ನು ಇನ್ನೂ ಹತ್ತಿರದಿಂದ ನೋಡಿದಾಗ ಕೆಲಸಲ ನಮ್ಮ ಗಮನಕ್ಕೆ ಬಾರದೆ ಇರುತ್ತಿರಲಿಲ್ಲ. ಇನ್ನು ಎಷ್ಟೋ ಸಲ ಒಮ್ಮಿಂದೊಮ್ಮೆಲೆ ಆತ ಅಂತರ್ಮುಖಿಯಾಗಿಬಿಡುತ್ತಿದ್ದ. ಯಾರೊಡನೆಯೂ ಒಂದು ಮಾತನ್ನೂ ಆಡದೆ ಮೂಲೆಯೊಂದರಲ್ಲಿ ಗಂಟೆಗಟ್ಟಲೆ ಕುಳಿತುಕೊಂಡು, ಬಾಲ್ಯವಿಡೀ ತನ್ನ ಕೋಮಲಭಾವನೆಗಳನ್ನು ದರ್ಪದಿಂದ ಹತ್ತಿಕ್ಕಿದ್ದ ತಂದೆಯನ್ನೋ, ದುರ್ಬಲಳಾಗಿದ್ದರೂ ಮಾತೃವಾತ್ಸಲ್ಯದಿಂದ ತನ್ನನ್ನು ಯಾವಾಗಲೂ ಸಂತೈಸುತ್ತಿದ್ದ ತಾಯಿಯನ್ನೋ ನೆನಪಿಸಿಕೊಳ್ಳುತ್ತಿದ್ದ.

ಆತನ ಇನ್ನೊಂದು ವಿಶೇಷವೆಂದರೆ, ನೋಡಲು ಅತ್ಯಂತ ಸ್ಫುರದ್ರೂಪಿ ಆಗಿದ್ದ. ನೀಳಕಾಯದ ಆತನ ಗೋಧಿ ಬಣ್ಣದ ಮುಖದ ಮುಖ್ಯ ಆಕರ್ಷಣೆ ಎಂದರೆ ನೇರವಾದ ಮೂಗು, ವಿಶಾಲವಾದ ಹಣೆ ಮತ್ತು ಅದರ ಕೆಳಗಿನ ಆಳವಾದ ಕಣ್ಣುಗಳು. ಈ ಆಳವಾದ ಕಣ್ಣುಗಳು ಏನನ್ನೋ ಬಲವಂತವಾಗಿ ಮುಚ್ಚಿಡುತ್ತಿವೆಯೇನೋ ಎನ್ನುವ ಭಾಸ ಸೂಕ್ಷ್ಮಗ್ರಾಹಿಗಳಿಗೆ ಆಗದೆ ಇರುತ್ತಿರಲಿಲ್ಲ. ಮೇಲ್ನೋಟಕ್ಕೆ ಸೌಮ್ಯಮುಖ ಭಾವವನ್ನು ಪ್ರದರ್ಶಿಸುತ್ತಿದ್ದ ಆ ಕಣ್ಣುಗಳ ಹಿಂದೆ ಧೂರ್ತತನವೂ ಅಡಗಿತ್ತು – ಎಂದರೆ ನೀವು ನಂಬುವಿರಾ? ನಾವೂ ಇದನ್ನು ಎಂದೂ ನಂಬಿರಲಿಲ್ಲ – ನಂಬುವ ಸಾಧ್ಯತೆಯೂ ಇರಲಿಲ್ಲ. ಆದರೆ ನಾವು ಇದನ್ನು ನಂಬಲೇಬೇಕಾದಂತಹ ಘಟನೆಯೊಂದು ಜರುಗಿತು.

ಹೌದು, ಆತ ಧೂರ್ತನಾಗಿದ್ದ; ವಿಶ್ವಾಸಘಾತುಕನಾಗಿದ್ದ. ನಾವು ಲಾಹೋರಿನಲ್ಲಿದ್ದಾಗ, ತೀರಾ ಅನಿರೀಕ್ಷಿತವಾಗಿ ಪೊಲೀಸರು ನಮ್ಮ ವಾಸಸ್ಥಳವನ್ನು ಮುತ್ತಿಗೆ ಹಾಕಿ, ಬ್ರಿಟಿಷ್ ಸರಕಾರದ ವಿರುದ್ಧ ನಾವು ಪಿತೂರಿ ಮಾಡುತ್ತಿದ್ದೇವೆಂಬ ಆರೋಪ ಹೊರಿಸಿದಾಗ, ಆತ ಪೊಲೀಸರಿಗೆ ಎಲ್ಲವನ್ನೂ, ಎಲ್ಲವನ್ನೂ ಹೇಳಿಬಿಟ್ಟ; ಅದೂ ನಮ್ಮ ಮುಂದೆಯೇ! ನಮ್ಮ ನೆರಳು ಎಂದು ಭಾವಿಸಿದ್ದ ಆತ ಹೀಗೆ ನಮ್ಮ ರಹಸ್ಯವನ್ನು ನಮ್ಮ ಮುಂದೆಯೇ ಪೊಲೀಸರಿಗೆ ಬಹಿರಂಗಪಡಿಸಿ, ನಮ್ಮನ್ನು ಸ್ತಂಭೀಭೂತರನ್ನಾಗಿಸಿಬಿಟ್ಟಿದ್ದ. ನಮ್ಮ ಬದುಕಿನ ಮುಂದಿನ ಗತಿಯನ್ನು ಅವನೇ ಒಂದರ್ಥದಲ್ಲಿ ನಿರ್ಧರಿಸಿಬಿಟ್ಟ.

**ಮುಲ್ಕರಾಜ್ ಆನಂದ್**

ಕನ್ನಡಕ್ಕೆ

**ಪ್ರಮೋದ ಮುತಾಲಿಕ**

ಅಂದು ನಡೆದ ಘಟನೆ ನಮ್ಮ ಕಲ್ಪನೆಗೂ ಮೀರಿದುದಾಗಿತ್ತು.

ನಾವೆಲ್ಲಾ ಬೆಳಗಿನ ಜಾವದ ನಿದ್ರೆಯ ಮಂಪರಿನಲ್ಲಿದ್ದಾಗಲೆ ಸುಮಾರು ಇಪ್ಪತ್ತು ಜನ ಪೊಲೀಸರು, ಕಛೇರಿ ರಸ್ತೆಯಲ್ಲಿದ್ದ ನಮ್ಮ ವಾಸಸ್ಥಳವನ್ನು ಮುತ್ತಿದರು. ಒಂದಲ್ಲ ಒಂದು ದಿನ ನಮ್ಮ ಚಟುವಟಿಕೆಗಳು ಸರಕಾರದ ಗಮನಕ್ಕೆ ಬಂದೇ ಬರುತ್ತವೆ – ಅನುಗುಣವಾಗಿ ಪೊಲೀಸರು ನಮ್ಮ ವಾಸಸ್ಥಾನವನ್ನು ಹೇಗೋ ಪತ್ತೆ ಮಾಡಿ ಮುತ್ತಿಗೆ ಹಾಕಲೂಬಹುದೆಂಬುದನ್ನು ಮುಂಚೆಯೆ ಕಲ್ಪಿಸಿಕೊಂಡಿದ್ದ ನಾವು, ಅವರಿಗೆ ನಮ್ಮ ಚಟುವಟಿಕೆಗಳ ಒಂದು ಚೂರು ಪುರಾವೆ ಸಹ ಸಿಗದಂತೆ, ನಮ್ಮ ವಾಸಸ್ಥಾನದಲ್ಲಿ ಯಾವುದೇ ಕರಪತ್ರಗಳನ್ನಾಗಲಿ, ಕಾಗದಪತ್ರಗಳನ್ನಾಗಲಿ ಇಟ್ಟಿರಲಿಲ್ಲ. ಹೀಗಾಗಿ, ಅಂದು ಬೆಳಿಗ್ಗೆ ಪೊಲೀಸರು ನಮ್ಮನ್ನು ಬಡಿದೆಬ್ಬಿಸಿದಾಗ, ಸಹಜವಾಗಿಯೆ ಅವರ ಆ ಕ್ರಮವನ್ನು ಆಕ್ಷೇಪಿಸಿದೆವು. ಅವರ ದರ್ಪದ ಎದುರು ನಮ್ಮ ಆಕ್ಷೇಪಣೆಯ ದನಿ ಸಣ್ಣದಿತ್ತು – ಎನ್ನುವುದು ಬೇರೆ ಮಾತು. ವಾರಂಟು ಇರದೆ ನಮ್ಮ ವಾಸಸ್ಥಾನಕ್ಕೆ ಅವರು ಬಂದ ಔಚಿತ್ಯವನ್ನಂತೂ ನಾವು ಪ್ರಶ್ನಿಸಿದೆವು. ಆದರೆ ಅದೇ ಕ್ಷಣದಲ್ಲಿ ಈ ಗೋಪಾಲ (ಅಂದ ಹಾಗೆ ಆತನ ಹೆಸರು ಗೋಪಾಲ), ಅಲ್ಲಿ ನಡೆಯುತ್ತಿದ್ದ ಎಲ್ಲ ಘಟನೆಗಳಿಂದ ದಿಙ್ಮೂಢನಾದವನಂತೆ ಕಂಡ. ಅವನಿಗೇನನ್ನಿಸಿತೋ ಮರುಕ್ಷಣವೇ ಭ್ರಮಿಷ್ಟನಾದವನ ತರಹ ತನ್ನ ಹಾಸಿಗೆಯಿಂದ ನೆಲಕ್ಕೆ ಜಿಗಿದವನೆ ದೊಂಬರಲಾಗ ಹಾಕಲು ಆರಂಭಿಸಿದ. ಮುಂದಿನ ಕ್ಷಣದಲ್ಲಿಯೆ ಆತನ ಬಾಯಿಯಿಂದ ನೊರೆ ಬರಲಾರಂಭಿಸಿತು. ಹಾವಿನಂತೆ ಭುಸುಗುಡುತ್ತ ವಿಚಿತ್ರವಾದ ಶಬ್ದ ಮಾಡಲಾರಂಭಿಸಿದ; ಆತನ ಆಳವಾದ ಕಣ್ಣುಗಳಿಂದ ನೀರು ಹರಿಯಲಾರಂಭಿಸಿತು. ಪೊಲೀಸರ ಬಿಗಿ ಹಿಡಿತದಿಂದಲೂ ಮೂರ್ನಾಲ್ಕು ಸಲ ತಪ್ಪಿಸಿಕೊಂಡು, ನೆಲದ ಮೇಲೆ ಉರುಳಾಡುತ್ತ ಭುಸುಗುಡುತ್ತಿದ್ದ. ಬಲವಂತವಾಗಿ ಆತನನ್ನು ಹಾಸಿಗೆಯ ಮೇಲೆ ಉರುಳಿಸಿದ ನಂತರವೂ ಅಷ್ಟೆ. ಒಂದೆರಡು ನಿಮಿಷ ಸುಮ್ಮನಿದ್ದನೇನೋ – ಆಮೇಲೆ ಮತ್ತೆ ಹಾಸಿಗೆಯಿಂದ ಜಿಗಿದುಬಿಟ್ಟು ಕುಣಿಯಲಾರಂಭಿಸಿದ. ಕುಣಿದು ಕುಣಿದು ಸುಸ್ತಾದ ಮೇಲೆ ನೆಲಕ್ಕುರುಳಿದ್ದ, ಬಾಯಿಯಿಂದ ಮತ್ತೆ ನೊರೆ



ಸುಪ್ರಸಿದ್ಧ ಸಾಹಿತಿ, ಭಾರತದ ಪುರೋಗಾಮಿ ಸಾಹಿತ್ಯ ಚಳವಳಿಯ ಆದ್ಯ ಪ್ರವರ್ತಕರಲ್ಲೊಬ್ಬರಾದ ಮುಲ್ಕರಾಜ್ ಆನಂದ್ ತಮ್ಮ ೯೯ನೇ ವಯಸ್ಸಿನಲ್ಲಿ ದಿನಾಂಕ ೨೮.೧೦.೨೦೦೪ರಂದು ನಿಧನರಾದರು. ಎಲ್ಲ ಪ್ರಗತಿಪರ, ಜನಪರ ಹೋರಾಟಗಳಿಗೆ ಬೆಂಬಲಿಗರಾಗಿದ್ದ ಅವರು ತಮ್ಮ ಬರಹಗಳ ಮೂಲಕ, ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಪ್ರಜಾಪ್ರಭುತ್ವ ಮತ್ತು ಸಮಾಜವಾದದ ಮುಖ್ಯತ್ವವನ್ನು ಪ್ರಚುರಪಡಿಸುತ್ತಿದ್ದರು. 'ದಿ ಅಂಟಚಬಲ್', 'ಕೂಲಿ', 'ದಿ ಸವೆನ್ ಏಜಸ್ ಆಫ್ ಮ್ಯಾನ್', 'ಸೆವೆನ್ ಸಮ್ಮರ್ಸ್ ಆಂಡ್ ಮಾರ್ನಿಂಗ್ ಫೇಸ್' ಮೊದಲಾದ ಕಾದಂಬರಿಗಳ ಮೂಲಕ ಭಾರತದ ದೀನ ದಲಿತರ ಬದುಕನ್ನು ಹೊರಜಗತ್ತಿಗೆ ಪರಿಚಯಿಸಿದರು. ಅವರ ನಿಧನದಿಂದ ಸಾಹಿತ್ಯಲೋಕಕ್ಕಷ್ಟೇ ಅಲ್ಲದೆ ಪ್ರಗತಿಶೀಲ ಚಳವಳಿಗೂ ತುಂಬಲಾಗದ ನಷ್ಟವಾಗಿದೆ. 'ಹೊಸತು' ಬಳಗ ಈ ಧೀಮಂತ ಸಾಹಿತಿಯ ನೆನಪಿಗೆ ಗೌರವ ಸಲ್ಲಿಸುತ್ತದೆ.

ಬರಲಾರಂಭಿಸಿತು. ಈ ರೂಪದಲ್ಲಿ ಆತನನ್ನು ಹಿಂದೆಂದೂ ನೋಡಿರದಿದ್ದ ನಮಗೆ ಒಂದು ಕ್ಷಣ ಏನು ಮಾಡಬೇಕೆಂಬುದೆ ತೋಚದಂತಾಯ್ತು. ಆತನಿಗೆ ಮೂರ್ಛೆ ರೋಗ ಇದೆಯೇನೋ – ಎಂದು ಅನುಮಾನ ಬರತೊಡಗಿತು. ಎಷ್ಟೋ ವರ್ಷಗಳಿಂದ ತಲೆಯೊಳಗೆ ತುಂಬಿಟ್ಟುಕೊಂಡಿದ್ದ ಏನನ್ನೋ ಝಾಡಿಸಿಕೊಳ್ಳುತ್ತಿದ್ದಾನೇನೋ ಎನ್ನುವಂತೆ, ಮುಂದಿನ ಕ್ಷಣದಲ್ಲಿ ಆತ ತನ್ನ ತಲೆಯನ್ನೊಮ್ಮೆ ಜೋರಾಗಿ ಕೊಡವಿಕೊಂಡ. ಪೊಲೀಸರು ಆತನನ್ನು ಇನ್ನೊಮ್ಮೆ ಬಲವಂತವಾಗಿ ಹಾಸಿಗೆಯ ಮೇಲೆ ಕುಕ್ಕರಿಸಿದ ನಂತರ ಆತನ ವರ್ತನೆ ಪೂರ್ತಿಯಾಗಿ ಬದಲಾಗಿಬಿಟ್ಟಿತು. ಇಲ್ಲಿಯವರೆಗಿನ ತನ್ನ ವರ್ತನೆಯ ಚೂರೂ ಅರಿವಿರದವನಂತೆ, ತಾನು ಹಾಗೆ ವರ್ತಿಸಿದುದರ ನೆನಪೇ ಇರದವನಂತೆ, ಪೊಲೀಸರ ಮುಂದೆ ಅತ್ಯಂತ ವಿಧೇಯನಾಗಿ, ತಪ್ಪೊಪ್ಪಿಗೆಯ ಮಾತುಗಳನ್ನು ಆಡಲಾರಂಭಿಸಿದ. ತನ್ನನ್ನು ಕ್ಷಮಿಸಬೇಕೆಂದು ಅವರನ್ನು ಬೇಡಿಕೊಳ್ಳುತ್ತ ಆತನಾಡಿದ ಕೆಲಮಾತುಗಳು, ಪೊಲೀಸರಿಗೆ ನಮ್ಮ ವಿರುದ್ಧದ ಅತ್ಯಂತ ವಿಶ್ವಾಸಾರ್ಹ ಮಾಹಿತಿಯಾದವು.

ನಮ್ಮೆಡೆಗೆ ತಿರುಗುತ್ತ ಆತ,

''ಏನಪ್ಪ – ತುಂಬ ಚೆನ್ನಾಗಿ ಹೊಂಚು ಹಾಕುತ್ತಿದ್ದೀರಾ. ಆದರೆ 'ನಮ್ಮ' ಸರಕಾರದ ವಿರುದ್ಧದ ನಿಮ್ಮ ಇಂಥ ದ್ರೋಹಿ ಹೊಂಚುಗಳ ಪರಿಣಾಮವಾದರೂ ಏನಾದೀತು – ಎಂಬುದರ ಕಲ್ಪನೆಯಾದರೂ ನಿಮಗೆ ಎಂದಾದರೂ ಇತ್ತೆ ? … ಏನು – ನೀವು ಅದೇನೋ ಯಾವಾಗಲೂ ಹೇಳುತ್ತಲೆ ಇರುತ್ತೀರಲ್ಲ – 'ಸ್ವಾಯತ್ತತೆ-ಸ್ವಾತಂತ್ರ್ಯ'. ಇಷ್ಟಕ್ಕಾಗಿ ಸರಕಾರದ ವಿರುದ್ಧ ಇವೆಲ್ಲ ಹೊಂಚುಗಳೆ ?'' ನೇರವಾಗಿ ನಮ್ಮನ್ನು ಕೇಳಿದ. ಇಷ್ಟು ದಿನಗಳ ಒಡನಾಟದಲ್ಲಿ ನಮ್ಮದಲ್ಲದ ಮಾತನ್ನು ಆತ ಮೊತ್ತ ಮೊದಲಬಾರಿಗೆ ಆಡಿದ್ದ.

''ಬಾಯ್ಮುಚ್ಚು – ಎಂಥ ಕೆಲಸ ಮಾಡುತ್ತಿದ್ದೀಯಾ ?'' ಎಂದು ನಾವನ್ನಲು, ಅದನ್ನಾತ ಲಕ್ಷಿಸದೆ ತನ್ನ ಮಾತನ್ನೇ ಮುಂದುವರೆಸಿದ.

''ಅಯ್ಯೋ ಮೂರ್ಖರಾ, ನನ್ನ ಬಗ್ಗೆ ನೀವೇನು ಅಂದುಕೊಂಡಿದ್ದೀರಿ ? ನಿಮ್ಮೊಂದಿಗೆ ಇದ್ದು – ನಿಮ್ಮ ಮಾತುಗಳನ್ನು ಪುನರುಚ್ಚರಿಸುವ ನಿಷ್ಪ್ರಯೋಜಕ ನಾನು ಅಂದುಕೊಂಡಿರಾ ? ಇಲ್ಲಿ ನೋಡಿ – ಇಲ್ಲಿಯವರೆಗಿನ ನನ್ನದಲ್ಲದ ಬದುಕನ್ನು ಬದುಕಿ ನನಗೂ ಸಾಕಾಗಿ ಹೋಗಿದೆ. ನನ್ನಿಂದ ಇನ್ನು ನಿಮ್ಮನ್ನು ಸಹಿಸಿಕೊಳ್ಳಲಾಗದು. 'ನಮ್ಮ' ಸರಕಾರದ ವಿರುದ್ಧ ನೀವು ಯೋಜಿಸುತ್ತಲೇ ಇರುವ ಈ ಬಂಡು ಚಟುವಟಿಕೆಗಳನ್ನು ಇನ್ನು ಮುಂದೆ ನನ್ನಿಂದ ಕೇಳುವುದೂ ಆಗದು, ನೋಡುವುದೂ ಆಗದು. ಇಂದು ನಾನು ಎಲ್ಲವನ್ನೂ ಚಾಚೂ ತಪ್ಪದೆ ಹೇಳಿಬಿಡುತ್ತೇನೆ… ನಿಜವಾದ ಹೇಡಿಗಳು ನೀವು. ರಕ್ತ, ರಕ್ತ ಎನ್ನುತ್ತ ಯಾವಾಗಲೂ ದಂಗೆ, ಬಂಡಾಯದ ಗುಂಗಿನಲ್ಲೇ ಇರುತ್ತೀರಾ. 'ನಮ್ಮ' ಸರಕಾರವನ್ನು ಕಿತ್ತೆಸೆಯಬೇಕು – ದಂಗೆ ಮಾಡಿಸಬೇಕು – ಹೀಗೇ ಯಾವಾಗಲೂ ಹೊಂಚುಗಳನ್ನು ಹಾಕುತ್ತಲೇ ಇರುತ್ತೀರಾ…'' ಎಂದು ಬಡಬಡನೆ ಮಾತನಾಡಿದ.

ಆ ಅನಿರೀಕ್ಷಿತ ಕ್ಷಣದಲ್ಲಿ ನಮಗೆ ಯಾವ ರೀತಿಯಾಗಿ ಪ್ರತಿಕ್ರಿಯಿಸಬೇಕೆಂದು ಗೊತ್ತಾಗದೆ, ಆತನನ್ನು ಕುರಿತು,

''ನಿನಗೆ ತಲೆ ಸರಿ ಇಲ್ಲ…'' ಎಂದಿಷ್ಟೆ ಹೇಳಿ ಸುಮ್ಮನಾದೆವು. ಆತನು ನಮ್ಮ ರಹಸ್ಯವನ್ನೆಲ್ಲ ನಮ್ಮ ಮುಂದೆಯೇ – ಯಾವ ಹೆದರಿಕೆಯೂ ಇರದೆ ಪೊಲೀಸರಿಗೆ ಹೇಳುವುದನ್ನು ಕೇಳುತ್ತ ಕುಳಿತೆವು.

ಅದಕ್ಕನುಗುಣವಾಗಿ ನಮ್ಮ ವಿರುದ್ಧ ಸುದೀರ್ಘವಾದ ವಿಚಾರಣೆ ಆಯ್ತು. ವಿಚಾರಣೆಯ ಸಮಯದಲ್ಲೂ ಗೋಪಾಲ ಅವರಿಗೆ ಉಪಯುಕ್ತವಾದ ಮಾಹಿತಿಯನ್ನು ನೀಡುತ್ತಲೇ ಹೋದ. ವಿಚಾರಣೆಯೆಲ್ಲ ಆದಮೇಲೆ ನಮಗೆಲ್ಲ (ಆರೂ ಜನರಿಗೆ) ಕಠಿಣವಾದ ಸಜೆಯಾಯ್ತು. ಪುಣ್ಯವಶಾತ್ ನಮ್ಮ ಚಟುವಟಿಕೆಗಳ ನಿಶ್ಚಿತವಾದ ಪುರಾವೆ ಪೊಲೀಸರಿಗೆ ಸಿಕ್ಕಿರಲಿಲ್ಲ. ಆದರೂ ಗೋಪಾಲನಂತಹ 'ಒಡನಾಡಿ'ಯ ನಿಖರವಾದ ಹೇಳಿಕೆಯ ಆಧಾರದ ಮೇಲೆ ನಮಗೆಲ್ಲ ಹತ್ತು ವರ್ಷದ ಸಜೆಯಾಯ್ತು. ಯಾವ ಹಿಂಸಾತ್ಮಕ ಚಟುವಟಿಕೆ ಮಾಡದಿದ್ದರೂ ಅದಕ್ಕೆ ಪೂರ್ವಭಾವಿಯಾಗಿ ಒಂದು ವರ್ಷದಿಂದ ಕಛೇರಿಗಲ್ಲಿಯ ಮನೆಯಲ್ಲಿ ತಯ್ಯಾರಿ ನಡೆಸಲಾಗುತ್ತಿತ್ತು – ಎಂಬ ಆರೋಪವನ್ನು ನಮ್ಮ ಮೇಲೆ ಹೊರಿಸಲಾಗಿತ್ತು.

ಇಷ್ಟು ಕಠಿಣವಾದ ಶಿಕ್ಷೆಯನ್ನು ನಾವು ನಿರೀಕ್ಷಿಸಿರಲಿಲ್ಲ; ಅನಿರೀಕ್ಷಿತ ಆಘಾತದಿಂದ ತತ್ತರಿಸಿದ್ದ ನಾವು ಮರುಮಾತಿಲ್ಲದೆ ಮೌನವಾಗಿ ಶಿಕ್ಷೆಯನ್ನು ಸ್ವೀಕರಿಸಿದೆವು. ನಮ್ಮ ಬಂಧನದ ಸಮಯದಲ್ಲಿ ಗೋಪಾಲ ಅಲ್ಲಿಯೆ ನಿಂತಿದ್ದ. ಮುಂಚಿನ ತರಹ ಭ್ರಮಿಷ್ಟನಂತೆ ಜಿಗಿಯುವುದನ್ನಾಗಲಿ, ಕಣ್ಣೀರು ಸುರಿಸುವುದನ್ನಾಗಲಿ ಆತ ಮಾಡಲಿಲ್ಲ. ಮೊಟ್ಟ ಮೊದಲ ಬಾರಿಗೆ ಆತನ ಮುಖ ಅತ್ಯಂತ ಪ್ರಶಾಂತವಾಗಿ ಕಂಡಿತು. ಪ್ರಯತ್ನಿಕವಾಗಿ ಅದುಮಿಟ್ಟ ಎಲ್ಲ ಭಾವನೆಗಳೂ ಪೂರ್ತಿಯಾಗಿ ಅಭಿವ್ಯಕ್ತಗೊಂಡಾಗ ಆಗುವ ಸಮಾಧಾನ ಆತನ ಮುಖದ ಮೇಲೆ ವ್ಯಕ್ತವಾಗುತ್ತಿತ್ತು.

ನಾವು ಆರೂ ಜನ ಅನಿವಾರ್ಯವಾಗಿ ಇನ್ನು ಬೇರೆಯಾಗಬೇಕಿತ್ತು. ಸುರಕ್ಷತೆಯ ದೃಷ್ಟಿಯಿಂದ ನಮ್ಮನ್ನೆಲ್ಲ ಬೇರೆ ಬೇರೆ ಜೈಲುಗಳಿಗೆ ಕಳಿಸುವ ನಿರ್ಧಾರವಾಗಿತ್ತು. ಹತ್ತು ವರ್ಷಗಳಷ್ಟು ಸುದೀರ್ಘ ಅವಧಿಯ ನಂತರ ನಾವು ಜೀವಂತವಾಗಿ ಒಬ್ಬರನ್ನೊಬ್ಬರು ಸಂಧಿಸುವ ಕುರಿತು ನಮಗೆಲ್ಲ ಅನುಮಾನಗಳಿದ್ದವು. ಹೀಗಾಗಿ, ಸಹಜವಾಗಿಯೇ ನಾವೆಲ್ಲ ತುಂಬ ಭಾವುಕರಾಗಿದ್ದೆವು. ಆಗ ಆತನು ನಾವಿದ್ದಲ್ಲಿಗೆ ಬಂದು, ನೆಲಕ್ಕೆ ಕುಸಿದವನೆ, ಮಣ್ಣನ್ನು ತನ್ನ ಹಣೆಗೆ ಸವರಿಕೊಂಡು ನಮ್ಮ ಕಾಲ ಮೇಲೆ ತನ್ನ ಹಣೆಯನ್ನು ಮುಟ್ಟಿಸಿ , ಅತ್ಯಂತ ಮೃದುವಾದ ದನಿಯಲ್ಲಿ,

''ನನ್ನನ್ನು … ದಯವಿಟ್ಟು ಕ್ಷಮಿಸಿ'' ಎಂದು ಅಂಗಲಾಚಿದ.

ನಾವು ಆತನನ್ನು ಮೇಲಕ್ಕೆತ್ತಿ,

''ಕ್ಷಮಿಸಲು ಏನು ಉಳಿದಿದೆ ?'' ಎಂದು ಕೇಳಲು, ಆತ ಈ ಹಿಂದೆ ಮಾಡುತ್ತಿದ್ದಂತೆ, ''ಕ್ಷಮಿಸಲು ಏನು ಉಳಿದಿದೆ ?'' ಎಂಬ ನಮ್ಮ ಮಾತನ್ನೇ ಪುನರುಚ್ಚರಿಸಿದ.

**ಪ್ರಮೋದ ಮುತಾಲಿಕ**
ಇಂಗ್ಲಿಷ್ ವಿಭಾಗ, ನ್ಯಾಷನಲ್ ಕಾಲೇಜು, ಬಸವನಗುಡಿ, ಬೆಂಗಳೂರು - ೫೬೦ ೦೦೪

---

*೫ನೇ ಪುಟದಿಂದ*

ಸಾಂಸ್ಕೃತಿಕ ಸ್ವರೂಪವನ್ನು ಇಂದಿನ ಬಂಡವಾಳಶಾಹಿ ಆಡಳಿತ ವರ್ಗವು ಉದಾರೀಕರಣ ನೀತಿಯಿಂದಾಗಿ ನಮ್ಮ ವ್ಯವಸ್ಥೆಯಲ್ಲಿ ಮತ್ತಷ್ಟು ಆಳವಾಗಿ ಬೇರೂರಿಸಿಬಿಟ್ಟಿದೆ ಎಂದೆನಿಸುತ್ತದೆ. ಅದರ ಮುಂದುವರಿಕೆಗೆ ಮನಮೋಹನರ ಅಥವಾ ಜಸವಂತಸಿಂಗರ ಮುಂದುವರಿಕೆಯೇನೂ ಅಗತ್ಯವಿಲ್ಲ. ಈ ಪ್ರವೃತ್ತಿಯ ವಿರುದ್ಧ ರಾಜಕೀಯ ಸಂಘರ್ಷವಾಗಬೇಕಾಗಿದೆ. ಕೇವಲ ಸರ್ಕಾರಗಳ ಬದಲಾವಣೆಯಿಂದ ಏನೂ ಆಗದು. ಅರ್ಜುನಸಿಂಗರು ಶಿಕ್ಷಣ ಕ್ಷೇತ್ರದಲ್ಲಿ ಕೋಮುವಾದದ ವಿರುದ್ಧ ನಿಶ್ಚಲವಾದ ಛಲ ಉಳ್ಳವರಾಗಿದ್ದಾರೆ, ನಿಜ. ಆದರೆ ಅವರಿಗೆ ಅಲ್ಲಿನ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿರಬೇಕಾದ ಮುನ್ನೋಟ ಇಲ್ಲವೇನೋ ಎಂಬ ಸಂಶಯ ಮೂಡಿಬರುತ್ತದೆ. ಆ ಇಲಾಖೆಯಲ್ಲಿ ಸಂಭವಿಸಿರುವ ಎಲ್ಲ ಅನೈತಿಕ ಕ್ರಮಗಳನ್ನೂ ಸರಿಪಡಿಸುವ ದೃಷ್ಟಿಯಲ್ಲಿ ಅವರೊಡನೆ ಸಹಕರಿಸಲು ಮುಂದೆಬಂದ ಹಲವಾರು ತಜ್ಞರು ಭ್ರಮನಿರಸನರಾಗಿ ಈಗಾಗಲೇ ಸಮಿತಿಗಳಿಂದ ಹೊರಬಂದಿರುವ ಸುದ್ದಿ ಬಂದಿದೆ. ಸಂವಿಧಾನಾತ್ಮಕವಾಗಿ ಶಿಕ್ಷಣವು ಕೇಂದ್ರ ಮತ್ತು ರಾಜ್ಯ ಎರಡಕ್ಕೂ ಸಂಬಂಧಪಟ್ಟ ವಿಷಯವೆಂದು ಕೇಂದ್ರದಲ್ಲೂ ರಾಜ್ಯದಲ್ಲೂ ಒಂದೇ ಪಕ್ಷದ ಸರ್ಕಾರವಿರುವ ಅವಕಾಶವನ್ನು ಉಪಯೋಗಿಸಿಕೊಂಡು, ಈ ಕುರಿತ ಪ್ರಾಥಮಿಕ ಹಂತದ ಪಠ್ಯಪುಸ್ತಕಗಳಲ್ಲೂ ಪ್ರಾದೇಶಿಕ ವೈವಿಧ್ಯತೆಯ ಸೊಗಡನ್ನು ಪುರಸ್ಕರಿಸಲಾಗಿದೆ. ಏಕಮುಖೀ ಸಂಸ್ಕೃತಿಯ ಅಂಶಗಳನ್ನು ನಮ್ಮ ರಾಜ್ಯದ ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಪುಸ್ತಕಗಳಲ್ಲಿ ನುಸುಳಿಸಲಾಗುತ್ತಿದೆಯೆಂದು ಇಲ್ಲಿನ ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಇದು ಆರೋಗ್ಯಕರ ಬೆಳವಣಿಗೆಯಲ್ಲ. ಇತರೆ ಹಲವು ಕ್ಷೇತ್ರಗಳಲ್ಲಿ ಹೀಗೆಯೇ ಆಗುತ್ತಿರುವುದು, ಅದು ಭಾಜಪ ಅಧಿಕಾರದಲ್ಲಿರದಿದ್ದರೂ, ಅದಕ್ಕೆ ಶಾಮೀಲಾಗಿರುವ ಅಧಿಕಾರಶಾಹಿಯಿಂದ. ಇದು ಕೋಮು ಆಧಾರಿತ ನೀತಿಗಳು ಮುಂದುವರಿಯುತ್ತಿರುವುದಕ್ಕೆ ನಿದರ್ಶನವಾಗಿದೆ.

ರಾಜಕೀಯ ದೃಷ್ಟಿಯಲ್ಲಿ ನೋಡುವುದಾದರೆ, ಯುಪಿಎ ಸರ್ಕಾರ ಬಂತೆಂದೋ, ಕನಿಷ್ಠ ಸಾಮಾನ್ಯ ಕಾರ್ಯಕ್ರಮವಿದೆಯೆಂದೋ ಪ್ರಗತಿಪರ ಶಕ್ತಿಗಳು ಕೈಕಟ್ಟಿಕೊಂಡು ಕೂರುವುದು ಸರಿಯೆನಿಸದು. ಸೈದ್ಧಾಂತಿಕ ಹಾಗೂ ರಾಜಕೀಯ ಹೋರಾಟಗಳು ಬರಲಿರುವ ದಿನಗಳಲ್ಲಿ ಇನ್ನೂ ಹೆಚ್ಚು ತೀವ್ರವಾಗುವ ಎಲ್ಲ ಸೂಚನೆಗಳೂ ಇವೆ. ಪ್ರಭಾವಿ ಸಾಮೂಹಿಕ ಹೋರಾಟಗಳಿಂದ ಇಂದಿನ ರಾಜಕೀಯ ಆಗುಹೋಗುಗಳ ಮೇಲೆ ಒತ್ತಡ ತಂದು ಅವು ಸಾಗುವ ದಿಕ್ಕನ್ನು ಕೂಡಲೇ ಬದಲಾಯಿಸಬೇಕಾದ ಅಗತ್ಯತೆಯನ್ನು ಎಲ್ಲ ಪ್ರಗತಿಪರ ಶಕ್ತಿಗಳೂ ಮನಗಾಣಬೇಕಾಗಿದೆ.

**- ಕೆ. ಎಸ್. ಪಾರ್ಥಸಾರಥಿ**



# ತೇಜಸ್ವಿಯವರ ಹಾರಾಡುವ ಹಾಡುಗಳು





ಸಾಹಿತ್ಯ, ಚಿತ್ರಕಲೆ, ಸಂಗೀತ, ಫೋಟೋಗ್ರಫಿ, ಸಹಜಕೃಷಿ, ಕೀಟಶಾಸ್ತ್ರ, ಮಾನವಶಾಸ್ತ್ರ ಹೀಗೆ ಹಲವಾರು ವೈವಿಧ್ಯಮಯ ಕ್ಷೇತ್ರದಲ್ಲಿ ತನ್ನ ಹೆಜ್ಜೆ ಗುರುತುಗಳನ್ನು ಮೂಡಿಸಿರುವ ಪ್ರತಿಭೆ ಕೆ. ಪಿ. ಪೂರ್ಣಚಂದ್ರ ತೇಜಸ್ವಿ.

ತೇಜಸ್ವಿಯವರನ್ನು ಸಾಹಿತಿಯಾಗಿ ಮಾತ್ರ ಕಂಡಿದ್ದವರು ಅವರ ಇನ್ನೊಂದು ಮುಖವನ್ನು ನೋಡಲು ಇತ್ತೀಚೆಗಷ್ಟೆ ಬೆಂಗಳೂರಿನ ಚಿತ್ರಕಲಾಪರಿಷತ್ತಿನಲ್ಲಿ ನಡೆದ ಅವರ ಹಕ್ಕಿಗಳ ಛಾಯಾಚಿತ್ರ ಪ್ರದರ್ಶನ ನೋಡಬೇಕಿತ್ತು. ಅದೊಂದು ಬೆರಗಿನ ಲೋಕವೇ ಸರಿ.



ತೇಜಸ್ವಿಯವರು ಐವತ್ತಕ್ಕೂ ಮೇಲ್ಪಟ್ಟು ಹಕ್ಕಿಗಳ ಬದುಕಿನ ವಿವಿಧ ಕ್ಷಣಗಳನ್ನು ಚಿತ್ರಿಸಿದ್ದಾರೆ. ಹೀಗೆ ತೇಜಸ್ವಿಯವರು ಸೆರೆಹಿಡಿದಿರುವ ಚಿತ್ರಗಳು ಸಹ ಅವರ ಸಾಹಿತ್ಯ ಕೃತಿಗಳಂತೆ ಸರಳ - ಸುಂದರ - ಸ್ಪಷ್ಟ.

ತೇಜಸ್ವಿಯವರು ಸೆರೆಹಿಡಿದ ಹಕ್ಕಿಗಳು, ನಾಡಿನ ಮಕ್ಕಳ ಕಣ್ಣಿಗೆ ಬಿದ್ದರೆ ಹಕ್ಕಿಗಳ ಬದುಕಿನ ಬಗ್ಗೆ ಅವರಲ್ಲಿ ಒಂದಷ್ಟು ಕುತೂಹಲವನ್ನು ಹುಟ್ಟುಹಾಕ ಬಹುದಲ್ಲವೇ ? ಸಾರ್ವಜನಿಕ ಶಿಕ್ಷಣ ಇಲಾಖೆ ಈ ದಿಶೆಯಲ್ಲಿ ಯೋಚಿಸಿದರೆ ತೇಜಸ್ವಿಯವರ ಈ 'ಹಾರಾಡುವ ಹಾಡುಗಳು' ಮಕ್ಕಳ 'ಹಾಡುಗಳಾಗುತ್ತವೆ'.

ಚಿತ್ರ, ನಕಲು - ಬರಹ
ವಿಶ್ವನಾಥ ಎಲ್. ವೇಮಗಲ್
ವೇಮಗಲ್ ೫೬೩ ೧೫೭, ಕೋಲಾರ (ತಾಲ್ಲೂಕು - ಜಿಲ್ಲೆ)





# ಪುಸ್ತಕ ಲೋಕಕ್ಕೆ ನವಕರ್ನಾಟಕ



## ಬಿಡುವಿನ ವೇಳೆಯ ಸದುಪಯೋಗ ಹೇಗೆ ?

*ಕಮಲಾ ರಾಮಸ್ವಾಮಿ*

ನಾವು ಸಾಕಷ್ಟು ಸಮಯ ಪೋಲು ಮಾಡಿದರೂ 'ಅಯ್ಯೋ! ಟೈಂ ಎಲ್ಲಿದೆ ಮಾರಾಯ' ಅಂಥ ಬಡಬಡಿಸುತ್ತೇವೆ. ಸಿಕ್ಕ ಸಮಯವನ್ನು ಸಮರ್ಥವಾಗಿ, ಸೃಜನಾತ್ಮಕವಾಗಿ ಬಳಸಿಕೊಳ್ಳುವ ಮನೋಭಾವವಿದ್ದಲ್ಲಿ ಪ್ರತಿಕ್ಷಣ ಕೂಡ ಅಮೂಲ್ಯವಾದುದೆ. ಬಿಡುವಿನ ವೇಳೆಯಲ್ಲಿ ಕಾಲಹರಣ ಮಾಡುವ ಬದಲು ಈ ಪುಸ್ತಕ ಓದಿ ಸದುಪಯೋಗ ಪಡೆದುಕೊಳ್ಳಿ.

## ಕಾಲೇಜು ವಿದ್ಯಾರ್ಥಿನಿಯರ ವ್ಯಕ್ತಿತ್ವ ವಿಕಾಸ ಹೇಗೆ ?

*ಡಾ|| ಪಿ. ಎಸ್. ಗೀತಾ*

ಕಾಲೇಜು ಅಂದಕೂಡಲೆ ಅಲ್ಲೊಂದು 'ಜೋಶ್' ಕಂಡುಬರುತ್ತದೆ. ಓದು, ಆತ್ಮೀಯರ ಒಡನಾಟ, ತುಂಟಾಟ ಅಲ್ಲಿ ಸಹಜ. ಈ ನಡುವೆ ವಿದ್ಯಾರ್ಥಿಗಳ ವ್ಯಕ್ತಿತ್ವ ಅಲ್ಲೆಲ್ಲಿಯೋ ಕಳೆದುಹೋಗಬಾರದು. ತಮ್ಮ ಬದುಕನ್ನು ಸುಂದರವಾಗಿ ರೂಪಿಸಿಕೊಳ್ಳಲು ಅವರು ಚಿಂತಿಸಬೇಕು. ಆ ಚಿಂತನೆಗೆ ಒತ್ತಾಸೆಯಾಗಿ ನಿಲ್ಲಬೇಕಾದವರು ಹೆತ್ತವರು ಮತ್ತು ಅಧ್ಯಾಪಕರು. ಇವರು ಮಕ್ಕಳ ಬಗ್ಗೆ ಸಹಾನುಭೂತಿಯಿಂದ ವರ್ತಿಸುವುದು ಅಗತ್ಯವಾಗುತ್ತದೆ. ಆ ದಿಸೆಯಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ.





## ಅನ್ಯೋನ್ಯ ದಾಂಪತ್ಯ ಹೇಗೆ ?

*ಸಿ. ಆರ್. ಚಂದ್ರಶೇಖರ್*

ಗಂಡ-ಹೆಂಡತಿ ಪರಸ್ಪರ ಹೊಂದಿಕೊಂಡು ಪ್ರೀತಿ-ವಿಶ್ವಾಸದಿಂದ ಬಾಳಲು ಕಲಿಯಬೇಕು. ಇಲ್ಲದಿರೆ ದಾಂಪತ್ಯ ಸೂತ್ರ ಕಳೆದ ಗಾಳಿಪಟವಾಗುತ್ತದೆ. ಅಲ್ಲಿ ಯಾರಿಗೂ ನೆಮ್ಮದಿಯಿರುವುದಿಲ್ಲ. ದಾಂಪತ್ಯವನ್ನು ಅನ್ಯೋನ್ಯವಾಗಿಸಿ, ಪರಸ್ಪರ ಸಾಮರಸ್ಯದಿಂದ ಬಾಳುವುದು ಹೇಗೆ? ಸಾಮರಸ್ಯಕ್ಕೆ ಕುಂದುಂಟಾಗುವ ಸಂದರ್ಭ ಬಂದಾಗ ಏನು ಮಾಡಬೇಕು ? ಸಮಸ್ಯೆಗಳನ್ನು ಯಾರಲ್ಲಿ ಹೇಳಿಕೊಂಡು ಪರಿಹಾರಕ್ಕೆ ಪ್ರಯತ್ನಿಸಬೇಕು ? ಈ ಪುಸ್ತಕ ಓದಿ ತಿಳಿಯಿರಿ.

## ಮನಸ್ಸೇ ನೀ ಪ್ರಶಾಂತವಾಗಿರು

*ಡಾ|| ಸಿ. ಆರ್. ಚಂದ್ರಶೇಖರ್*

ಮನಸ್ಸು ತಿಳಿಯಾದ ಪ್ರಶಾಂತ ಕೊಳದ ಹಾಗಿರಬೇಕು. ಅಲ್ಲಿ ಪುಟ್ಟದೊಂದು ಕಲ್ಲು ಬಿದ್ದರೂ ಅದು ಕದಡಿ ಬಗ್ಗಡವಾಗುತ್ತದೆ. ಮನಸ್ಸು ಗೊಂದಲದ ಗೂಡಾಗುತ್ತದೆ. ಹಾಗಾದರೆ ಇಂದಿನ ಈ ಗಡಿಬಿಡಿಯ ಜೀವನದಲ್ಲಿ ಮನಸ್ಸು ಪ್ರಶಾಂತವಾಗಿರಲು ಏನು ಮಾಡಬೇಕು ? ಏನಾದರೂ ಸರಳ ಕ್ರಮಗಳಿವೆಯೇ ? ಅವು ಯಾವುವು ಎಂಬುದನ್ನು ಕುರಿತ ಪುಸ್ತಕ ಇದು.





## ನಮ್ಮ ಆಹಾರ ಹೇಗಿರಬೇಕು ?

*ನಾ. ಸೋಮೇಶ್ವರ*

'ಊಟ ಬಲ್ಲವನಿಗೆ ರೋಗವಿಲ್ಲ' ಅನ್ನುವ ಮಾತಿದೆ. ಆರೋಗ್ಯವಂತರಾಗಿರಲು ಉತ್ತಮ, ಹಿತಮಿತ ಆಹಾರ ಸೇವನೆ ಅಗತ್ಯ. ಯಾವುದನ್ನು ತಿನ್ನಬೇಕು ? ಯಾವುದನ್ನು ಬಿಡಬೇಕು ಎನ್ನುವ ಪರಿಜ್ಞಾನವಿಲ್ಲದಿದ್ದರೆ, ಸಿಕ್ಕಿದ್ದನ್ನು ಮುಕ್ಕಿದರೆ ದೇಹ ರೋಗದ ಗೂಡಾಗುತ್ತದೆ. ಹಾಗಾದರೆ ನಮ್ಮ ಆಹಾರ ಹೇಗಿರಬೇಕು ? ಸೇವನೆಯ ಮಧ್ಯೆ ಇರಬೇಕಾದ ಕಾಲದ ಅಂತರ ಎಷ್ಟು? ಸಮತೂಕದ ಆಹಾರವೆಂದರೇನು ? ಯಾವ ಆಹಾರ ನಮಗೆ ಒಳ್ಳೆಯದು ? ಓದಿ ನೋಡಿ.

## ನೀವು ಚೆನ್ನಾಗಿ ಆಲೋಚಿಸಬಲ್ಲಿರಾ ?

*ಜಾನಕಿ ಸುಂದರೇಶ್*

ಪ್ರತಿಯೊಂದು ಮನಸ್ಸು ಸಕಾರಾತ್ಮಕವಾಗಿ, ಸೃಜನಶೀಲವಾಗಿ ಆಲೋಚಿಸಲು ಕಲಿಯಬೇಕು. ಇದರಿಂದ ಜೀವನ, ಸಮಾಜ ಮತ್ತಷ್ಟು ಸಹ್ಯವಾಗಿ ಹೊಸ ಆವಿಷ್ಕಾರಗಳಿಗೆ ನಾಂದಿಯಾಗುತ್ತದೆ. ಇಂತಹ ಆರೋಗ್ಯಪೂರ್ಣ ಆಲೋಚನೆಗಳು ಯಾವುವು ? ನಕಾರಾತ್ಮಕ ಆಲೋಚನೆಗಳ ನಿವಾರಣೆ ಹೇಗೆ ? ಚೆನ್ನಾಗಿ ಆಲೋಚಿಸಲು ಬಯಸುತ್ತೀರಾ ? ಈ ಕೃತಿ ಓದಿ.



ಈ ವರ್ಷಾಂತ್ಯದಲ್ಲಿ ಓದುಗಲೋಕಕ್ಕೆ ಅರ್ಪಣೆ !

*ಆಯಾ ಕ್ಷೇತ್ರಗಳಲ್ಲಿ ಅನುಭವಿಗಳಾದ, ಸಮರ್ಥ ಲೇಖಕರು ರಚಿಸಿರುವ 12 ಕೃತಿಗಳು – ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ.*

ತಲಾ ರೂ. 40 ಬೆಲೆಯ,
ರೂ. 480 ಮೌಲ್ಯದ ಪುಸ್ತಕಗಳು
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 350ಕ್ಕೆ ಲಭ್ಯ !

ಅನಾವರಣ ದಿನಾಂಕದ ನಂತರ ಈ ರಿಯಾಯಿತಿ ಲಭ್ಯವಿಲ್ಲ

ವ್ಯಕ್ತಿ ವಿಕಸನ ಮಾಲ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

# ಪ್ರಕಾಶನದ ಹೆಮ್ಮೆಯ ಕೊಡುಗೆ



## ನೀವು ಯಶಸ್ವೀ ಗೃಹಿಣಿಯೇ ?

*ಶಾಂತಾ ನಾಗರಾಜ್*

'ಹೆಣ್ಣು ಮನೆಯ ಕಣ್ಣು' ಎಂಬುದೊಂದು ಮಾತಿದೆ. ಸಂಸಾರ ಸುಸೂತ್ರವಾಗಿ ಸಾಗಲು ಅವಳ ಕೊಡುಗೆ ಅಪಾರ. ಆದರೆ ಹಲವು ಒತ್ತಡಗಳ ನಡುವೆ ಸಿಕ್ಕ ಗೃಹಿಣಿ ಮನಸ್ಸಿನ ಸ್ಥಿಮಿತತೆ ಕಳೆದುಕೊಂಡು ಒದ್ದಾಡಬೇಕಾದ ಸಂದರ್ಭಗಳು ಉಂಟಾಗಬಹುದು. ಅಂಥ ಒದ್ದಾಟದಿಂದ ಹೊರಬಂದು ಯಶಸ್ವಿ ಗೃಹಿಣಿಯಾಗಲು ಬಯಸಿದ್ದೀರಾ ? ಈ ಕೃತಿ ಓದಿ.



## ವೃದ್ಧಾಪ್ಯವನ್ನು ನಿಭಾಯಿಸುವುದು ಹೇಗೆ ?

*ಡಾ|| ಕೆ. ಆರ್. ಶ್ರೀಧರ್*

ವೃದ್ಧಾಪ್ಯವನ್ನು ಗೆದ್ದವರಾರ್ದೇಳಿ ? ಅದೊಂದು ಸಹಜ ಕ್ರಿಯೆ. ಆದರೆ ಅದರೊಳಗೆ ಸಿಕ್ಕಿ ನೋವಿನಿಂದ ನರಳುವವರೇ ಹೆಚ್ಚು. ಮುದಿತನ ಶಾಪವಲ್ಲ, ವ್ಯಕ್ತಿಯ ಜೀವನದಲ್ಲಿ ಅದೊಂದು ಅವಸ್ಥೆ. ವೃದ್ಧಾಪ್ಯವನ್ನು ಸಹ್ಯವಾಗಿಸಿಕೊಂಡು, ಜೀವನದ ಅಂತ್ಯಕಾಲವನ್ನು ಸುಖಮಯವಾಗಿಸಿಕೊಂಡು ಚಟುವಟಿಕೆಯಿಂದಿರುವ ನಿಟ್ಟಿನಲ್ಲಿ ಈ ಕೃತಿ ಅತ್ಯುಪಯುಕ್ತ.



## ಲೈಂಗಿಕ ಚಿಕಿತ್ಸೆ : ನೈಜ ಪ್ರಕರಣಗಳು

*ಡಾ|| ವಿನೋದ್ ಛೆಬ್ಬಿ*

ಆರೋಗ್ಯಕರ ಲೈಂಗಿಕ ಜೀವನ ಸುಖ ಸಂಸಾರಕ್ಕೆ ಭದ್ರ ಬುನಾದಿ. ಸಮಾಜದ ಸ್ವಾಸ್ಥ್ಯಕ್ಕೂ ಸಹಾಯಕ. ಕೆಲವೊಮ್ಮೆ ಇದು ಸಾಧ್ಯವಾಗದೆ ಹೋಗಬಹುದು. ಆಗ ತಜ್ಞರ ಸಲಹೆ, ಚಿಕಿತ್ಸೆ ಅಗತ್ಯವಾಗಬಹುದು. ಸಮಸ್ಯೆಗಳು ತಲೆದೋರಿದಾಗ ವೈದ್ಯರ ಸಲಹೆ ಚಿಕಿತ್ಸೆ ಪಡೆಯಲು ಸಂಕೋಚಪಡಬಾರದು. ಇಂಥ ಹಲವು ನೈಜ ಪ್ರಕರಣಗಳನ್ನು ವಿವರಿಸುವ ಕೃತಿ ಇದು.



## ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುವುದು ಹೇಗೆ ?

*ಅರವಿಂದ ಚೊಕ್ಕಾಡಿ*

ಪರೀಕ್ಷೆ ಮಕ್ಕಳಿಗೆ ಪೆಡಂಭೂತದಂತೆ ಕಾಡುತ್ತದೆ. ಅದು ಬಂತೆಂದರೆ ಇನ್ನಿಲ್ಲದ ಆತಂಕ. ಭಯ ಆವರಿಸಿ ಮನಸ್ಸು ಖಿನ್ನವಾಗುತ್ತದೆ. ಅಂತಹ ಪರೀಕ್ಷೆಯನ್ನು ಯಶಸ್ವಿಯಾಗಿ ನಿಭಾಯಿಸುವುದು ಹೇಗೆ ? ಶಿಕ್ಷಕರು, ಹೆತ್ತವರು ಯಾವ ರೀತಿಯಲ್ಲಿ ಈ ಪರೀಕ್ಷಾ ಭೀತಿಯನ್ನು ನಿವಾರಿಸಲು ಸಹಾಯಕವಾಗಬಹುದು ? ಹಲವು ಸಲಹೆಗಳಿರುವ ಇದನ್ನು ಓದಿ.



## ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ ?

*ಡಾ|| ಕಿಕ್ಕೇರಿ ನಾರಾಯಣ*

ಮಕ್ಕಳ ಮನಸ್ಸು ಸದಾ ಹೊಸತನಕ್ಕೆ ತುಡಿಯುತ್ತಾ ಕ್ರಿಯಾಶೀಲವಾಗಿರುವಂಥದು. ಅಂತಹ ಮನಸ್ಸುಗಳಿಗೆ ನಾವು ಬರೀ ಓದು ಬರಹವನ್ನಷ್ಟೆ ಹಚ್ಚಿದರೆ ಅವು ಏಕತಾನತೆಯಿಂದ ನರಳುತ್ತವೆ. ಓದಿನ ಜೊತೆ ಜೊತೆಗೆ ಸೃಜನಶೀಲ ಮಾಧ್ಯಮಗಳಲ್ಲೂ ಅವರನ್ನು ತೊಡಗಿಸಿಕೊಳ್ಳುವ ಸಹೃದಯತೆ ಇರಬೇಕು. ಯಾವುವು ಆ ಸೃಜನಶೀಲ ಮಾಧ್ಯಮಗಳು ? ಪುಸ್ತಕ ಓದಿ.



## ಯಶಸ್ವೀ ಶಿಕ್ಷಕರಾಗುವುದು ಹೇಗೆ ?

*ಅರವಿಂದ ಚೊಕ್ಕಾಡಿ*

'ಶಿಕ್ಷಕರು ನಾಳಿನ ಯಶಸ್ವೀ ಪ್ರಜೆಗಳ ರೂವಾರಿಗಳು' ಎನ್ನುವ ಮಾತಿದೆ. ತಿದ್ದಿ, ತೀಡಿ, ಅವರನ್ನು ಪ್ರೋತ್ಸಾಹಿಸಿ ಅವರ ಬುದ್ಧಿಯನ್ನು ಸೌಜನ್ಯದಿಂದ ಒರೆಹಚ್ಚುವ ಗುಣ ಶಿಕ್ಷಕರಲ್ಲಿರಬೇಕು. ಎಳವೆಯಲ್ಲೆ ಕುಡಿ ಚಿವುಟಿ ಹಾಳುಗೆಡವಬಾರದು. ಹಾಗಾದರೆ ಯಶಸ್ವೀ ಶಿಕ್ಷಕರಾಗಲು ಏನು ಮಾಡಬೇಕೆನ್ನುತ್ತೀರ ? ಇಲ್ಲಿವೆ ನೋಡಿ ಅಂತಹ ಹಲವು ಸರಳ ಸೂತ್ರಗಳು.

ಯಾಯಿತಿ ಬೆಲೆ ಜೊತೆಗೆ ಅಂಚೆ ವೆಚ್ಚ ರೂ. 30 ಸೇರಿಸಿ ನಮಗೆ ಎಂ.ಓ/ಡಿ.ಡಿ. ಕಳಿಸಿ




**ವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಂಗಳೂರು - 560 001 ದೂರವಾಣಿ/ಫ್ಯಾಕ್ಸ್ : 22203580/81/82
mail : nkp@bgl.vsnl.net.in website : www.navakarnatakabooks.com

**ಶಾಖೆಗಳು**

ಗಾಂಧಿನಗರ, ಬೆಂಗಳೂರು - 560 009
✆ 22251382

ಕೆ. ಎಸ್. ರಾವ್ ರಸ್ತೆ, ಮಂಗಳೂರು - 575 001
✆ 2441016

ರಾಮಸ್ವಾಮಿ ವೃತ್ತ, ಮೈಸೂರು - 570 024
✆ 2424094

ಸ್ಟೇಷನ್ ರಸ್ತೆ, ಗುಲ್ಬರ್ಗಾ - 585 102
✆ 224302



# ಯುವ ಕಲಾವಿದ ಪ್ರದೀಪ್

ಕಳೆದ ಸಂಚಿಕೆಯಲ್ಲಿ ಬೆಂಗಳೂರು ಚಿತ್ರಕಲಾ ಪರಿಷತ್ತಿನ ಕಲಾ ಚಟುವಟಿಕೆಗಳ ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದೆವು.

ಪರಿಷತ್ತಿನಲ್ಲಿ ಪ್ರದರ್ಶನವಾಗುವ ಅಪೂರ್ವ ಕಲಾಕೃತಿಗಳನ್ನು ನೋಡಿ ಆನಂದಿಸುವುದಲ್ಲದೆ, ಹೊರಗೆ ಹುಲ್ಲು ಹಾಸಿನ ಮೇಲೆ, ಬಂಡೆಗಳ ಮೇಲೆ, ಮರಗಳ ನೆರಳಿನಲ್ಲಿ, ಒಂಟಿಯಾಗಿ ಕೆಲವೊಮ್ಮೆ ಗುಂಪಾಗಿ ಕುಳಿತು ಚಿತ್ರರಚನಾ ಚಟುವಟಿಕೆಗಳಲ್ಲಿ ನಿರತರಾಗಿರುವ ವಿದ್ಯಾರ್ಥಿಗಳ ಏಕಾಗ್ರತೆಗೆ ಭಂಗ ಉಂಟುಮಾಡದೆ ಗಮನಿಸುತ್ತ ಹೋಗುವುದು ಸಹ ಒಂದು ಅಪೂರ್ವ ಅನುಭವವೇ! ನೀವು ಹೆಜ್ಜೆ ಹಾಕುವಾಗ ಅಕಸ್ಮಾತ್ ಎಡಹುವ ವಸ್ತು ಒಂದು ಕಲಾಕೃತಿಯಾಗಿರುವ ಸಾಧ್ಯತೆಯೂ ಉಂಟು!

ಇಲ್ಲಿ, ಪರಿಷತ್ತಿನ ಮತ್ತೊಬ್ಬ ಹಿರಿಯ ವಿದ್ಯಾರ್ಥಿ ಶ್ರೀ ಪ್ರದೀಪ್ ಅವರ ಕೆಲವು ಕಲಾಕೃತಿಗಳಿವೆ. ಇವರು ತನ್ನ ಚಿತ್ರ ರಚನಾ ಕೌಶಲ್ಯವನ್ನು ಮತ್ತಷ್ಟು ಹೆಚ್ಚಿಸಿಕೊಂಡು, ಅತ್ಯುನ್ನತ ಕಲಾಕಾರನಾಗಬೇಕೆಂಬ ಸಹಜ ಹಂಬಲದವರು.

ಚಿತ್ರ ರಚನೆಯ ಜೊತೆಗೆ ಇವರ ಆಸಕ್ತಿಗಳು ಹಲವು. ಯುವಜನರು ಪುಸ್ತಕ ವಿಮುಖರೆಂಬ ಅಭಿಪ್ರಾಯಕ್ಕೆ ಭಿನ್ನವಾಗಿ ಇವರಿಗೆ ಕನ್ನಡ ಪುಸ್ತಕಗಳನ್ನು ಓದುವುದರಲ್ಲಿ ಹೆಚ್ಚು ಆಸಕ್ತಿ. ಸ್ವಯಂ ಪ್ರಯತ್ನದಿಂದ ಗಿಟಾರ್, ಕೀಬೋರ್ಡ್ ಕಲಿತು ಸೊಗಸಾಗಿ ನುಡಿಸಬಲ್ಲರು. ಸಣ್ಣ ಪ್ರಾಯದಲ್ಲಿ ಶಾಸ್ತ್ರೀಯ ಸಂಗೀತ ಪಾಠ ಹೇಳಿಸಿಕೊಂಡಿದ್ದರು. ಸುಶ್ರಾವ್ಯವಾಗಿ ಹಾಡಬಲ್ಲರು. ವಿಜ್ಞಾನ ಕ್ಲಬ್‌ನ ಸದಸ್ಯರಾಗಿ ಹಲವು ಮಾಡೆಲ್‌ಗಳನ್ನು ರಚಿಸಿದ್ದಾರೆ. ಆಟೋಮೊಬೈಲ್‌ನಲ್ಲಿ ಆಸಕ್ತಿ. ಇದೀಗ ಗೆಳೆಯರ ಸಣ್ಣ ಬಳಗದ ವತಿಯಿಂದ ತಮ್ಮ ಚಿತ್ರಗಳ ಪ್ರದರ್ಶನ ಏರ್ಪಡಿಸಲು ಅಣಿಯಾಗುತ್ತಿದ್ದಾರೆ.

■ ಕೆ. ಪಿ. ಎಸ್.



ಕೈಗಳು



ಮುದುಕನ ವಾಕರ್



ಪ್ರತಿಭಟನೆ (ಪ್ಯಾಷನ್ ಆಫ್ ಪ್ಯಾಟಿನ್)



ಬರೀ ಬದನೆಕಾಯಿ



ಕಾರ್ಟೆಜ್ ಹಾಳೆಯ ಮೇಲೆ ಪಾರದರ್ಶಕ ಇಂಕ್

# ಹುಲಿ ಪಟ್ಟೇಗೌಡ

ವೆಂಕಟಾಚಲ

ಬಸ್ಸಿನಿಂದ ಇಳಿದ ಕೂಡಲೇ ಅವರ ಊರ ಬಗ್ಗೆ ಕತೆ ಹೇಳೋದಕ್ಕೆ ಶುರು ಮಾಡಿದರು ರಮೇಶ್:

''ನೋಡು ಸುರೇಶ್, ನಮ್ಮೂರ (ಹಳ್ಳಿಯ) ಹೆಸರು ಮಂಗನ ಹಳ್ಳಿ ಅಂತ. ಯಾವಾಗಲೋ ಇಲ್ಲಿ ಜನ ಹೀಗೆ ಕರೆದರು. ಅದೇ ಹೆಸರಾಯ್ತು. ಹಳ್ಳಿ ಮುಂದಿನ ಬೋರ್ಡಾಯ್ತು. ಈ ಮಂಗ, ಮರ್ಕಟ, ಕೋತಿ ಇವೆಲ್ಲಾ ಯಾಕೆ ಈ ಹಳ್ಳಿ ಹೆಸರಿಗೆ ಅಂಟಿಕೊಂಡಿತೋ, ಆ ಹಳ್ಳಿ ಮುಂದಿನ ಹನುಮದೇವನೇ ಬಲ್ಲ. ಜನ ಅವರವರಿಗೆ ತೋಚಿದಹಾಗೆ ವ್ಯಾಖ್ಯಾನ ಕೊಡುತ್ತಾರೆ. ಆಂಧ್ರ ಕರ್ನಾಟಕದ ಮಂಗಗಳೆಲ್ಲಾ ಇಲ್ಲೇ ಇದ್ದವೇ ? ಏನು ಮಾಡ್ತಾ ಇದ್ದವು ? ಅದೆಲ್ಲಾ ಹಳೇ ವಿಚಾರ, ಊಹಾ ಪೋಹಾ ಸಂಗತಿಗಳು. ಈಗ ಕೈಯಲ್ಲಿರುವ ಚೀಲವನ್ನು ಭದ್ರವಾಗಿ ಹಿಡಿ. ಇಲ್ಲದಿದ್ದರೆ ಹ್ಯಾಂಡಲ್ ನಿನ್ನದು, ಚೀಲ ಮಂಗರಾಯರದ್ದು. ಇವು ಏನೇನು ಮಾಡುತ್ತವೆ ಗೊತ್ತಾ? ಮನೆ ಹೆಂಚು ತೆಗೆದು ಒಳನುಗ್ಗುತ್ತವೆ. ಅಡಿಗೆ ಮನೆ ಡಬ್ಬಗಳು, ತರಕಾರಿ ಎಲ್ಲಾ ಏಕ ಮಾಡುತ್ತವೆ. ಎಲ್ಲಾ ಸೇರಿಸಿ ಅಡಿಗೆ ಒಂದು ಮಾಡೋದಿಲ್ಲ ನೋಡಪ್ಪ. ಎಲ್ಲಾ ಬೆರೆಸಿ, ಚೆಲ್ಲಿ ರಂಪ ರಾಮಾಯಾಣ ಮಾಡ್ತವೆ. ಮಂಗಳೂರು ಹೆಂಚನ್ನ ಎಷ್ಟು ಚೆಂದಾಗಿ ತೆಗೀತವೆ ಅಂದರೆ, ಐದಾರು ಹೆಂಚು ಪಟ ಪಟ ಅಂತ ನಿಮಿಷಗಳಲ್ಲಿ ತೆಗೆದು ಹತ್ತಾರು ಮಂಗಗಳು ಒಳನುಗ್ಗಿ ಸಾಕಷ್ಟು ಸಂಭ್ರಮಪಟ್ಟಿರುತ್ತವೆ. ಅನಿವಾರ್ಯವಾಗಿ ಹೊರಗೆ ಹೋಗಿರುವ ರೈತಾಪಿ ಜನ ಹಸಿದು ಮನೆಬಾಗಿಲು ತೆರೆದರೆ ಏನಿರುತ್ತೆ? ಎಲ್ಲಾ ಚೆಲ್ಲಾಪಿಲ್ಲಿ! ಆ ವಿಶ್ವಾಮಿತ್ರನಿಗಿಂತ ಹೆಚ್ಚು ಕೋಪ ಬಂದಿರುತ್ತೆ. ಹೆಂಗಸು ಚಂಡಿ ಚಾಮುಂಡಿಯಾಗಿ ಕೊನೆಗೆ ಅತ್ತು ಸುರಿದೂ ಏನಾದರು ಬೇಯಿಸಿಕೊಳ್ಳುವುದಕ್ಕೆ ಪಡುವ ಪಾಡು ಯಾವ ಶತ್ರುವಿಗೂ ಬೇಡ. ಎರಡು ದಿವಸದ ಚಾಕರಿ ಕಟ್ಟಿಟ್ಟ ಬುತ್ತಿ. ಇದೊಂದೇ ಅಲ್ಲ, ಕೈ ತೋಟದ ತರಕಾರಿ ಈಚು, ಕಾಯಿ, ಹಣ್ಣು ಎಲ್ಲಾ ಮಂಗಮಾಯ. ಪುಕ್ಕಟ್ಟೆ ಸಲಹೆ ಕೊಡುವವರು ಬೇಕಾದಷ್ಟು ಮಂದಿ. ಪಟಾಕಿ ಹಚ್ಚಿ, ಬೋನಿನಲ್ಲಿ ಹಿಡಿಸಿ ದೂರ ಸಾಗಿಸಿ, ಅದನ್ನು ಹೊಡೆದರೆ, ಕೊಲ್ಲಿಸಿದರೆ ಮಹಾ ಪಾಪ, ಕೋತಿ ಯಂಥ ಮಕ್ಕಳು ಹುಟ್ಟುತ್ತೆ, ಅಬ್ಬಬ್ಬಾ! ಇಂತಹ ಸಲಹೆಗಳು ಹತ್ತಾರು. ಆದದ್ದು ಏನೂ ಇಲ್ಲ. ಈ ಹಳ್ಳಿಯಲ್ಲಿ ಪ್ರತಿ ನಿತ್ಯದ ಜಂಜಡ ಬದುಕು. ಕೋತಿ ಹಾವಳಿ ಬದುಕು. ಯಾವ ಕಿಂದರ ಜೋಗಿ ಬಂದು ಈ ಕೋತಿಗಳನ್ನು ಕರೆದೊಯ್ಯುತ್ತಾನೋ ಆ ಕೋತಿಬಂಡೆ ಕೋತಿ ರಾಯನೇ ಬಲ್ಲ.

''ನೋಡು ಸುರೇಶ್, ಈಗ ಕ್ಷೇಮ ಸಮಾಚಾರ ವಿಚಾರಿಸಿದರಲ್ಲ? ಆತನ ಹೆಸರು ಪುಟ್ಟೇಗೌಡ ಅಂತ. ಈ ಪುಟ್ಟೇಗೌಡನ ಹಣೆ ಗಮನಿಸಿದಿಯಲ್ಲ, ಬೆಳಿಗ್ಗೆ ಆರುಗಂಟೆಯಿಂದ ರಾತ್ರಿ ಹತ್ತು ಗಂಟೆಯತನಕ ಹಣೆಯಲ್ಲಿ ಪರ್ಮನೆಂಟ್ ವಿಭೂತಿ ಪಟ್ಟೆಗಳು. ಹಳ್ಳಿಯ ಜನ ಈಯಪ್ಪನ ವೇಷ ನೋಡಿ ಪಟ್ಟೇಗೌಡ ಅಂತಾರೆ. ಈವಯ್ಯನಿಗೆ ಮೂರು ಹೆಂಡತಿಯರು. ಅಂತೂ ಮಹಾರಸಿಕ. ಇನ್ನು ಇವನ ಬದುಕಂತೂ ವಿಚಿತ್ರ, ಕುತೂಹಲಜನಕ. ಇವನು ದೊಡ್ಡ ಜಮೀನ್ದಾರ. ಶರಾಬು, ಗೋಮಾಳ, ಕೆರೆ, ಕುಂಟೆ, ಕೊನೆಗೆ ಹಳ್ಳಿ ಸ್ಮಶಾನ ಎಲ್ಲಾ ಉತ್ತುವರಿ, ಒತ್ತುವರಿ ಯಾರೂ ಕೇಳಾಂಗಿಲ್ಲ. ಮನೆಯಲ್ಲಿ ಕೌರವ ಪಡೆ. ಇನ್ನು ರೆವಿನ್ಯೂ ಇಲಾಖೆ, ಪೋಲಿಸ ಇಲಾಖೆ ಎಲ್ಲಾ ಪುಟ್ಟೇಗೌಡನ ವಶವರ್ತಿ. ಈತನ ಮಾತೇ ಮಾಣಿಕ್ಯ. ಈತನ ಜಮೀನಿನ ಪಕ್ಕ ಜಮೀನಿದ್ದವರು ವರ್ಷ ವರ್ಷ ಮೂರಡಿ ನಾಲ್ಕಡಿ ಜಮೀನು ಕಳೆದುಕೊಳ್ಳುತ್ತಾ ಹೋಗುತ್ತಾರೆ. ಪ್ರತಿ ವರ್ಷ ಹೊಸ ಬದುವು. ಕೇಳುವುದುಂಟೆ ? ಗೌಡನ ದನಕರು ಬೇರೆಯವರ ಹೊಲ ನಾಶ ಮಾಡುವುದೂ ಉಂಟು. ಕೇಳೋರು ಯಾರು! ಈತನ ಯಾವ ಮಕ್ಕಳೂ ಓದುವ, ಕಲಿಯುವ ಪಾಪದ ಕೆಲಸ ಮಾಡಿಲ್ಲ. ಗೌಡಾನೂ ಮಾಡಿಸುತ್ತಿಲ್ಲ. ಎಲ್ಲರೂ ಸಕಲವಿದ್ಯಾ ಪಾರಂಗತರೇ! ಅವರಿಗೆ ರೀತಿ ನೀತಿ ಬದುಕುವ ಪರಿ ಸಹನೆ ನೆಮ್ಮದಿ ಊಹುಂ...... ಯಾವುದೂ ಗೊತ್ತಿಲ್ಲ, ಯಾವುದೂ ಬೇಕಿಲ್ಲ. ಒಂಥರಾ ಪ್ರಾಣಿಜೀವನ. ಪಾಪ ಅವರದ್ದಾದರೂ ಏನು ತಪ್ಪಿದೆ. ಅವರನ್ನು ತಿದ್ದುವ ಪ್ರಾಣಿಯಿಲ್ಲ. ಯಾವುದಕ್ಕೂ ಅಡ್ಡಿಯಿಲ್ಲ. ಮಾಡಿದ್ದೆಲ್ಲಾ

ಸರಿ ಎಂಬ ಸರ್ಟಿಫಿಕೇಟು. ಇನ್ನು ಆಗುವುದೇನು? ಎಲ್ಲವೂ ಅನೀತಿ ಗೊಂದಲಗಳ ಆಗರ. ಪುಟ್ಟೇಗೌಡನ ಮನೆ. ಮನೆಯಲ್ಲಿ ಮೂರು ಜನ ಹೆಂಡತಿಯರು ಮೂರು ಮುಖ. ಹಲವೊಮ್ಮೆ ನೂರಾರು ಮುಖ. ಮುಸುಕಿನ ಗುದ್ದಾಟಗಳು. ಅವರವರ ಮಕ್ಕಳು ಅವರವರಿಗೆ ಮೆಚ್ಚು. ಬಟ್ಟೆ ಬರೆ ಚಿನ್ನ ಬೆಳ್ಳಿ ಯಾವುದರಲ್ಲೂ ಒಮ್ಮತವಿಲ್ಲ, ತಾರತಮ್ಯ. ಈ ಮನೆಗೆ ಒಮ್ಮೆ ಹೆಣ್ಣು ಕೊಟ್ಟರು ಅಂದರೆ, ಆ ಹೆಣ್ಣು ಮಗಳನ್ನು ಸಾರಾಸಗಟು ಮಾರಿಕೊಂಡರು ಅಂತಲೇ ಅರ್ಥ. ತೌರು ಮುಖ ಕಾಣುವ ಹಂಗಿಲ್ಲ, ಬರೋಬ್ಬರಿ ಚಾಕರಿ, ಹದಿನೈದೋ ಇಪ್ಪತ್ತೋ ಹಸು, ಕರು, ಎತ್ತು ಕಸ ಕಡ್ಡಿ, ಒಂದೈವತ್ತು ಜನಕ್ಕೆ ಬೇಯಿಸುವುದು...... ಇತ್ಯಾದಿ ಇತ್ಯಾದಿ ಚಾಕರಿ. ಮಧ್ಯೆ ಮಧ್ಯೆ ಲಾತಾಗಳು ಉಂಟು. ಒಂಥರಾ ಕಾಡು ಪ್ರಾಣಿಗಳ ಜೊತೆ ಜೀವನ. ಬಹು ಹಿಂದೆ ನೈಲ್ ನದಿ ತೀರದ ಜೀವನ ಹೇಗಿತ್ತೋ ಹಾಗೆ ಅನ್ನಬಹುದು.

''ಒಂದು ಉದಾಹರಣೆ ಹೇಳ್ತೀನಿ, ಕೇಳು. ಕೆರೆಯಲ್ಲಿ ನೀರು ನಿಲ್ಲುತ್ತಿದ್ದ ಎತ್ತರದ ಚಪ್ಪಡಿಯನ್ನು ಅರ್ಧಕ್ಕಿಳಿಸಿದ. ಅರ್ಧ ನೀರು ಮಾತ್ರ ನಿಲ್ಲುವಂತಾಯ್ತು. ಕೆರೆಯ ಅಂಗಳ ಸುಮಾರು ಐದಾರು ಎಕರೆ ಜಮೀನನ್ನು ಉತ್ತು ಬಿತ್ತು ವಶಪಡಿಸಿ ಕೊಂಡ. ಕೆರೆಯ ಅರ್ಧ ನೀರು ಅವನ ಜಮೀನಿಗೆ ಸಾಕು. ಉಳಿದವರಿಗೆ ಮಳೆ ನೀರೆ ಗತಿ. ಅವರಾರಿಗೂ ಕೆರೆಯ ಹಕ್ಕಿಲ್ಲ ಹೇಗಿದೆ ಜಮೀನು ಭಕ್ಷಣೆ!

''ಮತ್ತೊಂದು ಉದಾಹರಣೆ : ರಾಮಪ್ಪ ಅಂತ ಒಬ್ಬ ಸಜ್ಜನ ವ್ಯಕ್ತಿ ಆ ಎದುರುಗಡೆ ಮೂಲೆ ಮನೆಯಲ್ಲಿದ್ದಾರೆ. ಅವರದು ಆರು ತೆಂಗಿನ ಮರ ಫಸಲಿಗೆ ಬಂದಿವೆ. ಆತನ ಮನೆ ಬದುವಿನ ಪಕ್ಕದಲ್ಲೇ ಪುಟ್ಟೇಗೌಡನ ಜಮೀನು. ಒಂದು ದಿನ ಗೌಡ ತನ್ನ ಐದಾರು ಮಕ್ಕಳೊಡನೆ ಹೋಗಿ ಬೇಲಿ ತೆಗಿಸಿದ. ತೆಂಗಿನ ಮರಗಳನ್ನು ತನ್ನ ಜಮೀನಿಗೆ ಸೇರಿಸಿಕೊಂಡು ಬೇಲಿ ಹಾಕಿದ. ಹಾಗೆಯೇ ರಾಮಪ್ಪನ ಬಾವಿ ಅರ್ಧ ಗೌಡನ ಜಮೀನಿಗೆ ಸೇರಿಸಿಕೊಂಡಂತೆ ಬೇಲಿಯ ನೇರವನ್ನು ಬದಲಾಯಿಸಿದ. ಆಯ್ತಲ್ಲ ಕೆಲಸ! ಕೇಳುವುದು ಯಾರು? ಹೇಳುವುದು ಯಾರಿಗೆ? ಹೇಗೆ? ನೋಡಿದ ಹಳ್ಳಿ ಜನರೆಲ್ಲಾ, ತೆಪ್ಪಗೆ ಅಯ್ಯೋ ನಮಗ್ಯಾಕೆ ಬೇಕು ತಗಾದೆ, ಅಂತ ಕಂಡರೂ ಕಾಣದ ಹಾಗೆ ದೂರ ಸರಿಯುತ್ತಾರೆ. ಇಂಥದು ಲೆಕ್ಕವಿಲ್ಲದಷ್ಟು

''ಈ ತಮ್ಮಣ್ಣಯ್ಯನ ಘನ ಕಾರ್ಯಗಳು ಮತ್ತೆ ಕೆಲವಿದೆ ಕೇಳು. ತಮ್ಮಣ್ಣಯ್ಯನ ಹಿರೇ ಮಗನಿಗೆ ಪಕ್ಕದ ಹಳ್ಳಿಯಿಂದ ಹೆಣ್ಣು ತಂದಿದ್ದಾರೆ. ಆಕೆಗೆ ಇಬ್ಬರು ಗಂಡು ಮಕ್ಕಳು. ತಮ್ಮಣ್ಣಯ್ಯನ ಸೊಸೆಯ ತಾಯಿ ವಿಧವೆ. ಕಾಯಿಲೆಯಿಂದ ಮೇಲೆ ಏಳಲಾರದ ಸ್ಥಿತಿಯಲ್ಲಿದ್ದಾಗ ಹಾಗೂ ಮಕ್ಕಳ ಆರೈಕೆಯಲ್ಲೇ ಇದ್ದಾಗ, ಈ ನರಿ ತಮ್ಮಣ್ಣಯ್ಯ ಸುಳ್ಳು ಪತ್ರ ಕಳ್ಳಸಾಕ್ಷಿ ನಿರ್ಮಿಸಿ ಅಳಿಯ ಅರ್ಥಾತ್ ತಮ್ಮಣ್ಣಯ್ಯನ ಮಗನೆ ಅತ್ತೆಯನ್ನೂ ಬಹು ದಿನ ಸಾಕಿದ್ದಾಗಿಯೂ ಅದರಿಂದ ಪತ್ನಿಯ ನಂತರದಲ್ಲಿ ಆಕೆಯ ಹೆಸರಿನಲ್ಲಿದ್ದ ಎಲ್ಲಾ ಆಸ್ತಿಯೂ ಅಳಿಯನಿಗೇ ಸೇರತಕ್ಕದ್ದೆಂದು ಯಾರೋ ಡೂಪ್ಲಿಕೇಟ್ ಅತ್ತೆಯನ್ನು ರಿಜಿಸ್ಟ್ರಾರ್ ಆಫೀಸಿನಲ್ಲಿ



ಹಾಜರುಪಡಿಸಿ, ಪರಿಚಿತರಾರಿಗೂ ಗೊತ್ತಾಗದ ಹಾಗೆ ಷಡ್ಯಂತ್ರ ನಡೆಸಿ ಅತ್ತೆಯ ಅಂದರೆ ಬೀಗರ ಆಸ್ತಿಯನ್ನು ಲಪಟಾಯಿಸಿದ್ದಾನೆ. ಈ ವಿಷವೃತ್ತ ಹೇಗೆ ಹೇಗೆ ರೂಪು ತಳೆದಿದೆ ಎಂಬುದು ಯಾರಿಗೂ ಗೊತ್ತಿಲ್ಲ. ಎಲ್ಲಾ ನಿಗೂಢ. ತಮ್ಮಣ್ಣಯ್ಯನ ಬೀಗಿತ್ತಿ ತೀರಿಹೋಗಿದ್ದಾರೆ. ದಾಖಲಾತಿಗಳು ನಿಗೂಢವಾಗೇ ಇವೆ. ಸ್ವಲ್ಪ ಊಹೆಗಳಿಂದ ಏನೋ ಅನುಮಾನ ಹೊಗೆಯಾಡಿದೆ. ಯಾರಿಗೂ ವಿಷಯ ಮಾತನಾಡಲು ಧೈರ್ಯವಿಲ್ಲ, ಕ್ರೌರ್ಯದ ಭಯ. ಪುಟ್ಟೇಗೌಡನ ಹಿಕಮತ್ತೂ ಇಲ್ಲಿ ಕೆಲಸ ಮಾಡಿದೆ. ಎಲ್ಲಾ ನೀಲಿ ನಕ್ಷೆ ಪುಟ್ಟೇಗೌಡನ ಮನೆಯಲ್ಲೇ ತಯಾರಾಗಿದೆ.

''ಮತ್ತೊಂದು ನಿದರ್ಶನ. ಬೀರಣ್ಣನ ಮನೆ ಪುಟ್ಟೇ ಗೌಡನ ದನದ ಕೊಟ್ಟಿಗೆಗೆ ಅಂಟಿಕೊಂಡಿದೆ. ಬೀರಣ್ಣ ಸಾಧು ಪ್ರಾಣಿ ಎಲ್ಲಾ ದೌರ್ಜನ್ಯ ಸಹಿಸಿಕೊಳ್ಳುವ ಗುಣ. ಪುಟ್ಟೇಗೌಡ ಎರಡೂ ಮನೆಗೂ ಒಂದೇ ಅಡ್ಡಗೋಡೆ ಇದ್ದರೆ ರಿಪೇರಿಗೆ ತೊಂದರೆಯಾಗುತ್ತೆ, ಈ ಗೋಡೆ ತೆಗೆದು ಒಂದೂವರೆ, ಒಂದೂವರೆ ಅಡಿ ಜಾಗ ಇಬ್ಬರೂ ಬಿಟ್ಟು ಬೇರೆ ಬೇರೆ ಗೋಡೆ ಹಾಕಿ



ರಿಪೇರಿಗಾಗಿ ಸಂದು ಬಿಡೋಣ, ಎಂಬ ವರಾತ ಶುರುವಾಯಿತು. ಬೀರಣ್ಣಂಗೆ ಹಾಳಾಗಲಿ ನೆಮ್ಮದಿ ಮುಖ್ಯ ಅನ್ನೋ ಮನಸ್ಸು. ಪುಟ್ಟೇಗೌಡ ಮಧ್ಯದ ಗೋಡೆಯನ್ನು ಬೀಳಿಸಿದ ತಿಂಗಳಾದರೂ ಗೋಡೆ ಕಟ್ಟುವ ಮಾತೇ ಇಲ್ಲ, ಬೀರಣ್ಣನ ಮನೆಗೆ ಬೇರೆ ಕಡೆ ಬಾಗಿಲಿದ್ದರೂ ನಿಷ್ಪ್ರಯೋಜನ. ಏಕೆಂದರೆ ಮನೆ ಪೂರಾ ಬಟಾಬಯಲು, ಕಳ್ಳಕಾಕರಿಗೆ, ಕೊನೆಗೆ ಹೆಗ್ಗಣಗಳಿಗೆ ರಹದಾರಿಯಾಗಿದೆ. ಕೊನೆಗೆ ಧೈರ್ಯವಿಲ್ಲದ ಧೈರ್ಯದಿಂದ, ಇದೇನಿದು ಗೋಡೆ ಕಟ್ಟಬಾರದೇ ಎಂದು ಏಜೆಂಟ್ ತಮ್ಮಣ್ಣಯ್ಯನನ್ನು ಕೇಳಿದರೆ, ನಿನಗೆ ಬೇಕಾದರೆ ನೀನು ಹಾಕಿಕೊಳ್ಳಬಹುದು, ಅವರಿಗೇನೂ ಅರ್ಜೆಂಟಿಲ್ಲ ಎಂಬ ಕುಹಕ. ವಿಧಿಯಿಲ್ಲದೆ ಗೋಡೆ ಹಾಕಲು ತಯಾರಿ ನಡೆಸಿದರೆ ಒಂದೂವರೆ ಅಡಿ ಅಲ್ಲಿ ನೀ ಐದು ಅಡಿ ಜಾಗ ಬಿಟ್ಟು ಹಾಕಿಕೊಳ್ಳಬೇಕಂತೆ. ಯಾಕೆಂದರೆ ಹಿಂದೆಂದೋ ಹಿರೀಕರು ಐದು ಅಡಿ ಸೇರಿಸಿಕೊಂಡು ಗೋಡೆ ಎಬ್ಬಿಸಿದ್ದರು. ಆದ್ದರಿಂದ ಈಗ ಸರಿಪಡಿಸಿಕೊಳ್ಳಬೇಕು. ಇದಕ್ಕೊಪ್ಪದಿದ್ದರೆ ಹಾಗೇ ಇರಲಿ, ಎಂಬ ಷರತ್ತು. ಬೀರಣ್ಣನಿಗೆ ಮೋಸ ಅರಿವಾಗಿ ಆಕಾಶವೇ ತಲೆಮೇಲೆ ಬಿದ್ದಂತಾಗಿ ಸುಸ್ತಾದ. ಯಾವ ಪಂಚಾಯ್ತಿ ಕಂಪ್ಲೈಂಟು ತನ್ನ ಪರ ಕೆಲಸ ಮಾಡುವುದಿಲ್ಲ ಎಂದು ಮನವರಿಕೆಯಾಯ್ತು. ಕೆಲ ಜನ ಏನು ಮಾರಾಯ ಎಂಥಾ ಅನ್ಯಾಯ ಅಂದದ್ದು ಗುಟ್ಟಿನಲ್ಲಿ ಮಾತ್ರ. ಬೀರಣ್ಣನ ಐದು ಪ್ಲಸ್ ಮೂರು ಅಂದರೆ ಎಂಟಡಿ ಜಾಗ ಅನಾಮತ್ತಾಗಿ ಹೋಯ್ತು. ಬೀರಣ್ಣನ ಗೋಡೆ ಎಂಟಡಿ ಬಿಟ್ಟು ಅಳುತ್ತಾ ಎದ್ದಿತು. ಕೆಲಸ ಪೂರ್ತಿ ಆದ ತಕ್ಷಣ ಪುಟ್ಟೇಗೌಡ ದನದ ಕೊಟ್ಟಿಗೆಯನ್ನು ಹೆಂಚುಮುಚ್ಚಿ ಎಂಟು ಅಡಿ ವಿಸ್ತರಿಸಿಕೊಂಡು ಬಂದೋಬಸ್ತ್ ಮಾಡಿಕೊಂಡ. ಈವತ್ತಿಗೂ ಹಾಗೇ ಇದೆ. ಬೀರಣ್ಣನ ಎದೆಯಲ್ಲಿ ಬೆಂಕಿ, ಕಣ್ಣಲ್ಲಿ ನೀರು. ಪತ್ರಗಳಲ್ಲಿ ಏನೋ ಅಂಕಣ ಪಂಕಣ ಅಂತಿದೆಯೇ ಹೊರತು ಅಡಿ, ಗಜ ಅಂತ ಇಲ್ಲವೇ ಇಲ್ಲ, ಇದ್ದರೂ ದೌರ್ಜನ್ಯದ ಮುಂದೆ ಎಲ್ಲಾ ಶೂನ್ಯ. ಬೀರಣ್ಣನ ಕತೆಯಂತೂ ಗೋವಿಂದಾ...... ಗೋವಿಂದ. ಬೀರಣ್ಣ, ನೀ ಕೋರ್ಟಿಗೆ ಹೋಗು ಅಂತ ಕೆಲವರ ಗುಟ್ಟಿನ ತಾಕೀತು. ಬೀರಣ್ಣ, ನೀ ಕೋರ್ಟಿಗೆ ತಿರುಗಿ ತಿರುಗೀ ಕೆಲಸ ಹಾಳು. ಎಷ್ಟು ವರ್ಷ ಆಗುತ್ತೋ ಮಾರಾಯಾ! ಅದೆಲ್ಲಾ ಒತ್ತಟ್ಟಿಗಿರಲಿ ಅಂದರೆ, ದಿನಾ ಪಕ್ಕದವರ ಕಿರುಕುಳಕ್ಕೆ ಏನು ಪರಿಹಾರ ಅಂತ ಯೋಚಿಸು, ಅಂತ ಮತ್ತೆ ಕೆಲವರ ಉಪದೇಶ. ನಮ್ಮ ದೇಶ ತ್ವರಿತ ನ್ಯಾಯದಲ್ಲಿ ಮುಂದುವರೆದ ದೇಶವಲ್ಲ ಅನ್ನುವ ಹಿತವಚನ ಕೆಲವರದು. ಒಟ್ಟಿನಲ್ಲಿ ಬೀರಣ್ಣನಿಗೆ ಗೊಂದಲ.

''ಈ ಪುಟ್ಟೇಗೌಡ, ಪದೇ ಪದೇ ಒಂದು ಜಮೀನಿನ ಕಡೆ ಕಣ್ಣ ಹಾಯಿಸಿದ. ಅದರ ಒಡೆಯ ಕಡು ಬಡವ. ಪಿತ್ರಾರ್ಜಿತ ಆಸ್ತಿ ಅದು. ಸರಿ ಶುರುವಾಯ್ತು ತಮ್ಮಣ್ಣಯ್ಯನ ಮಧ್ಯಸ್ಥಿಕೆ: ಆ ಜಮೀನನ್ನು ಬೀಡು ಬಿಟ್ಕೊಂಡು ಏನು ಮಾಡ್ತೀಯ ಚೆಲುವಯ್ಯ? ಗೌಡರಿಗೆ ಕೊಟ್ಟು ದುಡ್ಡು ತಗೊಂಡು ಕೈ ತೊಳೆದುಕೋ. ನೀನು ಬೇಸಾಯಗಾರನಲ್ಲ ಬರಿ ಮುಳ್ಳು ಕಂಟಿ ಬೆಳಕೊಂಡದೆ.

''ನೋಡು ಸುರೇಶ್ ಈ ಹಳ್ಳಿ ಮಂಗಪಲ್ಲಿಯಲ್ಲಿ ಇನ್ನೂ ಸಾಕಷ್ಟು ನಿದರ್ಶನಗಳಿವೆ. ಈ ಪರಮಧೂರ್ತ ಪುಟ್ಟೇಗೌಡ ನೀಚಾತಿನೀಚ ತಮ್ಮಣ್ಣಯ್ಯ ಇವರು ಕೇವಲ ನಿಮಿತ್ತ ನಿದರ್ಶನಗಳಷ್ಟೇ. ನಿಜಾರ್ಥದಲ್ಲಿ ಹಳ್ಳಿಗಳ ಗೋಳು ವಾಸ್ತವ ನಿರೂಪಣಾ ಸತ್ಯ ಕಥೆಗಳು. ಯಾವ ಹಳ್ಳಿ ಎಲ್ಲಾ ದೃಷ್ಟಿಕೋನದಲ್ಲೂ ಸುಖ ಸಮೃದ್ಧಿ ನೆಮ್ಮದಿಯಿಂದ ಜೀವಿಸಿದೆ ಎಂಬುದನ್ನು ದೀಪದಲ್ಲಿ ಹುಡುಕಬೇಕಷ್ಟೆ. ಈ ಪುಟ್ಟೇಗೌಡ ತಮ್ಮಣ್ಣಯ್ಯರ ಟೋಟೆಮ್ ಒಂದೇ. ಆ ದೃಷ್ಟಿಯಲ್ಲಿ ಇವರು ಸಗೋತ್ರಿಗಳು. ಇಬ್ಬರದೂ ಅವಿನಾಭಾವ ಸಂಬಂಧ. ನಡೆದಾಡುವ ಜನರಿಗೆ ಇತ್ತ ದರಿ ಅತ್ತ ಪುಲಿ. ಅನ್ವರ್ಥ ನಾಮವೇ ಹುಲಿ ಪಟ್ಟೇಗೌಡ. ಹುಶಾರಿ ಪುಟ್ಟೇಗೌಡ ಯಾವುದರಲ್ಲಿಯೂ ನೇರ ಭಾಗಿಯಾಗುವುದಿಲ್ಲ. ತಮ್ಮಣ್ಣಯ್ಯನನ್ನು ಮುಂದಕ್ಕೆ ಬಿಟ್ಟು ಎಲ್ಲಾ ಕೆಲಸಗಳನ್ನು ಮಾಡಿಸಿಕೊಳ್ಳುವ, ಸಾಧಿಸಿಕೊಳ್ಳುವ ಜಾಣ ಜಾರು ಪ್ರಾಣಿ.'' ರಮೇಶನೆಂದ :

''ಬಹಳ ಹಿಂದಿನದನ್ನು ಓದಿ ತಿಳಿಯುತ್ತಿರುವೆ. ಬದಂತೇ ಹೇ ಬಂತೇಗಣ ಎಂದರೆ ಅಂದಿನ ಜನ ಒಗ್ಗೂಡಿ ಒಂದು ಕಡೆ ಸೇರುತ್ತಿದ್ದರು. ಇಂದಿಗೆ ಇನ್ನೂರು ಪೀಳಿಗೆಗಳ ಹಿಂದೂಸ್ತಾನ ಈರಾಣಗಳ ಶ್ವೇತ ಜಾತಿಗಳು ಒಂದೇ ಬಳಗದ ಜನವಾಗಿದ್ದವು. ಅವೆರಡರ ಸಮ್ಮಿಲಿತ ನಾಮವೇ ಆರ್ಯಜನ. ಅಲ್ಲಿಂದ ಇಲ್ಲಿಯವರೆಗೆ ಜನಪದ ಪದ್ಧತಿಯನ್ನು ಅಭ್ಯಸಿಸಿ ಈಗಿನ ಹಳ್ಳಿಗಳಲ್ಲಿ ಶಾಪಗ್ರಸ್ತವಾಗಿ ಉಳಿದುಬಿಟ್ಟಿರುವ ಅಂಶಗಳಾವುವು, ಪರಿಹಾರವೆಂತು ತಿಳಿಯಲು ತುಂಬಾ ಅಭ್ಯಾಸಬೇಕಾಗಿದೆ.'' ''ರಮೇಶ, ನಾನು ಆ ದಿಸೆಯಲ್ಲಿ ಚಿಂತನ ಮಂಥನ ನಡೆಸಿ, ಈಗ ಪಿಡುಗುಗಳಾಗಿ ಕಾಡುವ ಹಳ್ಳಿಯ ಸಮಸ್ಯೆಗಳನ್ನು ಗುರುತಿಸುತ್ತೇನೆ. ನೀ ನೀಡಿದ ಕಂಡ ಯಥಾವತ್ ವರದಿಗಳನ್ನು ಗಮನಿಸಿ ನಮ್ಮ ಹಳ್ಳಿಗಳ ಬಗ್ಗೆ ಥೀಸಿಸ್ ಮಂಡಿಸುವ ಯೋಚನೆ ಇದೆ. ಹಾಗೇ ನ್ಯಾಯ ದೊರಕಬೇಕಾದ ಕೋರ್ಟ್ ಕಛೇರಿಗಳಲ್ಲಿ ಆಗುವ ವಿಳಂಬ ಹಳ್ಳಿಗಳ ಶಾಂತ ಬದುಕಿಗೆ ಏಕೆ ಮಾರಕವಾಗುತ್ತಿದೆ ಎಂಬ ಸೊಲ್ಲು ಜನರ ಬಾಯಲ್ಲಿ ಸಾಮಾನ್ಯ ವಿಷಯವಾಗಿರುವುದು ಹೇಗೆ? ಎಂತು? ಪರಿಹಾರ ಎಲ್ಲಿಂದ ಆಗಬೇಕು? ಅದನ್ನು ಯೋಚಿಸುತ್ತಿದ್ದೇನೆ.

''ನೋಡು ರಮೇಶ, ಇಲ್ಲಿ ವ್ಯವಸ್ಥೆಯೇ ಕೆಟ್ಟಿದೆ ಅನ್ನೋ ತೀರ್ಮಾನಕ್ಕೆ ಬರಬೇಕಾಗಿದೆ. ವ್ಯವಸ್ಥೆಯನ್ನು ಸರಿಪಡಿಸಿದರೆ ಮಾತ್ರ ಒಂದು ಪರಿಹಾರ. ಆದರೆ ಅದು ಸದ್ಯದ ಪರಿಸ್ಥಿತಿಯಲ್ಲಿ ಆಗದ ಮಾತೇನೋ. ಒಂದು ಯೋಚನೆ ಮಾರ್ಕ್ಸಿಸ್ಟ್ ಸಿದ್ಧಾಂತ ರೂಢಿಸಿಕೊಳ್ಳಬೇಕೇ ಇಲ್ಲಾ ನಕ್ಸಲೀಯರ ಆಗಮನವಾಗಿ ಪ್ರಜಾಕೋರ್ಟುಗಳ ಅಸ್ತಿತ್ವದಿಂದ ಈ ಹಳ್ಳಿಗಳ ಅರಾಜಕತೆಗೆ ಮುಕ್ತಿ ಸಿಗಬೇಕೇ ಅಥವಾ ವಿನೋಬಭಾವೆಯವರ ಭೂದಾನ ಯಜ್ಞ ಸೂಕ್ತವೇ? ರಾಜಕಾರಣಿಗಳ ಅರಾಜಕತೆ, ಹಸ್ತಕ್ಷೇಪ, ಗೂಂಡಾಗಿರಿ, ಪೊಲೀಸ್ ವ್ಯವಸ್ಥೆಯ ಅಸಹಾಯಕತೆ, ದುರ್ಬಳಕೆ, ನೂರಾರು ಪಥಭ್ರಷ್ಟ ಚಿಂತನೆಗಳು, ಹತ್ತಾರು ಪಾರ್ಟಿಗಳು, ಜಾತಿಗಳು, ಇವೆಲ್ಲಾ ದೇಶದ ಸಮಾಜದ ಹಳ್ಳಿಗಳ ಸ್ವಾರ್ಥವನ್ನು ಹದಗೆಡಿಸಿವೆಯೇ? ಇದೆಲ್ಲದರ ಬಗ್ಗೆ ಅಧ್ಯಯನ ನಡೆಸಿ ಒಂದು ಚಿಂತನಾ ತೀರ್ಮಾನ ತೆಗೆದುಕೊಂಡು ನಮ್ಮ ಹಳ್ಳಿಗಳ ಬಗ್ಗೆ ಥೀಸಿಸ್ ಬರೆಯುವ ಯೋಚನೆ ಇದೆ. ಇದರ ಬಗ್ಗೆ ಸಾಕಷ್ಟು ಅಭ್ಯಾಸ ಮಾಡಬೇಕಾಗಿದೆ. ನಿನ್ನ ಕಥಾ ರೂಪ ವರದಿಗಳಿಗೆ ವಂದನೆಗಳು. ಸತ್ಯಾಸತ್ಯತೆಯನ್ನು ಊರೂರು ಸುತ್ತಿ ತಿಳಿದು ಒಂದು ತೀರ್ಮಾನಕ್ಕೆ ಬರಬೇಕಾಗಿದೆ ರಮೇಶ್.''

ಅದಿರಲಿ, ತಮ್ಮಣ್ಣಯ್ಯಾ ಜಗುಲಿ ಕಡೆ ನೋಡುತ್ತಾ ರಮೇಶನ ಜೊತೆ ಅಪರಿಚಿತ ಸುರೇಶನನ್ನು ನರಿ ದೃಷ್ಟಿಯಲಿ ನೋಡುತ್ತಾ ವಿಷ ನಗು ಸೂಸುತ್ತಾ ಮುಂದೆ ನಡೆದ. ಆತನ ಉದ್ದಿಶ್ಯ ಶನಿವಾರ ರಾತ್ರಿಯಿಂದ ಭಾನುವಾರ ಮಧ್ಯಾಹ್ನದವರೆಗೂ ಈ ಮನೆ ಈ ಜಗುಲಿಯಲ್ಲಿ ಏನು ನಡೆಯುತ್ತಿದೆ ಎಂಬ ಸಂದೇಹ. ಮೊದಲೇ ನರಿ ಬುದ್ಧಿ ಪುಟ್ಟೇಗೌಡನಿಗೆ ಈ ತಮ್ಮಣ್ಣಯ್ಯನೇ ಕಣ್ಣು ಕಿವಿ, ಕೈ ಕಾಲು ಎಲ್ಲಾ ಧೂರ್ತ ಜೋಡಿ.

ಅಷ್ಟರಲ್ಲಿ ರಮೇಶನ ತಾಯಿ ಅಡಿಗೆ, ತಿಂಡಿ ಮುಗಿಸಿ ರಮೇಶ ನಿನ್ನ ಸ್ನೇಹಿತನಿಗೆ ಈ ಹಳ್ಳಿಯ ಹಾಳು ಪುರಾಣ ಹೇಳಿ ಹೇಳಿ ಬೇಸರಿಸಿದ್ದೀಯ. ಇದು ಮುಗಿಯದ ದುರಂತ ಕಥೆ. ನೋಡು ನಮ್ಮ ಮನೆಯ ಕೈತೋಟದ ಜಮೀನೆಲ್ಲಾ ಉತ್ತು ಮನೆ ಗೋಡೆಗೂ ತೊಂದರೆ ಮಾಡಿದ್ದಾರೆ. ಗೋಡೆ ಮಳೆಗಾಲಕ್ಕೆ ಬೀಳುವ ಸ್ಥಿತಿ ತಲುಪಿದೆ. ರಿಪೇರಿಗೆ ಹೋದ ಕೂಲಿಯವರನ್ನು ಗದರಿಸಿ ಓಡಿಸಿದ್ದಾರೆ. ನಿನ್ನ ಓದು ಮುಗಿಸಿ ಬೆಂಗಳೂರಿನಲ್ಲಿ ಒಂದು ಕೆಲಸಕ್ಕೆ ಸೇರಿಕೊಂಡರೆ ಸಾಕು. ಅಲ್ಲೇ ಬಿಡಾರ. ಅಲ್ಲಿ ಒಬ್ಬರ ಉಸಾಬರಿ ಮತ್ತೊಬ್ಬರಿಗೆ ಇಲ್ಲವಂತೆ. ಸಾಕಪ್ಪಾ ಈ ಹಳ್ಳಿ ಜೀವನ. ನಾವು ಹೊರಟರೆ ಈ ಮನೆ ಪುಟ್ಟೇಗೌಡನಿಗೆ ಕುರಿ, ದನಕ್ಕೆ ಷೆಡ್ಡು, ದುಡ್ಡು ಕಾಸು ಏನು ಇಲ್ಲ. ಬರಿ ದೌರ್ಜನ್ಯ ಅಷ್ಟೆ.

ಬನ್ನಿ ಬಿಸಿ ಊಟ ಮಾಡಿ. ಹೇಗೂ ಸಂಜೆಗೆ ಪ್ರಯಾಣ ಅಂತೀರ. ಬೆಂಗಳೂರುವರೆಗೂ ಇಬ್ಬರು ಹೊರಡುತ್ತೀರ, ಅಲ್ಲಿಂದ ಸುರೇಶ ಮೈಸೂರಿಗೆ ಹೋಗುವುದು ತಾನೆ. ಇಬ್ಬರಿಗೂ ತಿಂಡಿ ಪೊಟ್ಟಣ ಬೇರೆ ಬೇರೆ ಕಟ್ಟಿದ್ದೀನಿ. ಬನ್ನಿ ಬನ್ನಿ ಎಂದು ನಿಟ್ಟುಸಿರು ಬಿಡುತ್ತಾ ಒಳನಡೆದರು. ಮೌನಿಯಾಗಿದ್ದ ಸುರೇಶ ಮಾತನಾಡಲು ಶುರುಮಾಡಿದ. ನೀನೇನೇ ಹೇಳು ರಮೇಶ ನೀನು ನಿರಾಶವಾದಿ ಥರಾ ಮಾತಾಡ್ತಾ ಇದ್ದೀಯ. ಮನುಷ್ಯ ಇಷ್ಟು ನಿರಾಶಾವಾದಿಯಾದರೆ ಹೇಗೆ? ನಾವೀಗ ಫ್ಯೂಡಲ್ ಸಿಸ್ಟಮ್‌ನಲ್ಲಿ ಇಲ್ಲಪ್ಪ, ಕಾನೂನು ಕಟ್ಟಳೆ ಎಲ್ಲಾ ಎಲ್ಲರಿಗೂ ಇದೆ. ನಾವು ಹಕ್ಕು ಚಲಾಯಿಸಬೇಕಷ್ಟೆ ಎಂದ ಸುರೇಶ. ಅಯ್ಯಾ ಮಹಾನುಭಾವ ನಾನು ಓದಿದವ, ಸುಸಂಸ್ಕೃತ ಅಂತ ಜನ ನೀವು ಅವರ ಥರಾ (ಆ ಮೂರ್ಖರ ಥರಾ) ಜಗಳಕ್ಕೆ ಬೀಳುವುದೇ? ಅವರು ಕಾಡು ಪ್ರಾಣಿಗಳಿಗಿಂತ ಕಡೆ ಅಂತ ಏನೇನೋ ಪುಕ್ಕಟ್ಟೆ ಉಪದೇಶ ನೀಡುತ್ತಾರೆ. ಬಲ್ಲವನೇ ಬಲ್ಲ ಬೆಲ್ಲದ ಸವಿಯ.

ನೋಡಪ್ಪಾ ಸುರೇಶ ಹೇಗೋ ನೀನು ನಮ್ಮ ಹಳ್ಳಿಗಳು ಅಂತ ಥೀಸಿಸ್ ಬರೆಯಬೇಕೆಂದು ತೀರ್ಮಾನ ಮಾಡಿದ್ದೀಯ. ಈಗ ನಾವು ಅಲ್ಲಿ ಇಲ್ಲಿ ಬೋರ್ಡ್ ಓದಿದೆವಲ್ಲ, ಮಿಟ್ಟೇಮರಿ, ಸಾದಲಿ, ಕಾಟೇನಹಳ್ಳಿ, ಸೋಮೇನಹಳ್ಳಿ, ಬಾಗೇಪಲ್ಲಿ, ಇನ್ನೂ ಏನೇನೋ ಕರ್ನಾಟಕದ ಹಲವಾರು ಹಳ್ಳಿಗಳನ್ನು ಸುತ್ತಿ ಅಲ್ಲಿಯ ಜೀವನವನ್ನು ಸೂಕ್ಷ್ಮವಾಗಿ ಅಭ್ಯಸಿಸಿ, ನಿಷ್ಪಕ್ಷಪಾತವಾಗಿ ನಮ್ಮ ಹಳ್ಳಿಗಳ ಗೋಳನ್ನು ದಾಖಲಿಸು, ಎಲ್ಲಾ ನಿನಗೇ ಅರ್ಥವಾಗುತ್ತೆ. ಇದ್ದದ್ದು ಇದ್ದಂಗೆ ಹೇಳಿದರೆ ಎದ್ದು ಬಂದು ಎದೆಗೇ ಒದ್ದ ಅನ್ನೋ ಗಾದೆ ನೆನಪಿನಲ್ಲಿಟ್ಟುಕೋ. ನಿಜಾಂಶ, ಸತ್ಯಾಂಶಗಳನ್ನು ದಾಖಲಿಸಿದರೆ ನಿನ್ನ ಪಿಹೆಚ್.ಡಿ.ಗೆ ಸಂಚಕಾರ ಬರದೇ ಇರಲಿ. ಈ ಪುಟ್ಟೇಗೌಡ, ಪಟ್ಟೇಗೌಡ, ಹುಲಿ ಪಟ್ಟೇಗೌಡ ಅವರ ಜೊತೆಗೆ ನೀಚಾತಿನೀಚ ತಮ್ಮಣ್ಣಯ್ಯ ಎಲ್ಲಾ ಇರ್ತಾರೆ ಗುರುತಿಸಿ, ಚಿಂತಿಸಿ, ಚರ್ಚಿಸಿ ಬರೆಯೋ ಮಾರಾಯ. ನಿನಗೆ ಶುಭವಾಗಲಿ. ಇಲ್ಲಿಗೆ ಸಾಕು ಇನ್ನೂ ಇನ್ನೂ ಎಷ್ಟೋ ಇದೆ ಈ ಮಂಗಪಲ್ಲಿ ಕಥೆ. ಮುಂದಿನ ವಾರ್ತೆಗಳು ಸ್ವಲ್ಪ ಸಮಯದ ನಂತರ ಅಂತ ದಿನಾ ನೋಡಿ ಕೇಳಿತ್ವಲ್ಲ, ಹಾಗೆ ಈಗ ಊಟ ಸಣ್ಣ ನಿದ್ದೆ ತದನಂತರ ಪ್ರಯಾಣ ಓಕೇನಾ ರೈಟ್ ರೈಟ್ ಬಸ್ಸು.

**ವೆಂಕಟಾಚಲ**
ದೊಡ್ಡ ಭಜನ ಮಂದಿರ ರಸ್ತೆ
ಸರ್ಜಾಪುರ - ೫೬೨ ೧೨೫. ಬೆಂಗಳೂರು ಜಿಲ್ಲೆ



## ಅಂಗಳ

**ನ**ಸುಕಿನಲ್ಲಿ
ಅಜ್ಜ ಸಾರಿಸಿಟ್ಟ ಅಂಗಳದಲ್ಲಿ,
ಮುಂಜಾನೆ, ಅಮ್ಮ ಹಾಕಿದ್ದಾಳೆ-
ಬಣ್ಣ-ಬಣ್ಣದ ರಂಗವಲ್ಲಿ;
ಅಲ್ಲಿ, ನಾನು
ಆಡುತ್ತಿದ್ದೇನೆ-ಕುಂಟಾಪಿಲ್ಲಿ,
ಈ ಉರಿಬಿಸಿಲಿನಲ್ಲಿ!

**ಅಲಕ ತೀರ್ಥಹಳ್ಳಿ**
ಅಲಕ, ನಂ.೮೨, ತ್ಯಾಗರಾಜ ರಸ್ತೆ
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ-೫೭೭ ೪೩೨



# ನನ್ನನ್ನು ಗಾಢವಾಗಿ ತಟ್ಟಿದ, ಕಾಡುವ ವಿಷಯದ ಬಗೆಗೆ ಮಾತ್ರ ಚಿತ್ರ ಮಾಡಲು ಸಾಧ್ಯ

## ಎನ್. ಎಸ್. ಶಂಕರ್

ಎನ್. ಎಸ್. ಶಂಕರ್ ಕನ್ನಡಿಗರಿಗೆ ಪ್ರಜಾವಾಣಿ, ಲಂಕೇಶ್ ಪತ್ರಿಕೆ, ಸುದ್ದಿ ಸಂಗಾತಿ ಪತ್ರಿಕೆಗಳ ಮೂಲಕ ಸಾಕಷ್ಟು ಪರಿಚಿತರಾಗಿದ್ದರು. ನಂತರ ಶೇಕ್ಸ್‌ಪಿಯರ್‌ನ 'ಕಾಮಿಡಿ ಆಫ್ ಎರರ್ಸ್' ಕೃತಿಯನ್ನು ಕನ್ನಡ ಚಲನಚಿತ್ರ ಪ್ರೇಕ್ಷಕರಿಗೆ 'ಉಲ್ಟಾ ಪಲ್ಟಾ' ರೂಪದಲ್ಲಿ ನೀಡಿ ವ್ಯಾಪಕ ಪ್ರಶಂಸೆ ಗಳಿಸಿದರು. ಆದರೆ ಉದ್ಯೋಗಿ ಮಹಿಳೆಯ ಶೋಷಣೆಯ ವಸ್ತುವಿರುವ 'ರಾಂಗ್ ನಂಬರ್' ಯಶಸ್ಸು ಪಡೆಯಲಿಲ್ಲ. ಬದುಕು ಜಟಕಾ ಬಂಡಿ, ಕ್ಷಮಯಾಧರಿತ್ರಿ ಟೆಲಿ ಸೀರಿಯಲ್‌ಗಳು, ದ ಟ್ರೂ ಇಂಡಿಯಾ ಟೆಲಿಫಿಲ್ಮ್, ಮಾಸ್ತಿಯವರ 'ವೆಂಕಟಿಗನ ಹೆಂಡತಿ'ಯ ಕಿರುಚಿತ್ರ ರೂಪಕ, ಕರ್ನಾಟಕದ ದೇವಾಲಯಗಳ ವಾಸ್ತು ಶಿಲ್ಪಗಳ ಬಗೆಗಿನ 'ಮಾನಸೋಲ್ಲಾಸ', ಕಳೆದ ಸಹಸ್ರಮಾನದ ಕೊನೆಯ ನೂರು ವರ್ಷಗಳ ಬಗೆಗಿನ 'ಹಲೋ ೨೦೦೦' ಡಾಕ್ಯುಮೆಂಟರಿಗಳು – ಇವರ ಚಿತ್ರ ನಿರ್ದೇಶಕ ಆಯಾಮದ ಕೆಲವು ಉಲ್ಲೇಖನೀಯ ಮಜಲುಗಳು.

ಎಸ್. ಎಸ್. ಮಂಜುನಾಥ, ಗೌರಿಬಿದನೂರು

ಎನ್. ಎಸ್. ಶಂಕರ್ ಕನ್ನಡಿಗರಿಗೆ ಪ್ರಜಾವಾಣಿ, ಲಂಕೇಶ್ ಪತ್ರಿಕೆ, ಸುದ್ದಿ ಸಂಗಾತಿ ಪತ್ರಿಕೆಗಳ ಮೂಲಕ ಸಾಕಷ್ಟು ಪರಿಚಿತರಾಗಿದ್ದರು. ನಂತರ ಶೇಕ್ಸ್‌ಪಿಯರ್‌ನ 'ಕಾಮಿಡಿ ಆಫ್ ಎರರ್ಸ್' ಕೃತಿಯನ್ನು ಕನ್ನಡ ಚಲನಚಿತ್ರ ಪ್ರೇಕ್ಷಕರಿಗೆ 'ಉಲ್ಟಾ ಪಲ್ಟಾ' ರೂಪದಲ್ಲಿ ನೀಡಿ ವ್ಯಾಪಕ ಪ್ರಶಂಸೆ ಗಳಿಸಿದರು. ಆದರೆ ಉದ್ಯೋಗಿ ಮಹಿಳೆಯ ಶೋಷಣೆಯ ವಸ್ತುವಿರುವ 'ರಾಂಗ್ ನಂಬರ್' ಯಶಸ್ಸು ಪಡೆಯಲಿಲ್ಲ. ಬದುಕು ಜಟಕಾ ಬಂಡಿ, ಕ್ಷಮಯಾಧರಿತ್ರಿ ಟೆಲಿ ಸೀರಿಯಲ್‌ಗಳು, ದ ಟ್ರೂ ಇಂಡಿಯಾ ಟೆಲಿಫಿಲ್ಮ್, ಮಾಸ್ತಿಯವರ 'ವೆಂಕಟಿಗನ ಹೆಂಡತಿ'ಯ ಕಿರುಚಿತ್ರ ರೂಪಕ, ಕರ್ನಾಟಕದ ದೇವಾಲಯಗಳ ವಾಸ್ತು ಶಿಲ್ಪಗಳ ಬಗೆಗಿನ 'ಮಾನಸೋಲ್ಲಾಸ', ಕಳೆದ ಸಹಸ್ರಮಾನದ ಕೊನೆಯ ನೂರು ವರ್ಷಗಳ ಬಗೆಗಿನ 'ಹಲೋ ೨೦೦೦' ಡಾಕ್ಯುಮೆಂಟರಿಗಳು – ಇವರ ಚಿತ್ರ ನಿರ್ದೇಶಕ ಆಯಾಮದ ಕೆಲವು ಉಲ್ಲೇಖನೀಯ ಮಜಲುಗಳು.

ಕನ್ನಡ ಚಲನಚಿತ್ರರಂಗದ ಈಗಿನ ಬಿಕ್ಕಟ್ಟಿನ ಬಗೆಗೆ ಪ್ರತಿಕ್ರಿಯಿಸುತ್ತ 'ಕನ್ನಡ ಭಾಷೆ, ಸಂಸ್ಕೃತಿ ಅಷ್ಟು ಬಲಹೀನವೇನೂ ಅಲ್ಲ. 'ಅಯ್ಯೋ ಹೊಟ್ಟೆ ಹಸೀತಿದೆ, ಅನ್ನ ಕೊಡಿ' ಎನ್ನುವ ಕೆಟ್ಟ ಪರಿಸ್ಥಿತಿಯಂತೂ ಇಲ್ಲ. ನಾವು ಇತಿಹಾಸವನ್ನು – ಕರ್ನಾಟಕ ಐದು ಪ್ರಾಂತ್ಯಗಳ ಪ್ರದೇಶಗಳನ್ನು ಸೇರಿಸಿ ರಚಿಸಲಾಗಿದ್ದು ಎಂಬುದನ್ನು – ಮರೆಯುವಂತಿಲ್ಲ. ಏಳು ವಾರ - ನಾಲ್ಕು ವಾರ ಇವೆಲ್ಲ ಕೂತು ಮಾತಾಡಿ ಪರಿಹರಿಸಬಹುದಾದ ಸಮಸ್ಯೆಗಳು. ಎಪ್ಪತ್ತು ಎಂಭತ್ತರ ದಶಕಗಳಲ್ಲಿ ಕನ್ನಡ ಚಲನಚಿತ್ರರಂಗದಲ್ಲಿ ಏನಾಗುತ್ತಿದೆ ಎಂದು ನೋಡುವಂತೆ ಇಡೀ ರಾಷ್ಟ್ರದ ಗಮನ ಸೆಳೆದಿದ್ದೆವು ಎಂಬುದನ್ನು ನೆನಪಿಸಿಕೊಳ್ಳಬೇಕು' ಎನ್ನುವ ಶಂಕರ್ 'ಸ್ಥಳೀಯ ಎನಿಸಿದ ಸಮಸ್ಯೆಗಳನ್ನು ನಿರ್ದೇಶಕ ದರ್ಶನದಿಂದ ಒಂದು ಸಾರ್ವಲೌಕಿಕ ಅನುಭವವನ್ನಾಗಿಸಬಹುದು' ಎಂಬ ವಿಚಾರದವರು. ತಮ್ಮ ಚಿತ್ರಗಳ ಬಗೆಗೆ ಹೇಳುತ್ತಾ 'ಉಲ್ಟಾ ಪಲ್ಟಾ ಮಾಡಿದ್ದು ಒಂದು ಖುಷಿಯ ಅನುಭವ. ದ ಟ್ರೂ ಇಂಡಿಯಾ ತುಂಬ ಜನಪ್ರಿಯ ಆಯಿತು. 'ಹಲೋ ೨೦೦೦'ದಲ್ಲಿ ಹೊಸ ನಿರೂಪಣಾ ನಮೂನೆ ಪ್ರಯತ್ನಿಸಿದ್ದೆ – ತುಂಬಾ ಶ್ರಮ ಪಡಬೇಕಾಯಿತು, ಆದರೆ ಸ್ವಾರಸ್ಯಕರ ಅನಿಸಿತು, ತೃಪ್ತಿ ಕೊಟ್ಟಿತು' ಎಂದು ಮೆಲುಕು ಹಾಕಿದರು. ತಮ್ಮ ಉದ್ದೇಶಿತ ಚಿತ್ರದ ಬಗೆಗೆ 'ರೈತರ ಆತ್ಮಹತ್ಯೆ ತುಂಬಾ ವಿಶಾಲ ವ್ಯಾಪ್ತಿಯ ವಸ್ತು. ಅದನ್ನು ಮಾಡಿದರೆ ಹಲವು ಅಂಶಗಳು ಸೇರ್ಪಡೆಯಾಗಿ ಹತ್ತು ಚಿತ್ರಗಳನ್ನು ಮಾಡಿದಷ್ಟಾಗುತ್ತದೆ' ಎನ್ನುತ್ತಾರೆ.

'ಸೆನ್ಸಾರ್‌ಶಿಪ್ ಅನ್ನು ದಮನದ ಅಸ್ತ್ರವಾಗಿ ಬಳಸಿದ್ದು ಈಗಾಗಲೇ ಸ್ಪಷ್ಟ. ಹತ್ತು ಕೋಟಿ ಕೊಟ್ಟರೂ ಬಿ.ಜೆ.ಪಿ.ಯಂತಹ ಶಕ್ತಿಗಳಿಗಾಗಿ ಚಿತ್ರ ನಿರ್ಮಿಸಲಾರೆ' ಎಂಬ ದಿಟ್ಟ ನಿಲುವು ಅವರದು. 'ಹೊಸತು'ವಿಗಾಗಿ ಅವರು ನೀಡಿದ ಸಂದರ್ಶನದ ಕೆಲವು ಭಾಗಗಳನ್ನು ಇಲ್ಲಿ ಪ್ರಕಟಿಸಲಾಗಿದೆ.

**ಪ್ರಶ್ನೆ :** ನೀವು ಇತ್ತೀಚೆಗೆ ಐವತ್ತೊಂದನೇ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳ ನಾನ್ ಫೀಚರ್ (ಕಥಾವಸ್ತುವಲ್ಲದ) ಚಿತ್ರಗಳ ವಿಭಾಗದ ತೀರ್ಪುಗಾರರಾಗಿದ್ದಿರಲ್ಲ, ಅಲ್ಲಿಗೆ ಬಂದ ಚಿತ್ರಗಳ ವಸ್ತು ಹೆಚ್ಚಾಗಿ ಏನಿತ್ತು?

**ಉತ್ತರ :** ಅರವತ್ತೊಂದು ಮೂವತ್ತೈದು ಮಿ. ಮೀ. ಚಿತ್ರಗಳು, ೫೪ ವಿಡಿಯೋ ಸಿನಿಮಾಗಳು ಸ್ಪರ್ಧೆಯಲ್ಲಿದ್ದವು. ಬೇರೆ ಬೇರೆ ವಿಭಾಗಗಳು, ಒಟ್ಟು ೨೪ ಅವಾರ್ಡ್‌ಗಳಿದ್ದವು. ಚಿತ್ರಗಳಲ್ಲಿ ತುಂಬಾ ವೈವಿಧ್ಯ ಇತ್ತು – ಒಂದೇ ಥೀಮ್ ಅಥವಾ ಒಂದು ವಿಭಾಗಕ್ಕೆ ಹೆಚ್ಚು ಸ್ಪರ್ಧೆ ಎನ್ನುವಂತಿರಲಿಲ್ಲ. ಭಿನ್ನ ಭಿನ್ನ ವಸ್ತು ಹಾಗೂ ಟ್ರೀಟ್‌ಮೆಂಟ್ (ನಿರೂಪಣೆ) ಕಾಣಸಿಕ್ಕಿತು.

**ಪ್ರ :** ಅರವಿಂದ ಸಿನ್ಹಾರ 'ಕಾಯಾ ಪೂಚೆ ಮಾಯಾ ಸೆ' (ಅತ್ಯುತ್ತಮ ಚಿತ್ರ ಪ್ರಶಸ್ತಿ– ಜಂಟಿಯಾಗಿ) ಬಗೆಗೆ ಹೇಳಿ.

**ಉ :** ಅದನ್ನು ನೋಡುತ್ತಲೇ ಸುಸ್ತಾದೆ (ಬೌಲ್ಡ್ ಓವರ್). ಹೌರಾ ಸ್ಟೇಶನ್ನಿಗೆ ಬರುವ ಜನ, ಅಲ್ಲಿರುವ ಜನ – ಇಷ್ಟೇ ಅದರ ಥೀಮು. ಸಾವಿರಾರು ಜನ – ಅವರ ಮುಖ, ಸ್ವಭಾವ, ನಡವಳಿಕೆ ಇದನ್ನು ರಿಕಾರ್ಡ್ ಮಾಡಿದ್ದಾನೆ. ಅಲ್ಲಿಯ ದನಿ, ಬಣ್ಣಗಳನ್ನು ಅದ್ಭುತವಾಗಿ ಸೆರೆಹಿಡಿದಿದ್ದಾನೆ. ಬರೀ ೧೬ ಎಂ. ಎಂ. ಕ್ಯಾಮೆರಾ ಹಿಡಿದು ಎರಡೂವರೆ ವರ್ಷ ಚಿತ್ರೀಕರಿಸಿದ್ದಾರೆ. ೮೮ ನಿಮಿಷಗಳ ಅವಧಿಯಲ್ಲಿ ಒಂದೂವರೆ ನಿಮಿಷದ ಇಂಟರ್‌ವ್ಯೂ (ಸಂದರ್ಶನ) ಬಿಟ್ಟರೆ ಒಂದು ಕಥೆ, ಕಾಮೆಂಟರಿ, ಘಟನೆ, ಡ್ರಾಮಾ ಏನೂ ಇಲ್ಲ. 'ಬರೀ ಒಂದು ಕ್ಯಾಮೆರಾ ಕೊಡು ಸಾಕು, ಒಂದು ಚಿತ್ರಾನ ಸೃಷ್ಟಿಸ್ತೀನಿ' ಎಂಬಂಥ ಸಾಹಸ ಇಲ್ಲಿದೆ.

ನಾನಂತೂ ಭಾರತೀಯ ಸಿನಿಮಾದಲ್ಲಿ ಇಂತಹ ಪ್ರಯತ್ನಾನ ನೋಡಿರಲಿಲ್ಲ. ಇದರ **ಶೀರ್ಷಿಕೆ ಕೂಡ ಯುಕ್ತ (apt)** ಅನಿಸಿತು – ಅಲ್ಲಿಯ ಒಬ್ಬ ಪೋರ್ಟರ್ ಹಾಡುವ ಭೋಜ್‌ಪುರಿ ಜಾನಪದ ಗೀತೆಯ ಸಾಲು ಇದು. ಆತ್ಮ ದೇಹವನ್ನು ಬಿಟ್ಟು ಹೋಗುವಾಗ ಅದು ಕೇಳುತ್ತಂತೆ 'ನಾವು ಮತ್ತೆ ಭೇಟಿಯಾಗುವುದು ಯಾವಾಗ ?'

**ಪ್ರ :** ಉತ್ತಮವಾಗಿದ್ದೂ ಅವಾರ್ಡ್ ಪಡೆಯದ ಚಿತ್ರಗಳು ?

**ಉ :** 'ರನ್ ಫಾರ್ ದಿ ಹಾರ್ಟ್' ಒಬ್ಬ ರೇಗೋ, ಕೂಗಾಡೋ ಸ್ವಭಾವದ ಡಾಕ್ಟರ್. ಅವನಿಗೆ ಒಂದಿನ ಹಾರ್ಟ್ ಅಟ್ಯಾಕ್ (ಹೃದಯಾಘಾತ) ಆಗುತ್ತೆ. ಜೀವನಶೈಲಿ ಬದಲಿಸ್ಕೋಬೇಕು ಅಂತ ಅನಿಸಿ ದಿನಾ ಓಡಕ್ಕೆ ಶುರು ಮಾಡ್ತಾನೆ – ವಾರಕ್ಕೆ ಸುಮಾರು ೮೦ ಕಿಮೀ. ಇದರಿಂದ ಅವನ ಮನೋಭಾವ, ವ್ಯಕ್ತಿತ್ವಗಳೇ ಬದಲಾಗಿಬಿಡುತ್ತವೆ. ಉಲ್ಲಾಸಚಿತ್ತದ, ಸ್ನೇಹಶೀಲ ಡಾಕ್ಟರಾಗುತ್ತಾನೆ. ಒಬ್ಬ ವೈದ್ಯ ತನ್ನನ್ನು ಮೊದಲು ಟ್ರೀಟ್ ಮಾಡಿಕೊಂಡು, ಅದರಿಂದ ತನ್ನ ಪೇಷೆಂಟ್‌ಗಳಿಗೆ ಉತ್ತಮ ಚಿಕಿತ್ಸೆ ನೀಡಬಲ್ಲ ಎಂಬುದನ್ನು ಇನ್‌ಫಾರ್ಮಲ್ (ಅನೌಪಚಾರಿಕ) ರೀತಿಯಲ್ಲಿ ನಿರೂಪಿಸಿದ್ದಾರೆ. ತಾಂತ್ರಿಕವಾಗಿ ಹದ ಇಲ್ಲ ಎನಿಸಿದರೂ ಈ ಚಿತ್ರದ ಆತ್ಮ ನಮ್ಮನ್ನು ತಟ್ಟುತ್ತದೆ ( ನಿರ್ದೇಶಕ ಬಿ. ಪಿ. ತ್ರಿಪಾಠಿ).

ಇನ್ನೊಂದು 'ಕಶಿಶ್'. ಇಬ್ಬರು ಹುಡುಗಿಯರ ನಡುವೆ ಬೆಳೆಯುವ ಸಂಬಂಧದ ಬಗೆಗಿನದು (ನಿರ್ದೇಶನ : ಮೀನಾಕ್ಷಿ ವಿನಯ್ ರಾಯ್). ಸರಳ, ಆದರೆ ಸಂವೇದನಾಶೀಲವಾಗಿ ಬರೆದು, ನಿರ್ವಹಿಸಿದ್ದಾರೆ.

ಈ ಎರಡು ಚಿತ್ರಗಳಿಗೆ ಅವಾರ್ಡ್ ಯಾಕೆ ಸಿಗಲಿಲ್ಲ ಅಂದ್ರೆ, ಅದರ ನಿರ್ದೇಶಕರಿಗೆ ಬೇರೆ ವಿಭಾಗದಲ್ಲಿ ಪ್ರಶಸ್ತಿ ಸಿಕ್ಕಿತ್ತು ಎಂದಷ್ಟೆ. ಬೇರೆ ಎಲ್ಲಾ ಒಳ್ಳೆ ಚಿತ್ರಗಳಿಗೆ ಸೂಕ್ತ ಪುರಸ್ಕಾರ ಸಿಕ್ಕಿದೆ.

**ಪ್ರ :** ಈ ಸ್ಪರ್ಧೆಯಲ್ಲಿ ಕರ್ನಾಟಕದ ಭಾಗವಹಿಸುವಿಕೆ ಹೇಗಿತ್ತು ?

**ಉ :** ಒಂದೇ ಒಂದು ಫಿಲ್ಮ್ ಇತ್ತು. 'ದಿ ಮಾರ್ಕೆಟ್' ಅಂತ. ಐ. ಶೇಷಾದ್ರಿ ಅವರದು. ಎಂಟು ನಿಮಿಷದ ಈ ಮೂಕ (ಸೈಲೆಂಟ್) ಚಿತ್ರದಲ್ಲಿ ೨-೩ ಜನ ದನ ನೋಡ್ಬೇಕು ಅಂತ ಸಂತೇಗೆ ಬರ್ತಾರೆ, ಇನ್ನು ಒಂದು ಗುಂಪು ವಧು ಆಯ್ಕೆಗೆ ಅಂತ ಒಂದು ಮನೇಗೆ ಬರ್ತಾರೆ. ಇವೆರಡಕ್ಕೂ ಒಂದು ಸಾದೃಶ್ಯ (ಅನಾಲಜಿ) ಕಲ್ಪಿಸಕ್ಕೆ ಹೋಗಿದ್ದಾರೆ. ಇದರ ಅಂತ್ಯವನ್ನು ಪ್ಯಾನೆಲ್‌ನಲ್ಲಿ ನನ್ನ ಜೊತೆಯಲ್ಲಿದ್ದವರು 'ಒಂದು ಜೋಕನ್ನು ತುಂಬ ದೂರ ಒಯ್ದಂತೆ, ಅತಿಯಾಯಿತು' ಎಂದು ಅಭಿಪ್ರಾಯಪಟ್ಟರು. ಹೆಣ್ಣನ್ನು ಬತ್ತಲೆ ಮಾಡಿ ನೋಡುವಂತಹ ವಿಶುಯಲ್ಸ್ ಇತ್ತು – ಹಾಗೆ ನಡೆಯುವುದಿಲ್ಲವಲ್ಲ! ಸ್ಪರ್ಧೆಯ ಸಾಮಾನ್ಯ ಮಟ್ಟ ತುಂಬ ಎತ್ತರದ್ದಾಗಿತ್ತು, ಹಾಗಾಗಿ ಈ ಚಿತ್ರ ಮೊದಲ ಸುತ್ತಿನಲ್ಲೇ ಹೊರಕ್ಕೆ ಹೋಯಿತು.

ಇನ್ನೊಂದು ಚಿತ್ರ 'ದ ಎಯಟೀಂಥ್ ಎಲಿಫೆಂಟ್'. ಪರಿಸರ ಮತ್ತು ಸಂರಕ್ಷಣೆ ವಿಭಾಗದಲ್ಲಿ ಪ್ರಶಸ್ತಿ ಪಡೆಯಿತು (ರಜತ ಕಮಲ; ನಿ : ಸಾವಿತ್ರಿ ದಿವಾಕರನ್). ಇದಕ್ಕೆ ಸಂಬಂಧಪಟ್ಟವರು ಕರ್ನಾಟಕದಲ್ಲಿ ಕೆಲಸ ಮಾಡುತ್ತಿದ್ದಾರೆ ಅಂತ ಆಮೇಲೆ ತಿಳಿಯಿತು.

**ಪ್ರ :** ಈ ಬಾರಿ ವೀಡಿಯೋಗಳಿಗೂ ಪ್ರವೇಶ ಕಲ್ಪಿಸಿದ್ದರ ಪರಿಣಾಮ ಏನು ?

**ಉ :** ಬರೀ ಒಂದು ವಾರ ಟೈಮಿದ್ದರೂ ೫೪ ಎಂಟ್ರಿಗಳು ಬಂದವು. ಮುಂದಿನ ವರ್ಷ ಅವೇ ಜಾಸ್ತಿಯಾಗ್ಬಿಡ್ತವೆ. ಅದಕ್ಕೇ ನಾವು ಫಿಲ್ಮ್ ಹಾಗೂ ವಿಡಿಯೋಗಳಿಗೆ ಪ್ರತ್ಯೇಕ ಜ್ಯೂರಿಗಳು, ಅವಾರ್ಡ್‌ಗಳು ಇರಬೇಕು ಅಂತ ಶಿಫಾರಸು ಮಾಡಿದ್ದೀವಿ. ವಿಡಿಯೋಗಳನ್ನು ತಯಾರಿಸುವುದು ಸುಲಭ. (ಅದಕ್ಕೇ ಇರಬೇಕು) ಆ ಚಿತ್ರಗಳಲ್ಲಿ ೩೫ ಎಂ. ಎಂ. ಫಿಲ್ಮ್‌ಗಳಿಗೆ ಹೋಲಿಸಿದರೆ ಹೆಚ್ಚು ಸಾಹಸ ಹಾಗೂ ಪರಿಶೋಧಕ ಗುಣಗಳು ಕಾಣಿಸಿದವು. ಉದಾಹರಣೆಗೆ 'ವೇ ಬ್ಯಾಕ್ ಹೋಂ' ಅಂತ ಒಂದು ಫಿಲ್ಮ್ ಇತ್ತು. ವಿಭಜನೆಯ ಸಮಯದಲ್ಲಿ ಜೀವ ಉಳಿಸಿಕೊಳ್ಳಲು ಭಾರತದೊಳಕ್ಕೆ ಬಂದು ಆಶ್ರಯ ಪಡೆದಿದ್ದ ಕುಟುಂಬವನ್ನು ಸ್ವಾತಂತ್ರ್ಯದ ಬೆಳ್ಳಿ ಹಬ್ಬದ ಗಿಫ್ಟ್ ಎಂದು ಬಾಂಗ್ಲಾದೇಶದ ಅವರ ಹುಟ್ಟೂರನ್ನು ನೋಡಲು ಕೊಂಡೊಯ್ಯುವ ವಸ್ತು. ಇದನ್ನು ೩೫ ಎಂ.ಎಂ.ನಲ್ಲಿ ಮಾಡಬೇಕೆಂದಿದ್ದರೆ ಆಗುತ್ತಲೆ ಇರಲಿಲ್ಲ. ಮಿನಿ ಡಿವಿಡಿ, ಹ್ಯಾಂಡಿಕ್ಯಾಂ ಕೊಂಡೊಯ್ಯಲು ಸುಲಭ. ನಿರ್ಮಾಣದ ಖರ್ಚೂ ಕಡಿಮೆ. ಪ್ರತಿಭೆ ಇದ್ದು ದುಡ್ಡು ಇಲ್ಲದವರೂ ಇಂತಹ ಸಿನಿಮಾ ಮಾಡಬಹುದು. 'ಎಂಟ್ರಿಗಳು ಸಿಕ್ಕಾಪಟ್ಟೆ ಆಗಬಾರದು' ಎಂಬ ದೃಷ್ಟಿಯಿಂದ 'ಒಂದು ನಿರ್ಮಾಣ ಸಂಸ್ಥೆಗೆ ಎರಡು ಎಂಟ್ರಿ ಮಾತ್ರ' ಎಂಬ ಶಿಫಾರಸನ್ನು ನೀಡಿದ್ದೇವೆ. ೩೫ ಎಂ. ಎಂ. ಚಿತ್ರ ನಿರ್ಮಾಣ ತುಂಬ ತೊಡಕಿನದ್ದು. ಎರಡರ ಶಿಸ್ತೂ ಬೇರೆ ಬೇರೆ. 'ಒಂದೇ ಜ್ಯೂರಿ ಇಟ್ಟರೆ ಕ್ರಮೇಣ ೩೫ ಮಿ.ಮಿ. ನಾಶವಾಗಿಬಿಡಬಹುದು' ಎಂದರು ಜ್ಯೂರಿ ಛೇರ್ಮನ್ ಭೀಮ್‌ಸೇನ್. ಗಿರೀಶ್ ಕಾಸರವಳ್ಳಿಯವರೂ 'ಪ್ರತ್ಯೇಕ ಇರುವುದು ಒಳ್ಳೆಯದು' ಎನ್ನುತ್ತಾರೆ.

**ಪ್ರ :** 'ಸೆನ್ಸಾರ್ ಸರ್ಟಿಫಿಕೇಟ್ ಇರಬೇಕು' ಎಂಬ ನಿಯಮ ಇತ್ತೀಚೆಗೆ ವಿವಾದಕ್ಕೆ ಎಡೆಮಾಡಿಕೊಟ್ಟಿದೆ. ಇಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದಂತೆ ಪ್ರಚೋದನಾತ್ಮಕತೆಯನ್ನು ನಿಯಂತ್ರಿಸುವುದು ಹೇಗೆ ಎಂಬ ಪ್ರಶ್ನೆಯೂ ಇದೆ, ಅಲ್ಲವೆ ?

**ಉ :** ವೈಯಕ್ತಿಕವಾಗಿ ಹೇಳುವುದಾದರೆ ಡಾಕ್ಯುಮೆಂಟರಿಗಳಿಗೆ ಸೆನ್ಸಾರ್‌ಶಿಪ್ ಇರಬಾರದು. ಆದರೆ ಇದು ಅಷ್ಟು ಸರಳ ಪ್ರಶ್ನೆ ಅಲ್ಲ. ಒಂದು ಕಾನೂನು ಇರುವಾಗ ಅದನ್ನು ಪಾಲಿಸಬೇಕು. ಆದರೆ ಸೆನ್ಸಾರ್ ಕಡ್ಡಾಯ ಮಾಡಿದ ಹಿನ್ನೆಲೆ ಪ್ರಶ್ನಾರ್ಹ. ಈ ಸಂಬಂಧದಲ್ಲಿ ಚರ್ಚಿಸಬೇಕಾದ ಹಲವು ಅಂಶಗಳಿವೆ. ಫೆಸ್ಟಿವಲ್ (ಉತ್ಸವ)ಗಳಿಗೆ ಬರುವವರು ಆಯ್ದ ಪ್ರೇಕ್ಷಕ ವರ್ಗ. ಡಾಕ್ಯುಮೆಂಟರಿಗಳಿಗೆ ಕಮರ್ಷಿಯಲ್ ಚಿತ್ರಗಳನ್ನು ನೋಡುವಷ್ಟು ಜನರೆಲ್ಲಿ ಬರುತ್ತಾರೆ ? ಆದರೂ ಸಾಮಾನ್ಯ ಪ್ರೇಕ್ಷಕರಿಗೆ ತೋರಿಸುವಾಗ ತೀರಾ ಸಂವೇದನಾಶೀಲ ವಿಷಯಗಳ ಚಿತ್ರಣವನ್ನು ಹೇಗೆ ಮಾನಿಟರ್ ಮಾಡುವುದು ಎಂಬುದೂ ಒಂದು (ಮುಖ್ಯ) ಪ್ರಶ್ನೆಯೇ... ಭಾಷಣಗಳೂ ಪ್ರಚೋದಿಸಬಹುದು, ಹಾಗೆಂದು ಅದಕ್ಕೂ ಸೆನ್ಸಾರ್‌ಶಿಪ್ ಇರಬೇಕೆ ? ನಾವಂತೂ 'ಡಾಕ್ಯುಮೆಂಟರಿಗಳಿಗೆ ಸೆನ್ಸಾರ್ ಸರ್ಟಿಫಿಕೇಟ್ ಬೇಡ' ಎಂದು ಶಿಫಾರಸು ಮಾಡಿದ್ದೀವಿ.

**ಪ್ರ :** ಬುದ್ಧದೇವ್ ದಾಸ್‌ಗುಪ್ತ ಅವರು ತಮ್ಮ ಇತ್ತೀಚಿನ ಸಂದರ್ಶನ ಒಂದರಲ್ಲಿ ತಾನು ಸಾಕ್ಷ್ಯಚಿತ್ರ ಯಾಕೆ ಮಾಡುತ್ತೇನೆ ಅಂತ ಹೇಳಿದ್ದಾರೆ : ೧) ಸಾಮಾನ್ಯವಾಗಿ ಮಾಡುವ (ಫೀಚರ್) ಫಿಲ್ಮ್‌ಗಳ ನಡುವೆ ಡಾಕ್ಯುಮೆಂಟರಿ ನಿರ್ಮಾಣ ರಿಲಾಕ್ಸಿಂಗ್ ಆಗಿರುತ್ತೆ ಮತ್ತು ೨) ಅದು ಅಂತಿಮವಾಗಿ ಯಾವ ರೂಪ ತೆಗೆದುಕೊಳ್ಳುತ್ತೆ ಅನ್ನೋದು ಅನಿಶ್ಚಿತವಾಗಿರುತ್ತೆ. ಈ ವಿಷಯದಲ್ಲಿ ನಿಮ್ಮ ಅನುಭವ/ಅಭಿಪ್ರಾಯ ಏನು ?

**ಉ :** ಅದು ಅವರವರ ಅಭಿಪ್ರಾಯ. ನಾನು ಎರಡನ್ನೂ ಗಂಭೀರವಾಗೇ ತೆಗೆದುಕೊಳ್ಳುತ್ತೇನೆ. – ಕೆಲಸ ಹಾಗೂ ಮನೋಭಾವಗಳಲ್ಲಿ ವ್ಯತ್ಯಾಸ ಇರುವುದಿಲ್ಲ. ಹೆಚ್ಚಿನ ಡಾಕ್ಯುಮೆಂಟರಿ ಚಿತ್ರಗಳು ಅಂತಿಮವಾಗಿ ರೂಪ ಪಡೆಯುವುದು ಎಡಿಟಿಂಗ್ ಟೇಬಲ್ ಮೇಲೆಯೇ ಎಂಬುದು ನಿಜ. ಈ ಅನಿಶ್ಚಿತತೆ ಪ್ರೇರಕ (exciting) ಕೂಡ. ಆದರೆ ನೀವು ನಿರೀಕ್ಷಿಸಿಯೇ ಇರದುದು ಏನೋ ನಡೆದುಬಿಡತ್ತೆ ಎಂದೇನೂ ಅಲ್ಲ, ನಿಮ್ಮ ಸಾಮಾನ್ಯ ಕಲ್ಪನೆಯ/ಚೌಕಟ್ಟಿನ ಒಳಗೇ ಕೆಲವು ವಿವರಗಳು ಸೇರ್ಪಡೆಯಾಗುತ್ತವೆ/ಬದಲಾಗುತ್ತವೆ ಅಷ್ಟೆ. ಚಲನಚಿತ್ರ, ಸಾಕ್ಷ್ಯಚಿತ್ರ ಎರಡರಲ್ಲೂ ಸೃಜನಶೀಲತೆಗೆ ಅವಕಾಶ ಇದೆ. ಫೀಚರ್ ಫಿಲ್ಮ್‌ನಲ್ಲಿ ಸ್ಕ್ರಿಪ್ಟ್ ಎನ್ನುವುದು ಒಂದು ಅಗತ್ಯ. ಚಾರ್ಲಿ ಚಾಪ್ಲಿನ್ ಚಿತ್ರಗಳೆಲ್ಲಾ ಹೆಚ್ಚಾಗಿ ಇಂಪ್ರೂವೈಸೇಷನ್ (ಆಶುತ್ವ/ಸಮಯಸ್ಫೂರ್ತಿ) ಆಧರಿಸಿದವು. ಈಗ ಬರೀ ಅದನ್ನೇ ನಂಬಿಕೊಂಡರೆ ಸಿನಿಮಾ ಮಾಡಲಾಗುವುದಿಲ್ಲ. ಡಾಕ್ಯುಮೆಂಟರಿಗಳಿಗೆ ವಿವಿಧ ಸೌಲಭ್ಯಗಳನ್ನು ಹೊಂದಿಸುವ ರಗಳೆ ಇರುವುದಿಲ್ಲ. ಅದು ಒಂದು ಪಯಣ ಇದ್ದಂತೆ. ನೀವು ಒಬ್ಬರನ್ನು ಮಾತಾಡಿಸಿದಾಗ ಅವರು ಹೇಳಿದ ಅಂಶಗಳಿಗೆ ಸಂಬಂಧಿಸಿದ ಏನನ್ನೋ ಶೂಟ್ ಮಾಡಬೇಕು ಅನಿಸುತ್ತದೆ. ನೀವು ಯೋಚಿಸಿರದ ಮತ್ತೇನನ್ನೋ ಸೇರಿಸಬೇಕು ಎಂದೂ ಅನಿಸಬಹುದು. ಅಂತಿಮವಾಗಿ ಎಡಿಟಿಂಗ್‌ನಲ್ಲಿ ಸರಿಯಾದ ರೂಪ ಸಿದ್ಧವಾಗುತ್ತದೆ.

**ಪ್ರ :** ನೀವು ಸಾಕಷ್ಟು ದೀರ್ಘಕಾಲ ಪತ್ರಕರ್ತರಾಗಿದ್ದಿರಿ. ಆ ಅನುಭವ ಚಿತ್ರ ನಿರ್ದೇಶನದಲ್ಲಿ ಹೇಗೆ ನೆರವಿಗೆ ಬರ್‍ತಾ ಇದೆ ?

**ಉ :** ಡಾಕ್ಯುಮೆಂಟರಿ ಮಾಡುವುದರಲ್ಲಿ ಜರ್ನಲಿಸಂ ಹಿನ್ನೆಲೆ ನಿಜಕ್ಕೂ ಸಹಾಯಕ ಆಗಿದೆ. ದೃಷ್ಟಿಕೋನ, ಬೇರೆ ಬೇರೆ ವಸ್ತು ವಿಷಯಗಳ ಅಂತರ್ ಸಂಬಂಧ, ಹುಡುಕಾಟ – ಇವುಗಳ ಬಗೆಗೆ ಪತ್ರಿಕೋದ್ಯಮದಲ್ಲಿ ತರಬೇತಿ ಸಿಕ್ಕಿರುತ್ತದೆ. ಫೀಚರ್ ಫಿಲ್ಮ್‌ಗೆ ಇದು

ಒಂದು ವಿಶಾಲಾರ್ಥದಲ್ಲಷ್ಟೇ ನೆರವಾಗಬಹುದು. ಅನ್ವೇಷಕ ಕಣ್ಣು ಇರುತ್ತದಲ್ಲ, ಅದು ಜರ್ನಲಿಸಂನಿಂದ ಬಂದಿದೆ ಎಂದರೆ ಅಡ್ಡಿಯಿಲ್ಲ, ಸಾಹಿತ್ಯದಿಂದಲೂ ಬರಬಹುದು.

ಪ್ರ: 'ಉಲ್ಟಾ ಪಲ್ಟಾ' ಗೆದ್ದು 'ರಾಂಗ್ ನಂಬರ್' ಸೋತ ಬಗ್ಗೆ ಏನು ಹೇಳ್ತೀರಿ ?

ಉ: ಗಾಂಧಿನಗರದವರು ಉಲ್ಟಾ ಪಲ್ಟಾ ಸೋಲುತ್ತೆ ಅಂತಾನೇ ಅನ್ಕೊಂಡಿದ್ದರು. ಆದರೆ ಅದರ ತಾಜಾತನ ಹಾಗೂ ಕನ್ನಡದಲ್ಲಿ ಫುಲ್-ಲೆಂಗ್ತ್ ಕಾಮೆಡಿ ಇರಲಿಲ್ಲ, ಆದ್ದರಿಂದ ಗೆದ್ದಿತೇನೋ. 'ರಾಂಗ್‌ನಂಬರ್' ಬಹುಶಃ ಜನಗಳ ಅಭಿರುಚಿಗೆ ತುಂಬಾ ಸೀರಿಯಸ್ ಆಯಿತೇನೋ.

ಪ್ರ: ಡಾಕ್ಯುಮೆಂಟರಿಗಳಿಗೆ ಸ್ವರೂಪ ಹಾಗೂ ಸಂಖ್ಯೆ ಈ ಎರಡೂ ದೃಷ್ಟಿಗಳಿಂದ ಸೀಮಿತ ಪ್ರೇಕ್ಷಕ ವರ್ಗ ಇರಲು ಏನು ಕಾರಣ ? ಕೆಲವು ವಸ್ತುಗಳ ಬಗೆಗೆ (ಉದಾ : ಗುಜರಾತ್) ಹೆಚ್ಚು ಸಂಖ್ಯೆಯ ಕಿರು/ಸಾಕ್ಷ್ಯಚಿತ್ರಗಳು ಬರುತ್ತಿವೆಯಲ್ಲ?

ಉ: ಜನರಿಗೆ ಮನರಂಜನೆ ಬೇಕು. ಅದು ಇಲ್ಲದ್ದನ್ನು ತಿರಸ್ಕರಿಸುತ್ತಾರೆ. ಡಾಕ್ಯುಮೆಂಟರಿಗಳಲ್ಲೂ ಮನರಂಜನೆ ಇರಬಹುದು ಎಂದಾದರೆ ಅದರ ಸ್ವರೂಪವನ್ನು ಚರ್ಚಿಸಬೇಕಾಗುತ್ತದೆ. ಇನ್ನೊಂದು ಕಾರಣ – ಔಟ್‌ಲೆಟ್‌ಗಳೇ ಇಲ್ಲದಿರುವುದು. ಎಲ್ಲಿ ತೋರಿಸ್ತೀರಿ – ಮೂಲ ಸೌಕರ್ಯವೇ ಇಲ್ಲ. ಚಾನೆಲ್‌ಗಳನ್ನು ನಂಬಿಕೊಳ್ಳಬೇಕು, ಆದರೆ ಅವರು ಯಾವುದೋ (ಅ)ವೇಳೆಯಲ್ಲಿ ತೋರಿಸ್ತಾರೆ. ಒಂದು ವಿಷಯ ಡಾಕ್ಯುಮೆಂಟರಿ ನೋಡುವವರಿಗೆ ಗೊತ್ತಾಗ್ದೆ ಇರಬಹುದು – ಮಾರ್ಕೆಟಿಂಗ್ ದೃಷ್ಟಿಯಿಂದ ನೆಟ್‌ವರ್ಕ್‌ಗಳು ಅಸ್ತಿತ್ವದಲ್ಲಿರುತ್ತವೆ. ಈಗ ಗೋಧ್ರಾ ನಂತರದ ಸ್ಥಿತಿ ಬಗೆಗೆ ಚಿತ್ರ ಮಾಡಿದರೆ ಫಂಡ್ಸ್ ಸಿಗಬಹುದು ಎಂದು ಗೊತ್ತಾದಾಗ ಮಾಮೂಲಿ ನಿಯೋಜಿತ ಸಾಕ್ಷ್ಯಚಿತ್ರ ಮಾಡುವವರೂ ಆ ಬಗೆಗೆ ಚಿತ್ರ ಮಾಡುತ್ತಾರೆ. ಒಬ್ಬರೋ ಇಬ್ಬರೋ ಪ್ರತಿಭಾನ್ವಿತರು ಆ ಬಗೆಗೆ ಉತ್ತಮ ಚಿತ್ರ ಮಾಡಿರಬಹುದು. ಆದರೆ ತಮಗೆ ಬದ್ಧತೆ, ಅಸಲಿತನ, ಹೊಸದಾಗಿ ಹೇಳುವುದು ಏನಾದರೂ ಇದೆಯೇ ಇವುಗಳನ್ನು ಪರಿಗಣಿಸದೆ ಹತ್ತು ಜನ ಅದನ್ನೇ ಮಾಡಿದರೆ ? ಕೋಮುವಾದದ ವಿರೋಧ ಈಗ ಫ್ಯಾಷನಬಲ್ ಆಗಿ ಬಿಟ್ಟಿದೆ. ಬೇರೆಯವರ ಫುಟೇಜ್ ಎರವಲು ಪಡೆಯುವುದರಲ್ಲಿ ಏನೂ ತಪ್ಪಿಲ್ಲ. ಆದರೆ ನಿಮಗೆ ಕಾಣ್ಕೆ ಇದ್ದು ಅದನ್ನು ಸೃಷ್ಟಿಸಿದ್ದೀರಾ ಮತ್ತು ನಿಮ್ಮ ಮೂಲ ಉದ್ದೇಶ ಪ್ರಾಮಾಣಿಕವಾದದ್ದೇ ಎಂಬುದು ಮುಖ್ಯ. ಒಬ್ಬ ಸ್ವತಂತ್ರ ಚಿತ್ರ ನಿರ್ದೇಶಕನಾಗಿ ನಾನು ನನ್ನನ್ನು ಗಾಢವಾಗಿ ತಟ್ಟಿದ, ಕಾಡುವ ವಿಷಯದ ಬಗೆಗೆ ಮಾತ್ರ ಚಿತ್ರ ಮಾಡಲು ಸಾಧ್ಯ. ಒಂದು ಪ್ರಚಾರಾಂದೋಲನದ ಭಾಗವಾಗಿ ಚಿತ್ರ ಮಾಡಲು ಒಪ್ಪಬೇಕೆ – ಇದು ಅವರವರ ವ್ಯಕ್ತಿಗತ ಆಯ್ಕೆಗೆ ಬಿಟ್ಟಿದ್ದು.

ಪ್ರ: ಫೀಚರ್ ಫಿಲ್ಮ್‌ಗಳು ಕೈಗೆತ್ತಿಕೊಳ್ಳಲಾಗದ ವಸ್ತುಗಳನ್ನು ಡಾಕ್ಯುಮೆಂಟರಿಗಳು ಸರಿಯಾಗಿ ಚಿತ್ರಿಸಬಲ್ಲವು ಎನ್ನುತ್ತಾರೆ. ಇಂತಹ ಚಿತ್ರಗಳನ್ನು ವ್ಯಾಪಕವಾಗಿ ಪ್ರೇಕ್ಷಕರಿಗೆ ತಲುಪಿಸಲು ಬೆಂಗಳೂರಿನಲ್ಲಿರುವ ಕಿರು/ಸಾಕ್ಷ್ಯಚಿತ್ರ ನಿರ್ಮಾಪಕರು ಏನು ಮಾಡಬೇಕು ?

ಉ: ಇದಕ್ಕೆ ನನ್ನ ಬಳಿ ಉತ್ತರ ಇಲ್ಲ. ವೈಯಕ್ತಿವಾಗಿ ನಾನು ರೈತರ ಆತ್ಮಹತ್ಯೆ ಬಗೆಗೆ ಒಂದು ಡಾಕ್ಯುಮೆಂಟರಿ ಮಾಡಬೇಕೆಂದು ಕಳೆದ ೮-೯ ತಿಂಗಳಿಂದ ಸಿದ್ಧತೆ ನಡೆಸಿದ್ದೇನೆ. ಆದರೆ ಹಣಕ್ಕೆ ವ್ಯವಸ್ಥೆ ಮಾಡಿಕೊಳ್ಳಲು ಆಗಿಲ್ಲ. ಈ ಚಿತ್ರ ತಯಾರು ಆದಮೇಲೆ ಅದನ್ನು ಜನರ ಮಧ್ಯೆ ತೆಗೆದುಕೊಂಡು ಹೋಗಬೇಕೆಂದರೆ ನನ್ನ ಬೇರೆ ಬೇರೆ ಸ್ಥಳಗಳಲ್ಲಿರುವ ಸ್ನೇಹಿತರು, ಕೆಲವು ಸರ್ಕಾರೇತರ ಸಂಘಟನೆಗಳು ಇವುಗಳ ನೆರವು ಪಡೆದು ನಾನೇ ಪ್ರಯತ್ನಿಸಬೇಕಷ್ಟೆ. ಸಮಸ್ಯೆಯೊಂದರ ಬಗೆಗೇ ಸಿನಿಮಾ ಮಾಡುವುದು ಕಷ್ಟ. ಟಿ. ವಿ. ಸೀರಿಯಲ್‌ಗಳಲ್ಲಿ ಆಳಕ್ಕೆ ಹೋಗಿರುವುದಿಲ್ಲ, ಹತ್ತು ವಿಷಯಗಳ ಮಧ್ಯೆ ಇದು ಕಳೆದು ಹೋಗಬಹುದು.

ಬೆಂಗಳೂರಿನ ಡಾಕ್ಯುಮೆಂಟರಿ ತಯಾರಕರಲ್ಲಿ ಹೆಚ್ಚಿನವರು ನಿರ್ಮಿಸುವುದು ನಿಯೋಜಿತ ಸಾಕ್ಷ್ಯಚಿತ್ರಗಳನ್ನೇ. ಆದರೆ ಗುಣಮಟ್ಟ ರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಿಸುವಂತಿದೆ. ಅಂಡರ್ ಎಸ್ಟಿಮೇಷನ್ ಜತೆಗೆ ಆಸಕ್ತಿಯೂ ಕಡಿಮೆ ಇರಬಹುದೇನೋ. (ನಾನು ವಾಪಸ್ ಬಂದಮೇಲೆ ಯಾರೂ ಬಂದು ವಿಚಾರಿಸಲಿಲ್ಲ !). ಪರಿಸ್ಥಿತಿಯೂ ಕಷ್ಟಕರ. ಈಗ ಮಲ್ಟಿಪ್ಲೆಕ್ಸ್ ಇತ್ಯಾದಿ ಬಂದರೂ ೧೦೦ ರೂ. ಪ್ರವೇಶಧನ ಇಟ್ಟಾಗ ಯಾರು ಬರುತ್ತಾರೆ ? ಥಿಯೇಟರ್‌ಗಳೇ ಬೇಕೆಂದಿಲ್ಲ – ಬೇರೆ ಯಾವ ರೀತಿ ಪ್ರೇಕ್ಷಕವರ್ಗವನ್ನು ತಲುಪಬೇಕು, ವಿಸ್ತರಿಸಿಕೊಳ್ಳಬೇಕು ಅಂತ ಈ ಚಿತ್ರಗಳ ತಯಾರಕರು ಯೋಚಿಸಬೇಕು. ಬರೀ ಅವಾರ್ಡ್, ಇಂಗ್ಲಿಷ್ ಪತ್ರಿಕೆಗಳ ಪ್ರಶಂಸೆ ಇಷ್ಟಕ್ಕೆ ತೃಪ್ತರಾಗುವವರೇ ಹೆಚ್ಚಿನವರು. ಹೀಗಿರುವಾಗ ಸಂಘಟಿತ ಪ್ರಯತ್ನ ಕಷ್ಟ. ಹೇಗಾದರೂ ಜನರನ್ನು ಮುಟ್ಟಬೇಕು ಎಂದು ವೈಯಕ್ತಿಕವಾಗಿ ಶ್ರಮಿಸಬೇಕಷ್ಟೆ.

**ಎಚ್. ಎಸ್. ಮಂಜುನಾಥ, ಗೌರೀಬಿದನೂರು**
ನಂ. ಎಸ್ ೧೧೩ (ಮಹಡಿ), ಹೋಟೆಲ್ ರುಚಿ ಕಟ್ಟಡ, ಮೊದಲನೇ ಮುಖ್ಯ ರಸ್ತೆ
ಕೋದಂಡರಾಮಪುರ, ಬೆಂಗಳೂರು - ೫೬೦ ೦೦೩

## ಚೌಕ-ಭಾರ

ಭಾರ ಭಾರ
ಚೌಕ ಚೌಕ

ಚೌಕ ಭಾರ
ಭಾರ ಚೌಕ

ಆಡೋಣ ಬಾರ
ಹಾಕೋಣ ಬಾರ
ಚೌಕ ಭಾರ

ಈ ಘಟ್ಟ ಆ ಘಟ್ಟ
ಮನೆಯಿಂದ ಮನೆಗೆ
ಹಾರಿ ತೂರಿ ಕಾಯಿ ಒಡೆದು
ಕಾಯಿ ಹಣ್ಣು
ಮಾಡೋಣ ಬಾರ

ಜೋಡಿಕಾಯಿ, ಒಂಟಿಕಾಯಿ
ಐದ್‌ಮನೆ ಆಟ
ಏಳ್‌ಮನೆ ಆಟ



ಹೊರಗಿಂದ ಒಳಗೆ
ಒಳಗಿಂದ ಹೊರಗೆ

ಹಾರುತ ಜಾರುತ
ಕವಡೆ ಕುಣಿಸುತ
ಹಾಕು ಹಾಕು

ಭಾರ ಹಾಕು ಹಾಕು
ಮತ ಚೌಕ ದಾಟು

ಒಂಟಿ ಕಾಯಿ
ಇಡ್ಬೇಡ ಮರಿ
ಹುಷಾರಾಗಿದ್ದು
ಹಣ್ ಮಾಡ್ಬಿಡು
ಬೇಗನೆ ಘಟ್ಟ ಸೇರ್ಬಿಡು.

**ಜಿ. ಎಸ್. ವಿಶ್ವನಾಥ**
ನಂ. ೬೬೬, ೮ನೇ ಮುಖ್ಯರಸ್ತೆ
೬ನೇ ಅಡ್ಡರಸ್ತೆ, ಆರ್. ಪಿ. ಸಿ.
ಬಡಾವಣೆಬೆಂಗಳೂರು - ೫೬೦ ೦೪೦

# ಚದುರಂಗರ ಬಿಂಬ

ಕನ್ನಡದ ಮಹತ್ವದ ಲೇಖಕರಲ್ಲಿ ಚದುರಂಗರೂ ಒಬ್ಬರು. ಕಾದಂಬರಿ, ಸಣ್ಣಕತೆ, ನಾಟಕ, ರೇಡಿಯೋ ನಾಟಕಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಗಣನೀಯ ಕೊಡುಗೆ ನೀಡಿದ್ದಾರೆ. ಅಲ್ಲದೆ ಚಲನಚಿತ್ರ ರಂಗದಲ್ಲೂ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ.
'ಕುಮಾರ ರಾಮ' (ಐತಿಹಾಸಿಕ), 'ಇಲಿಬೋನು' (ಅಸಂಗತ), 'ಬಿಂಬ' (ಪುರಾಣ, ಆಧುನಿಕ, ಜಾನಪದ ಪರಿಕರಗಳನ್ನೊಳಗೊಂಡಿದೆ) – ಇವು ಚದುರಂಗರ ವಿಶಿಷ್ಟ ನಾಟಕಗಳಾಗಿವೆ. ಆಧುನಿಕ ಕಾಲದ 'ಸ್ತ್ರೀ ಸಂವೇದನೆ' ಹಾಗೂ 'ಮಾನವ ವರ್ತನೆಯ ವೈಲಕ್ಷಣತೆಯ' ಚಿತ್ರಣ 'ಬಿಂಬ' ನಾಟಕದ ವಿಶಿಷ್ಟ ಭಿತ್ತಿಯಾಗಿದೆ. ಆದ್ದರಿಂದ ಮನೋವಿಶ್ಲೇಷಣೆಯ ಹಿನ್ನೆಲೆಯೊಂದಿಗೆ 'ಬಿಂಬ' ನಾಟಕ ಕುರಿತ ಚರ್ಚೆ ಈ ಲೇಖನದ ಉದ್ದೇಶವಾಗಿದೆ.

ಎಸ್. ಗೀತಾ

ಕನ್ನಡದ ಮಹತ್ವದ ಲೇಖಕರಲ್ಲಿ ಚದುರಂಗರೂ ಒಬ್ಬರು. ಕಾದಂಬರಿ, ಸಣ್ಣಕತೆ, ನಾಟಕ, ರೇಡಿಯೋ ನಾಟಕಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಗಣನೀಯ ಕೊಡುಗೆ ನೀಡಿದ್ದಾರೆ. ಅಲ್ಲದೆ ಚಲನಚಿತ್ರ ರಂಗದಲ್ಲೂ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ.

'ಕುಮಾರ ರಾಮ' (ಐತಿಹಾಸಿಕ), 'ಇಲಿಬೋನು' (ಅಸಂಗತ), 'ಬಿಂಬ' (ಪುರಾಣ, ಆಧುನಿಕ, ಜಾನಪದ ಪರಿಕರಗಳನ್ನೊಳಗೊಂಡಿದೆ) – ಇವು ಚದುರಂಗರ ವಿಶಿಷ್ಟ ನಾಟಕಗಳಾಗಿವೆ. ಆಧುನಿಕ ಕಾಲದ 'ಸ್ತ್ರೀ ಸಂವೇದನೆ' ಹಾಗೂ 'ಮಾನವ ವರ್ತನೆಯ ವೈಲಕ್ಷಣತೆಯ ಚಿತ್ರಣ 'ಬಿಂಬ' ನಾಟಕದ ವಿಶಿಷ್ಟ ಭಿತ್ತಿಯಾಗಿದೆ. ಆದ್ದರಿಂದ ಮನೋವಿಶ್ಲೇಷಣೆಯ ಹಿನ್ನೆಲೆಯೊಂದಿಗೆ 'ಬಿಂಬ' ನಾಟಕ ಕುರಿತ ಚರ್ಚೆ ಈ ಲೇಖನದ ಉದ್ದೇಶವಾಗಿದೆ.

'ಬಿಂಬ' ನಾಟಕ 'ಪುರಾಣ ಮತ್ತು ವರ್ತಮಾನ' ಎರಡೂ ನೆಲೆಗಳಲ್ಲಿ ನಡೆಯುತ್ತದೆ. ಇಲ್ಲಿ ಭಾಗವತರು ಪುರಾಣದ ರಾಮ-ಸೀತೆಯರ ಕತೆಯನ್ನು ಆಧರಿಸಿದ ನಾಟಕವನ್ನಾಡುವ ತಯಾರಿಯಲ್ಲಿದ್ದಾಗಲೇ ಆಧುನಿಕ ಕಾಲದ ಸೀತಮ್ಮನ ಪ್ರವೇಶವಾಗಿ ಆ ಮೂಲಕ ಭೂತಕಾಲದ ರಾಮ, ಸೀತೆ, ರಾವಣರ ಪಾತ್ರಗಳ ಪ್ರತಿನಿಧಿಗಳಂತೆ ವರ್ತಮಾನದ ರಾಮಯ್ಯ, ಸೀತಮ್ಮ ಲಂಕಪ್ಪ ಇವರ ಕಥೆಯೂ ಸೇರಿಕೊಂಡು, ನಾಟಕ ದೊಳಗೊಂದು ನಾಟಕ ಬಿಚ್ಚಿಕೊಳ್ಳುತ್ತಾ ಓದುಗರ ಕುತೂಹಲ ಕೆರಳಿಸುತ್ತದೆ. ಸುಲಲಿತ ನಿರೂಪಣೆಗಾಗಿ ಜಾನಪದ ಪರಿಕರಗಳನ್ನು ಚದುರಂಗರು ಬಳಸಿ ಕೊಂಡಿದ್ದಾರೆ. ಹಾಗಾಗಿ ಪೌರಾಣಿಕತೆ, ಆಧುನಿಕತೆ ಹಾಗೂ ಜಾನಪದ – ಈ ಮೂರೂ ನೆಲೆಗಟ್ಟಿನಲ್ಲಿ ನಾಟಕ ಸಾಗುತ್ತದೆ.

ನಾಟಕದ ಆರಂಭದಲ್ಲೇ ಬರುವ ಆಂಜನೇಯ ಗೊಂಬೆಯ ಮಧ್ಯಸ್ಥಿಕೆ, ಸೀತೆಯ ಬೇಸರ, ರಾಮ-ಸೀತಾ ಗೊಂಬೆಗಳು ದೂರ ಸರಿದಿರೋದನ್ನು ಕಂಡು, "ವ್ಯವಸ್ಥೆಯನ್ನು ಹೀಗೆ ಹಾಳುಗೆಡವಿದೋರು ಯಾರು?" ಎಂಬ ಭಾಗವತನ ಮಾತುಗಳು ಸಾಂಕೇತಿಕವಾಗಿ ನಾಟಕದ ಉದ್ದೇಶವನ್ನು ಧ್ವನಿಸುತ್ತವೆ. ಹಾಗಾಗಿ ಇಲ್ಲಿನ ಕೆಲವು ಪಾತ್ರಗಳು (ಸೀತೆ, ಸೀತಮ್ಮ...) ಸಿದ್ಧ ವ್ಯವಸ್ಥೆಗೆ ಬದ್ಧವಾಗಿರದೇ, ವ್ಯವಸ್ಥೆಯನ್ನು ಪ್ರಶ್ನಿಸುವ, ತಮ್ಮ ಬದುಕನ್ನು ತಾವೇ ನಿರ್ಧರಿಸುವ ಆಧುನಿಕ ಮನೋಭಾವವನ್ನು ಪ್ರತಿಬಿಂಬಿಸುತ್ತವೆ. ಇಲ್ಲಿನ ಪ್ರಮುಖ ಪಾತ್ರಗಳು ತಮ್ಮ ಗತ ಬದುಕಿನ ತಲ್ಲಣಗಳ ನೆನಪಿನಿಂದ, ಈಗಿನ ಪರಿಸ್ಥಿತಿಯ ವಿಮರ್ಶೆಯಿಂದ ಹೊಸದಾರಿ ಕಂಡು ಕೊಳ್ಳಬೇಕಾದಾಗ ಸಹಜವಾಗೇ ಚಿತ್ತಕ್ಷೋಭೆಗೊಳ ಗಾಗುತ್ತವೆ. ನಂತರ ಪರಿವರ್ತನೆಗೊಳಗಾಗುತ್ತವೆ. ಆದ್ದರಿಂದ ಈ ನಾಟಕದಲ್ಲಿ ಘಟಿಸುವ 'ಮನೋ ವೇದನೆ ಹಾಗೂ ಮನಪರಿವರ್ತನೆ'ಯ ಅಂಶಗಳಿಗೆ ಒತ್ತುಕೊಟ್ಟು ಮುಂದಿನ ಮಾತುಗಳನ್ನು ಹೇಳಲಾಗಿದೆ.

ಯಾವುದಾದರೊಂದು ಸಂಕಟಕ್ಕೆ ಸಿಲುಕಿದ ವ್ಯಕ್ತಿ, ಅದರಿಂದ ಪಾರಾಗಿ ಬಂದ ಮೇಲೆ, ಮೇಲ್ನೋಟಕ್ಕೆ ಆ ಘಟನೆ ಮರೆತಿರುವಂತಿದ್ದರೂ ಅದನ್ನು ಮನದಾಳ ದಲ್ಲೇ ಮೆಲುಕು ಹಾಕುವುದು ಸಹಜ. ಜೈಲಿಗೆ ಹೋಗಿ ಬಂದ ಅಪರಾಧಿ, ಅತ್ಯಾಚಾರಕ್ಕೊಳಗಾದ ಹೆಣ್ಣು, ಪರಿ ಸ್ಥಿತಿಯ ಒತ್ತಡಕ್ಕೆ ಮಣಿದ ಹೆಂಡತಿ, ಪರ ಪುರುಷನಿಂದ ದೌರ್ಜನ್ಯಕ್ಕೊಳಗಾಗಿದ್ದು ಗೊತ್ತಿದ್ದೂ ಅವಳ ಜೊತೆ ಬಾಳುವ ಗಂಡ... ಹೀಗೆ ವ್ಯಕ್ತಿಗಳಲ್ಲಿ ತಮ್ಮ ಜೀವನದಲ್ಲಿ ನಡೆದ ಕಹಿ ಘಟನೆಗಳು ಕಾಲ ಸಂದಂತೆ ಮರೆತ ಹಾಗಿದ್ದರೂ, ಮನದಾಳದಲ್ಲಿ ಸುಪ್ತವಾಗಿರುತ್ತವೆ. ಅಂಥ ವ್ಯಕ್ತಿಗಳು ಒಳಗೊಳಗೇ ಭಯ, ಆತಂಕ, ಅನುಮಾನಗಳ ಸುಳಿಯಲ್ಲಿ (ಬಹುಶಃ ಅವರ ಜಾಗೃತ ಪ್ರಜ್ಞೆಗೆ ಅರಿವಿಲ್ಲದಂತೆಯೇ) ಸಿಲುಕಬಹುದು. ಹೀಗೆ ವ್ಯಕ್ತಿಗಳಲ್ಲಿ ಅಗೋಚರವಾಗಿರುವ ಇಂತಹ ಭಾವನೆಗಳು ಕೆಲವೊಮ್ಮೆ ಕನಸಿನಲ್ಲಿ ಜಾಗೃತವಾಗಬಹುದು. ಮನುಷ್ಯರಿಗೆ ಕನಸು ಬೀಳುವುದರ ಹಿಂದಿನ ಕಾರಣ ಸಹ ಇದೇ ಎಂದು ಮನಃಶಾಸ್ತ್ರಜ್ಞರು ಗುರುತಿಸಿದ್ದಾರೆ.

ಈ ನಾಟಕದಲ್ಲೂ ರಾಮ, ಸೀತೆಯರು ತಮ್ಮ ಜೀವನದ ದುರಂತಗಳನ್ನು ದಾಟಿ ನೆಮ್ಮದಿಯ ಜೀವನ ಸಾಗಿಸುತ್ತಿದ್ದಾರೆಂದು ಮೇಲ್ನೋಟಕ್ಕೆ ಅನ್ನಿಸಿದರೂ ಅವರಿಬ್ಬರಲ್ಲೂ ಒಳಗೊಳಗೇ ಭಯ, ಆತಂಕ, ಅನುಮಾನಗಳು ಸುಳಿಯುವುದನ್ನು ಕಾಣಬಹುದು. ಇಲ್ಲಿ ರಾಮನ ಪ್ರವೇಶವಾಗುವುದೇ ತನಗೆ ಬಿದ್ದ ಕನಸನ್ನು ಸೀತೆಗೆ ವಿವರಿಸುವ ಸನ್ನಿವೇಶದಿಂದ. ಹಿಂದಿನ ದಿನ ತನಗೆ ಕನಸು ಬಿದ್ದಿರುವ ಸಂಗತಿಯನ್ನು ಆಡಳಿತ ನಿರ್ವಹಣೆಯ ಗಡಿಬಿಡಿಯಿಂದ ಹೇಳಲಾಗ ಲಿಲ್ಲೆಂದೂ, "ಅದು ಸಾಧಾರಣ ಕನಸಲ್ಲ, ಸೀತಾ... ನಾನೂ ನೀನೂ ತಬ್ಬಿ ಮಲಗಿದ್ದೇವೆ – ಹೀಗೆ ಬೆಸೆದು ಮಲಗಿದ್ದೇವೆ. ಆಗ ತಟ್ಟನೆ ಯಾವುದೋ ಅಗೋಚರ ಕ್ರೂರ ಹಸ್ತ ನಮ್ಮಿಬ್ಬರನ್ನು ಅತ್ತ ಇತ್ತ ನೂಕಿ ಬೇರ್ಪಡಿಸಿದಂತಾಯಿತು. ಜತೆಜತೆಗೇ ನಮ್ಮಿಬ್ಬರ ನಡುವೆ ಸಣ್ಣ ಕಾಲುವೆಯಂತೆ, ನಂತರ ನದಿಯಂತೆ ಕಾಣಿಸಿಕೊಂಡ ಜಲರಾಶಿ ಬರುಬರುತ್ತ ವಿಸ್ತಾರವಾದ ಪ್ರಪಂಚ ಸಾಗರವಾಗಿ ಹರಡಿ ನಿಂತಿತು. ಆ ಸಾಗರದಲ್ಲಿ ಅಗಾಧ ಪ್ರಮಾಣದ ಭೀಕರ ಮೊಸಳೆಯೊಂದು ಸದ್ದಿಲ್ಲದೆ ಬಂದು ನಿನ್ನನ್ನು ಕಚ್ಚಿ ಎತ್ತಲೋ ಒಯ್ಯುತ್ತಿರು ವುದನ್ನು ಕಂಡು ಬೆಚ್ಚಿ ಎಚ್ಚೆತ್ತೆ" (ಪುಟ ೬-೭) ಎಂದು ಸೀತೆಗೆ ಹೇಳುತ್ತಾನೆ. ಇಲ್ಲಿ ಹೇಳುವ ಹನಿ-ಕಾಲುವೆ-ನದಿ-ಸಾಗರದ ವಿವರಗಳು ವ್ಯಕ್ತಿಯೊಳಗಿನ 'ಅನುಮಾನ' ಮೊಳೆತು ಚಿಗುರಿ ಹೆಮ್ಮರವಾಗುವುದರ ಸಂಕೇತದಂತೆ ಭಾಸವಾಗುತ್ತದೆ. ಹೀಗೆ ರಾಮನ ಈ ಕನಸು, ಸೀತೆಯ ಆತಂಕ, ಇವರಿಬ್ಬರ ಸ್ವಗತಗಳು, ಶೂರ್ಪನಖಿಯ ಪ್ರತೀಕಾರ ಮುಂತಾದವು ಈ ಪಾತ್ರಗಳ ಮನದಾಳದ 'ಬೇಗುದಿ'ಯ ನಿದರ್ಶನಗಳು. ಜೊತೆಗೆ ರಾಮ ಬೇಟೆಗೆ ಹೋದಾಗ ಕಂಡ ಜಿಂಕೆಯ ವರ್ಣನೆ ಮಾಡುವಾಗ, 'ಬಂಗಾರದ ಜಿಂಕೆ'ಯ ಪ್ರಸಂಗವನ್ನು ಪ್ರಸ್ತಾಪಿಸುವುದು, 'ಚಿತ್ರಪಟ'ದ ಕಾರಣದಿಂದ ಸೀತೆಯನ್ನು ನಿರ್ಲಕ್ಷಿಸುವುದು, ರಾಮನ ನಿರ್ಲಕ್ಷ್ಯದಿಂದ ಅತಿಯಾದ ಮನೋವೇದನೆ ಗೊಳಗಾದ ತುಂಬು ಗರ್ಭಿಣಿ ಸೀತೆ-ರಾಮನ ಈಗಿನ ನಡತೆಯ ಜೊತೆಗೆ ಅರಮನೆಯ ಇತರ ಸಂಬಂಧಿಗಳ ಅನಾದರ, ಕರುಣೆ, ತಿರಸ್ಕಾರದ ಮಾತುಗಳಿಂದ ಅರಮನೆಯನ್ನು 'ಸೆರೆಮನೆ' ಎನ್ನುವುದು, ಇಂಥ ಉಸಿರುಗಟ್ಟಿಸುವ ವಾತಾವರಣದಿಂದ ಬೇಸತ್ತು ಏಕಾಂಗಿಯಾಗಿ ಅರಮನೆಯನ್ನು ತೊರೆಯಲು ನಿರ್ಧರಿಸುವುದು, ರಾಮ-ಲಕ್ಷ್ಮಣರಲ್ಲೂ ಹೇಳಿದ ಸಂಗತಿಯನ್ನು ತನ್ನ ಸೇವಕಿ ಸುಜಾತೆಯ (ಪುರಾಣ ದಲ್ಲಿಲ್ಲದ ಹೊಸಪಾತ್ರ) ಬಳಿ ಹೇಳಿ, 'ಸುಬ್ರಹ್ಮಣ್ಯ ಷಷ್ಠಿ'ಯ ದಿನ ಊರಿನ ಹೊರವಲಯದಲ್ಲಿರುವ ದೊಡ್ಡ ಹುತ್ತಕ್ಕೆ ತನಿ ಎರೆಯುವ ನೆವದಲ್ಲಿ ಹಾಗೆಯೇ ಕಾಡಿಗೆ ಜಾರಿಕೊಳ್ಳುವುದೂ ಸಹ ಮನೋವಿಶ್ಲೇಷಣೆಯ ಹಿನ್ನೆಲೆಯಿಂದ ಗಮನಿಸಬೇಕಾದ ಸಂಗತಿಗಳು.

ಈ ನಾಟಕದ 'ಶೂರ್ಪನಖಿ' ಸಹ ಮನೋ ವೇದನೆಗೊಳಗಾದ ಹೆಣ್ಣಾಗಿ ಚಿತ್ರಿಸಲ್ಪಟ್ಟಿದ್ದಾಳೆ. ಆದರೆ ಇವಳು ತನಗಾದ ನೋವು, ಅವಮಾನ, ಶಿಕ್ಷೆಯಿಂದ ತಾನೇ ಕೊರಗದೆ, ತನ್ನ ನೋವಿಗೆ ಕಾರಣರಾದವರ ಮೇಲೆ 'ಉಗ್ರ ಪ್ರತೀಕಾರ' ತೀರಿಸಿಕೊಳ್ಳಲು ಕಾದಿರುವ

'ಹಠಮಾರಿ' ಹೆಣ್ಣಾಗಿದ್ದಾಳೆ. ಅಲ್ಲದೆ ತನ್ನಿಂದ ಶಿಕ್ಷೆಗೊಳಗಾದವರ ನೋವನ್ನು ಕಂಡು ಆನಂದಪಡುವ 'ಸ್ಯಾಡಿಸ್ಟ್' (ಪರದುಃಖ ವಿನೋದಿನಿ) ಮನೋಭಾವದವಳಾಗಿದ್ದಾಳೆ. ಅದಕ್ಕಾಗಿ ಮಾಯಾ ಕೊರವಿಯಾಗಿ ಪ್ರವೇಶಿಸಿ, ಬಿನ್ನಾಣದ ಮಾತುಗಳಿಂದ ಸೀತೆಯ ಭೂತ, ವರ್ತಮಾನಗಳನ್ನು ಹೇಳುತ್ತಾ, ಭವಿಷ್ಯದಲ್ಲೂ ನೆಮ್ಮದಿಯ ಬಾಳು ನಿನಗಿದೆ ಎಂದು ಆತ್ಮವಿಶ್ವಾಸದ ಮಾತುಗಳನ್ನಾಡಿ, ಸೀತೆಯ ಮನ ಗೆದ್ದು, ಸಾಮಾನ್ಯ ಕೊರವಿ ತೆಗೆದುಕೊಳ್ಳುವಂಥ ಯಾವ ವಸ್ತುವನ್ನು (ಧಾನ್ಯ, ಒಡವೆ...) ಬಹುಮಾನವಾಗಿ ತೆಗೆದುಕೊಳ್ಳದೇ, ಮರಳ ಮೇಲೆ ರಾವಣನ ಚಿತ್ರವನ್ನು ಬರೆದರೆ ಸಾಕೆಂದು ಒತ್ತಾಯಿಸಿ, ಬಲವಂತದಿಂದ ಬರೆಸಿ, ಸೀತೆಯ ಕಲಾತ್ಮಕತೆಯನ್ನು ಮೆಚ್ಚುತ್ತಲೇ ತನ್ನ ಮಂತ್ರಶಕ್ತಿಯಿಂದ ಬಟ್ಟೆಯ ಚಿತ್ರಪಟವನ್ನಾಗಿ ಪರಿವರ್ತಿಸಿ ಅದಕ್ಕೆ ಜೀವ ತುಂಬುತ್ತಾಳೆ. ಅದು ಗಾಳಿಯಲ್ಲಿ ಹಾರಾಡಲು, ಅದನ್ನು ಹಿಡಿವಂತೆ ಹಾಗೂ ಹಿಡಿಯದಿದ್ದರೆ ಅದೇ ಬಂದು ಹಿಡಿಯುತ್ತದೆಂದೂ ಸೀತೆಗೆ ಹೇಳುತ್ತಾಳೆ.

ಇದುವರೆಗೆ ಅಮಾಯಕಳಂತೆ ಕೊರವಿಯ ಕೈವಶವಾಗಿದ್ದ ಸೀತೆಗೆ ಅನುಮಾನ ಬಂದು ವಿಚಾರಿಸಿದಾಗ, ತಾನು ಶೂರ್ಪನಖಿ ಎಂದೂ, ಹಿಂದೆ ದಂಡಕಾರಣ್ಯದಲ್ಲಿ ನಡೆದ ಸಂಗತಿಯನ್ನು ನೆನಪಿಸಿ, ರಾಮನು ತನ್ನ ಪ್ರೇಮವನ್ನು ತಿರಸ್ಕರಿಸಲು, ಲಕ್ಷ್ಮಣನು ಶಿಕ್ಷಿಸಲು ಸೀತೆಯೇ ಕಾರಣ ಎಂದೂ ದೂಷಿಸುತ್ತಾಳೆ. ಅಲ್ಲದೇ ತನ್ನನ್ನು ತಿರಸ್ಕರಿಸಿದ ರಾಮನ ಮೇಲಾಗಲಿ, ಶಿಕ್ಷಿಸಿದ ಲಕ್ಷ್ಮಣನ ಮೇಲಾಗಲಿ 'ಸೇಡು' ತೀರಿಸಲಿಚ್ಛಿಸದೆ, ಗಹಗಹಿಸಿ ನಕ್ಕು ಅವಮಾನ ಮಾಡಿದ ಸೀತೆಯ ಮೇಲೆ ಮಾತ್ರ ತನ್ನ ಪ್ರತೀಕಾರ ಎನ್ನುತ್ತಾಳೆ. ಹಾಗಾಗಿ ಹರಿದರೆ ಹರಿಯದ, ನೀರಲ್ಲಿ ಮುಳುಗದ-ನೆನೆಯದ, ಬೆಂಕಿಯಲ್ಲಿ ಬೇಯದ 'ಚಿತ್ರಪಟ' ವನ್ನು ಸೀತೆಯ ಮೇಲೆ ಬಿಟ್ಟು, ''ಮೋಹಿಸಿ ಬಂದ ತನ್ನನ್ನು ಹೀಯಾಳಿಸಿದ್ದಕ್ಕೆ, ನೋಯಿಸಿ ಸಂಕಟಪಡಿಸಿದ್ದಕ್ಕೆ ಇದು ಸೀತೆ ಅನುಭವಿಸಬೇಕಾದ ಕರ್ಮ'' ಎಂದೂ, ಇದು ಅವಳ ಜೀವಕ್ಕಂಟಿದ ಪ್ರಾರಬ್ಧವೆಂದೂ, ಅದರಿಂದ ಸೀತೆಗೆ ಮುಕ್ತಿಯಿಲ್ಲೆಂದೂ ಶಪಿಸಿ ಹೋಗುತ್ತಾಳೆ. ನಂತರ ಚಿತ್ರಪಟವನ್ನು ರಾಮನಿಗೆ ಕಾಣದಂತಿಡಲು, ಹೇಗಾದರೂ ನಾಶ ಮಾಡಲು ಶತಪ್ರಯತ್ನ ಮಾಡುವ ಸೀತೆ ಕೊನೆಗೆ ಮಂಚದ ಮೇಲೆ, ಹಾಸಿಗೆಯ ಕೆಳಗೆ ಬಚ್ಚಿಟ್ಟರೂ, ಮಂಚದ ಮೇಲೆ ಕೂತ ರಾಮನಿಗೆ ಎತ್ತಿ ಎತ್ತಿ ಹಾಕಿದಂತಾಗಿ, ಅದೇನೆಂದು ನೋಡಿದರೆ ವೈರಿ 'ರಾವಣನ ಚಿತ್ರಪಟ' ರಾಮನ ಕೈಗೆ ಸಿಗುತ್ತದೆ! ಅದು ನಾಟಕದುದ್ದಕ್ಕೂ ಶೂರ್ಪನಖಿ, ಸೀತೆ, ರಾಮರಿಗೆ ಆನಂದ, ಆತಂಕ, ಅನುಮಾನಗಳಿಗೆ ಅವಕಾಶ ನೀಡುತ್ತದೆ.

ರಾಮ-ಸೀತೆಯರ ಮನಸ್ತಾಪ, ಸೀತಾ ಪರಿತ್ಯಾಗಕ್ಕೆ ಕಾರಣವಾಗುವ ರಾವಣನ ಬಿಂಬ, ಕಾಡಿನಲ್ಲಿ ವನದೇವತೆಗಳ ಆಶ್ರಯದಲ್ಲಿ ಅವಳಿ ಮಕ್ಕಳಿಗೆ ಜನ್ಮ ನೀಡಿದ ಸೀತೆ – ಮಕ್ಕಳಿಗೆ ಹಾಲು ಕುಡಿಸುವಾಗಲೂ ಅಡ್ಡಿ ಮಾಡುತ್ತದೆ. ಕೊನೆಗೆ ಎಳೆ ಮಕ್ಕಳನ್ನು ಕಂಡಾಗ ಶೂರ್ಪನಖಿಯ ಮನಸ್ಸು ಕರಗಿ 'ಚಿತ್ರಪಟ'ವನ್ನು ವಾಪಾಸು ಕರೆಯುತ್ತಾಳೆ. ಹೀಗೆ ಇಡೀ ನಾಟಕದಲ್ಲಿ 'ರಾವಣನ ಚಿತ್ರಪಟ' ಒಂದು ಪ್ರತಿಮೆಯಾಗಿ ಬಳಕೆ ಯಾಗಿದೆ. ರಾವಣ ಸತ್ತಿದ್ದರೂ ಅವನ 'ಬಿಂಬ' ರಾಮ-ಸೀತೆಯರ ಮನದಾಳದಲ್ಲಿದ್ದು ಮತ್ತೊಮ್ಮೆ ಅವರು ಅಗಲಲು ಕಾರಣವಾಗುತ್ತದೆ. ಅಲ್ಲದೆ, ಇಲ್ಲಿ ಸೀತೆಯ ಸ್ಮರಣೆಯಿಂದ ಬಿಚ್ಚಿಕೊಳ್ಳುವ ಪುರಾಣದ ರಾವಣನ ಪ್ರಕಾರ 'ರಾಮನ ಬಿಂಬ' ರಾವಣ-ಸೀತೆಯರ ನಡುವೆ ಅಡ್ಡ ಬರುತ್ತಿರುವುದಾಗಿಯೂ, ಯುದ್ಧದಲ್ಲಿ ರಾಮನನ್ನು ಮುಗಿಸಿ ಬರುವು ದಾಗಿಯೂ (ಪುಟ ೫೪) ಹೇಳುವ ಮಾತುಗಳಿಂದ – ರಾವಣನಿಗೆ 'ರಾಮ'ನ ಬಿಂಬವೂ ಕಾಡುತ್ತಿರುವುದು ಕಂಡುಬರುತ್ತದೆ. ಹಾಗೇ ರಾಮನಿಗೆ ತನ್ನ ಮತ್ತು ಸೀತೆಯ ಪ್ರೀತಿಯ ನಡುವೆ ರಾವಣನ 'ಬಿಂಬ' ಅಡ್ಡಬರುವುದು ನಾಟಕದಲ್ಲಿ ಅವನ ಅನೇಕ ಸ್ವಗತಗಳಿಂದ ಗೋಚರವಾಗುತ್ತದೆ. ಉದಾ : ''ತುಂಬು ಗರ್ಭಿಣಿ... ಈ ಸ್ಥಿತಿಯಲ್ಲಿ... ಸೀತೆ, ಯಾಕೆ ಹೋದಳು ? ...ಹಲವಾರು ವರ್ಷಗಳ ಸಂಬಂಧವನ್ನು ಯಾಕೆ ಕಡಿದು ಹಾಕಿದಳು ? ಇದಕ್ಕೆ ನನ್ನ ಅನಾದರ ಕಾರಣವೆ ? ...ನಾನೂ ಸಹ ಹೊಂದಿಕೊಳ್ಳಲು ಸರ್ವ ಪ್ರಯತ್ನವನ್ನು ಮಾಡಿದೆ... ಅವಳ ಎದೆಗೆ ಅಂಟಿದ ಚಿತ್ರಪಟವನ್ನು ಕಿತ್ತು ಹಾಕಲು ಪ್ರಯತ್ನಿಸಿದೆ. ಆದರೆ, ಕೀಳಲು ಹೋದಂತೆಲ್ಲ ಅವಳ ಎದೆಯ ಚರ್ಮವೂ ಜತೆಜತೆಗೇ ಕಿತ್ತು ಬರುತ್ತಿತ್ತಲ್ಲ? ... ಹಾಳು ಚಿತ್ರಪಟ; – ನಮ್ಮಿಬ್ಬರ ನಡುವೆ ಯಾಕಾದರೂ ಬಂದಿತೊ ?...'' (ಪುಟ ೪೭) ಎಂಬ ರಾಮನ ಮಾತುಗಳು. ಸೀತೆ ಕಾಡಿನಲ್ಲಿ ಏಕಾಂಗಿಯಾಗಿ ತನ್ನ ಹುಟ್ಟು, ತವರುಮನೆ, ಮದುವೆ, ವನವಾಸ, ರಾವಣ ಹೊತ್ತೊಯ್ದ ಘಟನೆ, ಅಶೋಕವನದಲ್ಲಿ ರಾವಣನ ವರ್ತನೆ ಇವೆಲ್ಲವನ್ನು ಮೆಲುಕು ಹಾಕುತ್ತಾ, ಶತ್ರುವಾದ ರಾವಣನನ್ನೇ ಆಂಜನೇಯ ಹೊಗಳಿದ್ದ ಮಾತುಗಳನ್ನು ನೆನಪಿಸಿ ಕೊಳ್ಳುವುದು, ಯುದ್ಧದಲ್ಲಿ ರಾಮ ಗೆಲ್ಲಬೇಕು, ರಾವಣ ಸೋಲಬೇಕು, ಆದರೆ ಸಾಯಬಾರದು ಎಂದು ಆಶಿಸುವುದು, ವಿಕಟೆ-ದುರ್ಮುಖಿಯರು ಸೀತೆಯ ಇಂಗಿತವನ್ನು (ಮರುಕವನ್ನು) 'ಪ್ರೇಮ' ಎಂದು ಬಣ್ಣಿಸಿದಾಗ, ''ತಾಯಂದಿರೂ ಮಕ್ಕಳಿಗಾಗಿ ಮರುಕಪಡುತ್ತಾರೆ!'' (ಪುಟ ೫೬) ಎನ್ನುವುದು, ರಾಮ-ರಾವಣರ ಗುಣ-ಸ್ವಭಾವವನ್ನು ತೌಲನಿಕವಾಗಿ ನೋಡುವುದು ಮುಂತಾದ ಸಂದರ್ಭಗಳಲ್ಲಿ

## ಸಾದರ ಸ್ವೀಕಾರ

**ನವಕರ್ನಾಟಕ ಸರಳ ಸಚಿತ್ರ ವ್ಯಾಕರಣ**
ಪ್ರೊ|| ಬಿ.ಎಸ್. ರುಕ್ಕಮ್ಮ
ಪುಟ : ೧೦೪ ಬೆಲೆ : ರೂ. ೮೦

**ಎಲೆ ಮರೆಯ ಹಣ್ಣುಗಳು** (ಸಣ್ಣಕಥೆಗಳು)
ಗೀತಾ ವಿಶ್ವನಾಥ್
ಪುಟ : ೧೧೬ ಬೆಲೆ : ರೂ. ೪೦

**ಮಿತಸಂತಾನಕ್ಕೆ ಸರಳ ಮಾರ್ಗಗಳು**
ಡಾ|| ಎಚ್. ಗಿರಿಜಮ್ಮ
ಪುಟ : ೪೪ ಬೆಲೆ : ರೂ. ೨೦

**ಲೈಂಗಿಕ ಸಾಮರಸ್ಯ** (ಪ್ರಶ್ನೋತ್ತರಗಳು)
ಡಾ|| ಪದ್ಮಿನಿ ಪ್ರಸಾದ್
ಪುಟ : ೨೫೮ ಬೆಲೆ : ರೂ. ೯೫

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : ೫೧೪೯, ಬೆಂಗಳೂರು - ೫೬೦ ೦೦೧

**ಎದೆಗಾರಿಕೆ** (ಕಿರುಕಾದಂಬರಿ)
ಶ್ರೀಧರ್
ಪುಟ : ೬೩ ಬೆಲೆ : ರೂ. ೫೦
ಅಗ್ನಿ ಪ್ರಕಾಶನ, ೬ 'ಎ', ೯ನೇ 'ಬಿ' ಮೈನ್ ರಸ್ತೆ, ಪ್ರಶಾಂತಿ ನಗರ, ಇಸ್ರೋ ಲೇ ಔಟ್, ಬೆಂ - ೭೮

**ಹಾಸ್ಯ ಯೋಗ** (ಲೇಖನ ಸಂಗ್ರಹ)
ಡಾ|| ಮದನ್ ಕಟೇರಿಯಾ
ಅನು : ಡಾ|| ಎನ್. ಕೃಷ್ಣರಾಜು
ಪುಟ : ೧೭೬ ಬೆಲೆ : ರೂ. ೯೦
ಮಾ ಪ್ರಿಂಟ್-ಪಬ್ಲಿಷರ್ಸ್, ನಂ ೩, ೫ನೇ ಮುಖ್ಯರಸ್ತೆ, ಸಂಪಿಗೆ ಬಡಾವಣೆ, ಪಟ್ಟೇಗಾರ ಪಾಳ್ಯ, ಬೆಂ - ೭೯

**ಪಯಣ** (ಪ್ರವಾಸ ಕಥನ)
ವಿಜಯಾ ಶ್ರೀಧರ್
ಪುಟ : ೮೨ ಬೆಲೆ : ರೂ. ೩೬
ಪುಸ್ತಕ ನಿಧಿ, ಗಾವಳಿ ಶಾಲೆ ಹತ್ತಿರ, ಅಂಚೆ ಹಳ್ನಾಡಿ-ಹರ್ಕಾಡಿ, ಕುಂದಾಪುರ ತಾಲ್ಲೂಕು - ೫೭೬ ೨೧೦

**ವನಪಾಲಕ** (ಕವನ ಸಂಕಲನ)
ರವೀಂದ್ರನಾಥ ಠಾಕೂರ್
ಅನು : ಜಿ. ರಾಮನಾಥ ಭಟ್
ಪುಟ : ೨೩೬ ಬೆಲೆ : ರೂ. ೧೫೦
ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು-೧೪

**ಸಾಕ್ಷರಧಾರೆ** (ಸಾಕ್ಷರತಾ ಚಳವಳಿ)
ತುಕಾರಾಮ್ ಎಸ್. ಟಿ. ವೆಂಕಟೇಶ
ಪುಟ : ೩೭೨ ಬೆಲೆ : ರೂ. ೨೦೦
ಅಭಿರುಚಿ ಪ್ರಕಾಶನ, ನಂ ೪, ಎರಡನೇ ಅಂತಸ್ತು, ನಗರ ರಸ್ತೆ ಸಾರಿಗೆ ಕಟ್ಟಡ, ಕೆ.ಆರ್. ವೃತ್ತ, ಮೈಸೂರು - ೧

**ದುಡಿಯುವ ಕೈಗಳ ಹೋರಾಟದ ಕಥೆ**
(ರೈತ ಜನಾಂದೋಲನ)
ವಿಷ್ಣು ನಾಯ್ಕ
ಪುಟ : ೩೦೦ ಬೆಲೆ : ರೂ. ೧೮೦
ಡಾ|| ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ (ರಿ). ಅಂಕೋಲಾ (ಉ.ಕ).

**ಮೂರು ಕಿರುನಾಟಕಗಳು**
ಶ್ರೀನಿವಾಸ್ ವಿ. ಸುತ್ರಾವೆ
ಪುಟ : ೬೮ ಬೆಲೆ : ರೂ. ೪೦
ವಿನಯ್ ಪ್ರಕಾಶನ, ೧೬೪೬/೧೮ ವಿದ್ಯಾನಗರ, ದಾವಣಗೆರೆ - ೫೭೭ ೦೦೫

**ಯುದ್ಧ ಭಾರತ** (ನಾಟಕ)
ದಿವಾಕರ ಹೆಗಡೆ
ಪುಟ : ೫೨ ಬೆಲೆ : ರೂ. ೩೦
ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ, (ಉ.ಕ.)

**ಮನೆಯ ಮಾಣಿಕ್ಯ ಮಕ್ಕಳು** (ಸೂಕ್ತಿ ಸಂಗ್ರಹ)
ಸಂ : ಟಿ.ವಿ. ವೆಂಕಟರಮಣಯ್ಯ
ಪುಟ : ೭೨ ಬೆಲೆ : ರೂ. ೩೫

**ಅಧಿಕಾರ** (ಸೂಕ್ತಿ ಸಂಗ್ರಹ)
ಸಂ : ಟಿ.ವಿ. ವೆಂಕಟರಮಣಯ್ಯ
ಪುಟ : ೬೪ ಬೆಲೆ : ರೂ. ೩೦

**ಅಮೂಲ್ಯ ಆಸ್ತಿ ಸ್ನೇಹ** (ಸೂಕ್ತಿಸಂಗ್ರಹ)
ಸಂ : ಟಿ.ವಿ. ವೆಂಕಟರಮಣಯ್ಯ

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
ಟಿ.ವಿ. ವೆಂಕಟರಮಣಯ್ಯ, ಇ ಡಬ್ಲ್ಯು ಎಸ್, ೨೧೮ ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್ ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯




*ಮಂಗಳೂರಿನಲ್ಲಿ ೨೪.೯.೨೦೦೪ರಿಂದ ೧೦.೧೦.೦೪ರವರೆಗೆ ನವಕರ್ನಾಟಕ ಪುಸ್ತಕ ಪ್ರದರ್ಶನ ಯಶಸ್ವಿಯಾಗಿ ಜರುಗಿತು. ಸಾಹಿತಿ ಡಾ|| ಜಯಪ್ರಕಾಶ್ ಮಾವಿನಕುಳಿ ಪ್ರದರ್ಶನ ಉದ್ಘಾಟಿಸಿದರು. ಚಿತ್ರದಲ್ಲಿರುವವರು (ಎಡದಿಂದ ಬಲಕ್ಕೆ) ಶ್ರೀ ಹರೀಶ್, ಶ್ರೀ ಬಿ. ವಿ. ಕಕ್ಕಿಲ್ಲಾಯ, ಡಾ|| ಜಯಪ್ರಕಾಶ್ ಮಾವಿನಕುಳಿ.*

ರಾವಣನ ಬಿಂಬ ಸೀತೆಯ ಮನದಲ್ಲಿ ಅಚ್ಚೊತ್ತಿರುವುದು ಗೊತ್ತಾಗುತ್ತದೆ. ಹಾಗಾಗಿ ರಾವಣನಲ್ಲಿರುವ ಸೀತಾ-ರಾಮರ ಬಿಂಬ; ರಾಮನಲ್ಲಿರುವ ರಾವಣ-ಸೀತೆಯರ ಬಿಂಬ; ಸೀತೆಯಲ್ಲಿರುವ ರಾಮ-ರಾವಣರ ಬಿಂಬ-ಪರಸ್ಪರ ಕಾಡಿಸುವುದು, ನೋಯಿಸುವುದು, ಮನ ಕರಗಿಸುವುದು ಇಡೀ ನಾಟಕವನ್ನೇ ಆವರಿಸಿರುವ ಸಂಗತಿಯಾಗಿದೆ. ಅಲ್ಲದೆ ಇನ್ನೊಂದು ಪ್ರಮುಖ ಪಾತ್ರವಾದ ಶೂರ್ಪನಖಿಯ ಮನದಲ್ಲಿರುವ 'ರಾಮ'ನ ಬಿಂಬ-ಸೀತೆಯ ಮೇಲಿನ ಸೇಡಿಗಾಗಿ, ರಾಮನ ಪ್ರೀತಿ (ಪ್ರೇಮಕ್ಕಾಗಿ)ಗಾಗಿ ಹೊರ ತೋರೆಯುವ, ಹಂಬಲಿಸುವ ಅವಳ ವರ್ತನೆ, ಸ್ವಗತಗಳೂ ಸಹ ಈ ಹಿನ್ನೆಲೆಯಲ್ಲಿ ಗಮನಿಸಬಹುದಾದ ವಿಷಯಗಳೇ. ಹಾಗಾಗಿ ಈ ನಾಟಕಕ್ಕೆ 'ಬಿಂಬ' ಎಂಬ ಹೆಸರು ಅತ್ಯಂತ ಸೂಕ್ತವಾಗಿ ಒಪ್ಪುತ್ತದೆ. ಜೊತೆಗೆ ಇಲ್ಲಿ ಮೂಡಿರುವ 'ಚಿತ್ರಪಟ' ಕೇವಲ ಚಿತ್ರಪಟವಲ್ಲ; 'ಚಿತ್ತಪಟ'ವೂ ಆಗಿದೆ !

'ಬಿಂಬ' ನಾಟಕದ ರಾಮ, ಸೀತೆ, ಶೂರ್ಪನಖಿಯರು ಪರಸ್ಪರ ಭೇಟಿಯಾದಾಗ ಚಿತ್ತಕ್ಷೋಭೆಗೊಳಗಾದರೆ, ಏಕಾಂಗಿಯಾಗಿದ್ದಾಗ ಆತ್ಮವಿಮರ್ಶೆ ಮಾಡಿಕೊಳ್ಳುವುದನ್ನು ಕಾಣಬಹುದು. ಅರಣ್ಯದಲ್ಲಿ ಸೀತೆ, ರಾಮ, ರಾವಣರ ಗುಣಗಳ ತುಲನೆ ಮಾಡುತ್ತಲೇ, ರಾಮನನ್ನು ಬಿಟ್ಟು ಬಂದು ತಾನು ದುಡುಕಿದೆನೇನೋ ಎಂದು ಮರುಗುವುದು, ಚಿತ್ರಪಟದ ಕಾರಣದಿಂದ ಸೀತೆಯನ್ನು ನಿರ್ಲಕ್ಷಿಸಿದ ರಾಮ, ಅವಳಿಲ್ಲದಿದ್ದಾಗ ತಾನು ಹಾಗೆ ಮಾಡಬಾರದಿತ್ತೇನೋ ಎಂದು ಕೊರಗುವುದು, ಶೂರ್ಪನಖಿ ತನ್ನ ಇಂಥ ಕಠೋರ ವರ್ತನೆಗೆ ಕಾರಣವನ್ನು ಪರಿಶೀಲಿಸಿ, ತಾಯಿಯ ಮಾರ್ಗದರ್ಶನವಿಲ್ಲದೇ ಬೆಳೆದ ಮಗು ಮುಂದೆ ಯಾವ ರೀತಿ ಆಗಬಹುದೆಂಬುದನ್ನು ತನ್ನ ನಿದರ್ಶನದ ಮೂಲಕವೇ ಹೇಳಿಕೊಳ್ಳುವುದು, ಮಕ್ಕಳ ವಿಷಯದಲ್ಲಿ ಮನಕರಗಿ ತನ್ನಣ್ಣನ ಚಿತ್ರ ಪಟವನ್ನು ವಾಪಾಸು ಕರೆಯುವುದು ಮುಂತಾದಲ್ಲಿ ಈ ಪಾತ್ರಗಳ ಮನಃಪರಿವರ್ತನೆ ಯಾಗುವುದನ್ನು ಕಾಣಬಹುದು. ಈ ಪರಿವರ್ತನೆಯ ಪರಿಣಾಮದಿಂದ ರಾಮ-ಸೀತೆಯರು ಪರಸ್ಪರರನ್ನು ಕಾಣಲು ಹಂಬಲಿಸಿದರೆ, ಶೂರ್ಪನಖಿ ಸೀತೆಗಾಗಲ್ಲ ದಿದ್ದರೂ ಮಕ್ಕಳಿಗಾಗಿ 'ಚಿತ್ರಪಟ'ದಿಂದ ಸೀತೆಯನ್ನು ವಿಮುಕ್ತಳನ್ನಾಗಿಸಿದರೂ, ಹೇಗಾದರೂ ಮಾಡಿ ರಾಮನನ್ನು ಕೂಡಿಯೇ ತೀರಬೇಕೆಂಬ ತನ್ನ ಬಯಕೆಯನ್ನು ತಿರಸ್ಕರಿಸಿ, ಬುದ್ಧಿವಾದ ಹೇಳುವ ರಾಮನಿಗೆ 'ಇನ್ನಷ್ಟು ದಿನ ಸೀತೆ ಸಿಗಲಾರಳು' ಎಂಬ ಶಿಕ್ಷೆ ವಿಧಿಸುತ್ತಾಳೆ; ತಿರಸ್ಕೃತ ಪ್ರೇಮಿಯಾಗಿ ಮತ್ತೆ ತವರಿಗೆ ಹೋಗಲಾರದೆ ಕಾಡಲ್ಲೇ ಉಳಿಯುವ ನಿರ್ಧಾರ ಮಾಡುತ್ತಾಳೆ.

ಹೀಗೆ ಇಲ್ಲಿ ಪುರಾಣದ ಸೀತೆ ತನ್ನನ್ನು ತನ್ನ ಮನೆಯವರು ಕಾಣುವ ರೀತಿ, ತನ್ನ ಮನದನ್ನನ ಅನಾದರ-ನಿರ್ಲಕ್ಷ್ಯಗಳಿಂದ ಬೇಸತ್ತು ಕಾಡು ಸೇರುವ ದೃಢ ನಿರ್ಧಾರ ಮಾಡುತ್ತಾಳೆ; ವನದೇವತೆಗಳ ಆಶ್ರಯದಲ್ಲಿ ಮಕ್ಕಳನ್ನು ಹೆರುತ್ತಾಳೆ. ಶೂರ್ಪನಖಿಗೂ ಕಾಡೇ ತಂಗುದಾಣವಾಗುತ್ತದೆ. ಆದ್ದರಿಂದ ಈ ನಾಟಕದ ಕಾಡು-ವನದೇವತೆಗಳ ವಿವರ ಮುಂತಾದ ಜಾನಪದ ಪರಿಕರಗಳು ಅವಾಸ್ತವ ಸಂಗತಿಗಳೆನಿಸುವುದಿಲ್ಲ. ಘಟನೆಗಳ ಬೆಸುಗೆಗಾಗಿ ಬಳಸಿರುವ 'ಮಂತ್ರ' ಮೊದಲಾದ ಅಂಶಗಳು ಜಾನಪದ ವಸ್ತುವನ್ನಾಧರಿಸಿ ಬಂದ ನಾಟಕಗಳಲ್ಲಿರುವ ಹಾಗೆ ಇಲ್ಲೂ ಬಂದಿವೆ.

ಪುರಾಣದ 'ಸೀತೆ' ಪಾತ್ರಕ್ಕೆ ಪೂರಕವಾಗಿ ಆಧುನಿಕ ಕಾಲದ ಸೀತಮ್ಮನ ಪಾತ್ರವಿದೆ. ಸೀತಮ್ಮ-ರಾಮಯ್ಯರ ಸಂಸಾರದಲ್ಲಿ ಮನೆ, ಮಕ್ಕಳು, ಗಂಡ, ಸೋದರಮಾವ – ಎಲ್ಲರನ್ನು ತನ್ನ ದುಡಿಮೆ, ಶ್ರಮದಿಂದ ನಿಭಾಯಿಸುವ ಸೀತಮ್ಮನನ್ನು ಕೇವಲ 'ಗಂಡ' ನಾದ ಕಾರಣದಿಂದ ಅನುಮಾನಿಸಿ, ಶಿಕ್ಷಿಸಿ, ಅವಮಾನಿಸುವ ರಾಮಯ್ಯ, ಸೀತಮ್ಮ ತಮ್ಮ ಸೋದರಮಾವ 'ಲಂಕಪ್ಪ'ನಿಗೆ ಸ್ವಲ್ಪ ಸಹಾಯ ಮಾಡುವುದನ್ನೇ ನೆಪವಾಗಿಟ್ಟು ಕೊಂಡು ದೊಡ್ಡ ರಾದ್ಧಾಂತವನ್ನೇ ಮಾಡುತ್ತಾನೆ. ಪುರಾಣದ ರಾಮ-ಸೀತೆಯರು ಪರಸ್ಪರ ದೂರಾಗಲು ಅವರದೇ ಆದ ಕಾರಣಗಳಿದ್ದರೂ ಜನಗಳ ದೃಷ್ಟಿಯಲ್ಲಿ ಅಂಥ 'ಆದರ್ಶ ದಂಪತಿ'ಗಳು ಅಗಲಲು 'ಅಗಸ'ನೇ ಕಾರಣನಾಗುತ್ತಾನೆ. ಏಕೆಂದರೆ 'ಅರಮನೆ'ಯ ಸಂಗತಿಗಳು ಜನಸಾಮಾನ್ಯರಿಗೆ ದೂರದ ಬೆಟ್ಟದಂತೆ! ಆದರೆ ನೆರೆಮನೆಯ ಸಂಗತಿಗಳು ಹಾಗಲ್ಲ. ಇಲ್ಲಿ ನಿರಪರಾಧಿ ಸೀತಮ್ಮನ ಮೇಲೆ ಕೆಟ್ಟ ಸಂಬಂಧದ ಆರೋಪ ಹೊರಿಸಿ ಕತ್ತು ಹಿಡಿದು ದಬ್ಬುವ ಮಟ್ಟಕ್ಕೆ ರಾಮಯ್ಯ ಹೋದಾಗ, ಅಕ್ಕಪಕ್ಕದ ಜನಗಳೂ ರಾಮಯ್ಯನ ಪಕ್ಷವನ್ನೇ ವಹಿಸುತ್ತಾರೆ, ಅಲ್ಲದೆ, ''ಇಂಥ ಹಾದರ ಗಿತ್ತೀರ ಮುಖ ದರ್ಶನ ಮಾಡಬಾರದು'' ಎಂದೂ ಸೀತಮ್ಮನನ್ನೇ ದೂಷಿಸುತ್ತಾರೆ.

ಇದೆಲ್ಲದರಿಂದ ಬೇಸತ್ತ ಸೀತಮ್ಮ ಮನೆಬಿಟ್ಟು ಹೊರಟಾಗ – ಇದುವರೆಗೆ ಆಗಾಗ ಸೀತಮ್ಮನ ಸಂಸಾರದ ಸಮಸ್ಯೆಗಳನ್ನು ಕೇಳಿ, ಸೀತಮ್ಮನಿಗೆ ಸಾಂತ್ವನ ಹೇಳುತ್ತಿದ್ದ – ಭಾಗವತನನ್ನು ತಾತ್ಕಾಲಿಕವಾಗಿ ಆಶ್ರಯ ಬೇಡುತ್ತಾಳೆ. ಸೀತಮ್ಮನಿಗೆ ಉಚಿತ ಸಲಹೆ-ಸೂಚನೆ ಕೊಡುತ್ತಿದ್ದ ಭಾಗವತ ಮಾತ್ರ ತನ್ನ ಹೆಂಡತಿಯ ನೆಪ ಹೇಳಿ ಸೀತಮ್ಮನ ಕೋರಿಕೆಯನ್ನು ನಿರಾಕರಿಸುತ್ತಾನೆ. ಆಗ ಸೀತಮ್ಮ ''ನನ್ನಂಥ ಕೂಲಿ-ನಾಲಿ ಮಾಡೋರಿಗೆ ಈ ಊರಾದ್ರೇನು, ಮುಂದಿನ ಊರಾದ್ರೇನು'' ಎಂದುಕೊಂಡು, ಕೂಲೀನಾದ್ರೂ ಮಾಡಿಕೊಂಡು ಮಕ್ಕಳನ್ನು ಸಾಕುವುದಾಗಿ ತೀರ್ಮಾನಿಸುತ್ತಾಳೆ. ಆಧುನಿಕ ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಸೀತಮ್ಮನ ಈ ನಿರ್ಧಾರ ಮಹತ್ವದ್ದಾಗಿ ಕಾಣುತ್ತದೆ. ತಾವು ಕಾರಣರಲ್ಲದ ತಮ್ಮ ಸಮಸ್ಯೆಗೆ ಆತ್ಮಹತ್ಯೆಯ ಮೂಲಕವೋ, ಬೇರೆಯವರ ಆಶ್ರಯ ಪಡೆಯುವ ಮೂಲಕವೋ ತಾತ್ಕಾಲಿಕ ಪರಿಹಾರ ಕಂಡು ಕೊಳ್ಳುವ ಬದಲು ಮಹಿಳೆಯರು ತಮ್ಮ ಬದುಕಿಗೆ ದಿಟ್ಟವಾದ, ಆತ್ಮವಿಶ್ವಾಸದಿಂದ ಕೂಡಿದ ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಸೀತಮ್ಮನ ಪಾತ್ರ ಸಮರ್ಪಕವಾಗಿ ಚಿತ್ರಣಗೊಂಡಿದೆ.

ಇನ್ನು ಈ ನಾಟಕದಲ್ಲಿ ಪುರಾಣ ಮತ್ತು ಆಧುನಿಕ ವಸ್ತುವನ್ನು ನಿರೂಪಿಸುವಾಗ ಬಳಸಿರುವ ಭಾಷೆ, ನಾಟಕದ ಅನೇಕ ಘಟನೆಗಳ ಬಗ್ಗೆ ಸೂಕ್ತ ವಿವರಣೆ ನೀಡುವ ಭಾಗವತನ ಪಾತ್ರ, ಪುರಾಣದ ರಾವಣನ ಪಾತ್ರ ಚಿತ್ರಣ, ವನದೇವತೆಗಳು, ವನದೇವತೆಗಳ ಹಾಡು ಮೊದಲಾದ ಜಾನಪದ ಪರಿಕರಗಳ ಬಳಕೆ, ಲಕ್ಷ್ಮಣನ ಪಾತ್ರ, ಅಯೋಧ್ಯೆಯ ಜನ, ಬರಗಾಲ, ಕೈಕೇಯಿಯ ಬಗೆಗಿನ ರಾಮ-ಲಕ್ಷ್ಮಣರ ಅಭಿಪ್ರಾಯಗಳು, ವಾಲ್ಮೀಕಿ ಪಾತ್ರ ಮೊದಲಾದ ಸಂಗತಿಗಳು, ಘಟನೆಗಳು, ವ್ಯಕ್ತಿಗಳು ಈ ನಾಟಕವನ್ನು 'ಸಾಂಸ್ಕೃತಿಕ ಪಠ್ಯ'ವಾಗಿ ಗ್ರಹಿಸಲು ನೆರವಾಗುವಂಥ ಅಂಶಗಳು.

ಚದುರಂಗರಿಗೆ 'ರಾಮಾಯಣ'ದ ಕತೆ ಕೇವಲ ನೆಪವಾಗಿ ಬೇಕಾಗಿದೆ ಅಷ್ಟೆ. ಅವರ ದೃಷ್ಟಿ ಮಾನವ ಸಹಜ ವ್ಯಾಪಾರದ ಕಡೆಗೇ ನೆಟ್ಟಿರುವುದು ಗಮನಾರ್ಹ. ಮಹಾಕಾವ್ಯ, ಮಹಾಪ್ರಯತ್ನಗಳಲ್ಲಿ ಕಾಣದಿರಬಹುದಾದ, ನಿರ್ಲಕ್ಷಿಸಬಹುದಾದ ಸಣ್ಣ ದನಿ, ಸಣ್ಣ ನೋವಿನ ಮಿಡಿತಕ್ಕೆ ಇಂಥ 'ಭಿತ್ತಿ'ಗಳು ಬೇಕು. ಈ ನಿಟ್ಟಿನಲ್ಲಿ ಈ ನಾಟಕದ ಶೂರ್ಪನಖಿಯ ಪಾತ್ರವೂ ಗಮನಾರ್ಹ. ಹಾಗೆಯೇ ನಿರಪರಾಧಿ ಸೀತೆ, ಸೀತಮ್ಮ – ಇವರ ಪಾತ್ರಗಳು ನೋಡುಗ-ಓದುಗರನ್ನು ಕಾಡದೇ ಬಿಡವು. ಹೀಗೆ ಚದುರಂಗರು ಕಾವ್ಯ, ಬದುಕು, ನಿಸರ್ಗ, ಮನೋವಿಜ್ಞಾನದ ಹೊಳಹುಗಳನ್ನು ಒಳಗೊಂಡಂತೆ ಜಾನಪದ ಅಂತಃಸ್ಸತ್ವವುಳ್ಳ ದೇಶೀ ರಾಮಾಯಣಗಳಲ್ಲಿ ಬಿಂಬಿತ ವಾಗಿರುವ 'ಚಿತ್ರಪಟ' ವನ್ನು ಬಳಸಿಕೊಂಡು, ಪುರಾಣದ ಜೊತೆ ಆಧುನಿಕ ಕತೆಯನ್ನು ಬೆಸೆದು ವಿನೂತನವಾಗಿ ಈ ನಾಟಕವನ್ನು ನಿರೂಪಿಸಿದ್ದಾರೆ ಎನ್ನಬಹುದು.

ಎನ್. ಗೀತಾ
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು, ಸರ್. ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು,
ನ್ಯೂ ಟೌನ್, ಭದ್ರಾವತಿ - ೫೭೭ ೩೦೩

ಪ್ರಾಯಶಃ ಆಗ್ರಾದ ಕೆಂಪುಕೋಟೆಯಂತೆ ರಾಜಕೀಯ ಉತ್ಕ್ರಾಂತಿಗಳು, ಏಳು ಬೀಳುಗಳು, ಪಿತೂರಿಗಳು ಮತ್ತು ನಾಟಕೀಯ ಘಟನಾವಳಿಗಳನ್ನು ಬಹುಕಾಲ ನಿರಂತರವಾಗಿ ಕಂಡ ಕೋಟೆ ಭಾರತದಲ್ಲಿ ಬೇರೊಂದು ಇರಲಾರದು. ಆ್ಞ.... ! ಏನಂದಿರಿ ? ಆಗ್ರಾದ ಕೆಂಪುಕೋಟೆಯೆ ? ಕೆಂಪುಕೋಟೆ (Red fort) ಇರುವುದು ದೆಹಲಿಯಲ್ಲಿ ಅಲ್ಲವೆ?

ನಿಮ್ಮ ಆಶ್ಚರ್ಯ ಸಹಜವಾದುದೇ ಆಗಿದೆ. ಕೆಂಪುಕೋಟೆ ಎಂದ ಕೂಡಲೇ ದೆಹಲಿಯಲ್ಲಿರುವ ಕೆಂಪುಕೋಟೆ ನೆನಪಾಗುತ್ತದೆ. ನಮ್ಮ ದೇಶದ ಸ್ವಾತಂತ್ರ್ಯದ ಮೊದಲ ಧ್ವಜಾರೋಹಣ ಮತ್ತು ಭಾಷಣಗಳು ಜರುಗಿದ್ದು ದೆಹಲಿ ಕೆಂಪು ಕೋಟೆಯ ವೇದಿಕೆಯಲ್ಲಿ. ಬಹುಪ್ರಚಾರ ಪಡೆದ ದೆಹಲಿಯ ಕೆಂಪುಕೋಟೆಗಿಂತಲೂ ಹಳೆಯದಾದ ಕೆಂಪುಕೋಟೆಯೊಂದು ಆಗ್ರಾದಲ್ಲಿದೆ ಎಂದು ಬಹಳ ಜನರಿಗೆ ಗೊತ್ತಿಲ್ಲ (ಯಾಕೆಂದರೆ ಆಗ್ರಾ ಎಂದಕೂಡಲೇ ನಮಗೆ ತಟ್ಟನೆ ನೆನಪಾಗುವುದು ತಾಜ್‌ಮಹಲ್ ಅಲ್ಲವೆ?). ಆಗ್ರಾದ ಈಗಿನ ಕೆಂಪುಕೋಟೆಯನ್ನು ಅಕ್ಬರ್ ಕ್ರಿ.ಶ. ೧೫೬೫ರಲ್ಲಿ ಕಟ್ಟಿಸಿದರೆ, ದೆಹಲಿಯ ಕೆಂಪುಕೋಟೆಯನ್ನು ಅಕ್ಬರನ ಮೊಮ್ಮಗನಾದ ಷಾಜಹಾನ್ ೧೬೩೮ರಲ್ಲಿ ಕಟ್ಟಿಸಿದನು. ಎರಡೂ ಕೆಂಪುಕೋಟೆಗಳು ಯಮುನಾ ನದಿ ದಡದಲ್ಲಿವೆ. ಎರಡೂ ಮೊಗಲ್ ಶೈಲಿಯ ಅಪೂರ್ವ ವಾಸ್ತುಶಿಲ್ಪ, ಸೌಂದರ್ಯ ಪ್ರಜ್ಞೆ ಮತ್ತು ಕಲೆಗಾರಿಕೆಗಳ ಅಪೂರ್ವ ಸಂಗಮ. ಆಗ್ರಾದ ಕೆಂಪುಕೋಟೆ ಯುನೆಸ್ಕೋದ ವಿಶ್ವಪರಂಪರೆ (World Heritage Monument)ಯ ಪಟ್ಟಿಗೆ ಸೇರಿದ್ದರೆ, ದೆಹಲಿಯ ಕೆಂಪುಕೋಟೆ ಇನ್ನೂ ರಾಷ್ಟ್ರೀಯ ಸ್ಮಾರಕವಾಗಿಯೇ ಉಳಿದಿದೆ.

**ಮೂಕಸಾಕ್ಷಿ**

ಆಗ್ರಾದ ಕೆಂಪುಕೋಟೆಯಲ್ಲಿ ಮೊಗಲ್ ವಂಶದ ಎಲ್ಲಾ ಪ್ರಮುಖ ಅರಸರು ವಾಸಿಸಿದ್ದರು ಇಲ್ಲವೆ ಈ ಕೋಟೆಯಿಂದ ತಮ್ಮ ವಿಶಾಲ ಸಾಮ್ರಾಜ್ಯದ ಮೇಲೆ ಆಡಳಿತ ನಡೆಸಿದ್ದರು. ಮೊಗಲರ ಮೊದಲ ದೊರೆ ಬಾಬರನ ಸೌಂದರ್ಯಪ್ರಜ್ಞೆ ಮತ್ತು ದೂರದೃಷ್ಟಿ, ಹುಮಾಯೂನನ ಕಲಾಭಿರುಚಿ ಮತ್ತು ಮಾದಕವ್ಯಸನ, ಅಕ್ಬರನ ಪರಮತ ಸಹಿಷ್ಣುತೆ ಮತ್ತು ಸೂಕ್ಷ್ಮತೆ, ಜಹಾಂಗೀರನ ಚಿತ್ರಕಲೆ ಮತ್ತು ಸಾಹಿತ್ಯದ ಗೀಳು, ಷಾಜಹಾನನ ವಾಸ್ತುಶಿಲ್ಪ ಪ್ರೇಮ ಮತ್ತು ವಿಲಾಸೀ ಜೀವನ ಹಾಗೂ ಔರಂಗಜೇಬನ ಮತಾಂಧತೆ ಮತ್ತು ನಯವಂಚಕತನಗಳಿಗೆಲ್ಲ ಆಗ್ರಾದ ಕೆಂಪುಕೋಟೆ ಮೂಕಸಾಕ್ಷಿಯಾಗಿತ್ತು. ದೇಶವಿದೇಶಗಳ ಪ್ರತಿಷ್ಠಿತ ರಾಯಭಾರಿಗಳು, ರಾಜ ಪ್ರತಿನಿಧಿಗಳು ಮತ್ತು ಗೌರವಾನ್ವಿತ ಪ್ರವಾಸಿಗರು ಈ ಕೆಂಪುಕೋಟೆಯ ಮೊಗಲರ ಆಸ್ಥಾನಕ್ಕೆ ಭೇಟಿ ನೀಡಿದ್ದರು. ಮೊಗಲರ ಕಾಲದಲ್ಲಿ ಆಗ್ರಾ ನಗರ ಮತ್ತು ಕೆಂಪುಕೋಟೆ ಎರಡೂ ಜಗದ್ವಿಖ್ಯಾತ ಸಂಗತಿಗಳಾಗಿದ್ದವು. ತಾಜ್‌ಮಹಲ್ ಅಸ್ತಿತ್ವಕ್ಕೆ ಬರುವ ಮುನ್ನವೇ ಆಗ್ರಾಗೆ ಜಗತ್ತಿನ ಭೂಪಟದಲ್ಲಿ ಸ್ಥಾನ ದೊರಕಲು ಕಾರಣ ಅಲ್ಲಿನ ಕೆಂಪುಕೋಟೆ.

ಆಗ್ರಾ ಕೋಟೆ ಪ್ರಾಚೀನ ನಿವೇಶನವೊಂದರ ಮೇಲೆ ನಿಂತಿದೆ. ಮೊದಲಿಗೆ ಇದು ಸಂಪೂರ್ಣ ಇಟ್ಟಿಗೆಗಳ ನಿರ್ಮಾಣವಾಗಿತ್ತು. ಚವ್ಹಾಣ್ ರಜಪೂತರ ಒಡೆತನದಲ್ಲಿತ್ತು. ಕ್ರಿ. ಶ. ೧೦೮೦ರ ದಾಖಲೆಗಳಲ್ಲಿ ಈ ಕೋಟೆ ಮೊದಲಬಾರಿಗೆ ಪ್ರಸ್ತಾಪಿಸಲ್ಪಟ್ಟಿದ್ದು ಘಜ್ನವಿಗಳು ಈ ಕೋಟೆಯನ್ನು ಆಕ್ರಮಿಸಿದಾಗ. ನಂತರ ದೆಹಲಿಯ ಮೊದಲ ಸುಲ್ತಾನನಾದ ಸಿಕಂದರ್ ಲೋದಿ (ಆಳ್ವಿಕೆಯ ಅವಧಿ ಕ್ರಿ. ಶ. ೧೪೮೭-೧೫೧೭) ತನ್ನ ರಾಜಧಾನಿಯನ್ನು ದೆಹಲಿಯಿಂದ ಆಗ್ರಾಕ್ಕೆ ಬದಲಾಯಿಸಿದ. ಆಗ್ರಾದ ಈ ಕೋಟೆ ಹೆಚ್ಚು ಬಲಿಷ್ಠವಾಗಿದ್ದ ಕಾರಣಕ್ಕೇ ಸಿಕಂದರ್ ಲೋದಿ ರಾಜಧಾನಿ ಬದಲಾವಣೆಯ ತೀರ್ಮಾನವನ್ನು ತೆಗೆದುಕೊಂಡಿದ್ದು ಎಂದು ಹೇಳಲಾಗುತ್ತದೆ. ಅವನ ಮಗ ಇಬ್ರಾಹಿಂ ಲೋದಿ ಕೂಡ ಆಗ್ರಾವನ್ನೇ ರಾಜಧಾನಿಯಾಗಿಟ್ಟುಕೊಂಡು ಒಂಭತ್ತು ವರ್ಷ ಆಳ್ವಿಕೆ ನಡೆಸಿದ. ಲೋದಿಗಳ ಕಾಲದಲ್ಲಿ ಆಗ್ರಾಕ್ಕೆ ದೆಹಲಿಯ ನಂತರದ ಪ್ರಮುಖ ನಗರ ಎಂಬ ಗೌರವ ಸಂದಿತು. ಇವರ ಕಾಲದಲ್ಲಿ ಆಗ್ರಾದ ಕೋಟೆಯೊಳಗೆ ಅನೇಕ ಬಾವಿಗಳು, ಅರಮನೆಗಳು ಮತ್ತು ಮಸೀದಿಗಳನ್ನು ಕಟ್ಟಿಸಲಾಯಿತು.

ಕ್ರಿ. ಶ. ೧೫೨೬ರಲ್ಲಿ ಮೊದಲನೇ ಪಾಣಿಪತ್ ಕದನದಲ್ಲಿ ಕಾಬೂಲಿನ ಮೊಗಲ್ ನಾಯಕ ಬಾಬರ್, ಇಬ್ರಾಹಿಂ ಲೋದಿಯನ್ನು ಸೋಲಿಸಿ ಆಗ್ರಾ ಕೋಟೆಯನ್ನು ವಶ ಪಡಿಸಿಕೊಂಡ. ಕೋಟೆಯಲ್ಲಿದ್ದ ಕೊಹಿನೂರ್ ವಜ್ರವೂ ಸೇರಿದಂತೆ ಅಪಾರ ಸಂಪತ್ತು ಬಾಬರನ ವಶವಾಯಿತು. ಇಬ್ರಾಹಿಂ ಕಟ್ಟಿಸಿದ್ದ ಅರಮನೆಯಲ್ಲೆ ಬಾಬರ್ ವಾಸಿಸಿದನು. ಇದೇ ಅರಮನೆಯ ಒಳಾವರಣದಲ್ಲಿ ಬಾಬರ್ ಒಂದು ಸುಂದರ ಮೆಟ್ಟಿಲು ಬಾವಿ (step-well)ಯನ್ನು ಕಟ್ಟಿಸಿದ. ಬಾಬರ್ ಆಗ್ರಾ ಕೋಟೆಯಲ್ಲೆ ಕೊನೆಯುಸಿರೆಳೆದ.

ಬಾಬರ್‌ನ ಮಗ ಹುಮಾಯೂನನ ಕಿರೀಟಧಾರಣೆ ಸಮಾರಂಭವು ಈ ಕೋಟೆಯಲ್ಲೆ ಜರುಗಿತು. ಇಬ್ರಾಹಿಂ ಲೋದಿಯ ಕಾಲದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಆಫ್ಘನ್ ಸರದಾರರು ಮೊಗಲ್ ಸಾಮ್ರಾಜ್ಯದ ಮೇಲೆ ಹಿಡಿತ ಸಾಧಿಸಲು





*ಸಭಾಂಗಣ (ದರ್ಬಾರ್ ಹಾಲ್)*

ಕಾಯುತ್ತಿದ್ದರು. ಕ್ರಿ. ಶ. ೧೫೪೦ರಲ್ಲಿ ಅವರು ಸೂರಿ ವಂಶದ ಷೇರ್‌ಷಾಹನ ನೇತೃತ್ವದಲ್ಲಿ ಹುಮಾಯೂನನನ್ನು ಸೋಲಿಸಿದರು. ಆಗ್ರಾ ಕೋಟೆ ಆಗ ಷೇರ್‌ಷಾಹನ ಸ್ವತ್ತಾಯಿತು. ಹುಮಾಯೂನ್ ಸೋಲಿನ ಅವಮಾನದಿಂದ ಇರಾನಿಗೆ ಓಡಿಹೋಗಿದ್ದರೂ ಕ್ರಿ. ಶ. ೧೫೫೫ರಲ್ಲಿ ವಿವಿಧ ಕದನಪ್ರಿಯ ಜನಾಂಗಗಳ ಸೈನಿಕರನ್ನು ಒಗ್ಗೂಡಿಸಿ ಸೂರಿವಂಶದ ಕಡೆಯ ದೊರೆ ಸಿಕಂದರ್ ಷಹಾನನ್ನು ಸೋಲಿಸಿ ಮತ್ತೊಮ್ಮೆ ಮೊಗಲ್ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆದರೆ ಆ ವೇಳೆಗೆ ಆಗ್ರಾದ ರಾಜಧಾನಿಯ ಪಟ್ಟ ದೆಹಲಿಗೆ ಬದಲಾಗಿತ್ತು. ಹುಮಾಯೂನ್ ದೆಹಲಿಯಲ್ಲೇ ದುರಂತ ಮರಣಕ್ಕೀಡಾದ ಮೇಲೆ ಅವನ ಮಗ ಅಕ್ಬರನನ್ನು ಅಧಿಕಾರಕ್ಕೆ ತರಲಾಯಿತು.

ಅಕ್ಬರನಿಗೆ ಆಗಿನ್ನೂ ೧೩ರ ಚಿಕ್ಕ ವಯಸ್ಸು. ಇಷ್ಟು ಚಿಕ್ಕ ವಯಸ್ಸಿನಲ್ಲೇ ಅಪೂರ್ವ ಮುನ್ನೋಟಗಳನ್ನು ಹೊಂದಿದ್ದ ಅಕ್ಬರ್ ಹದಿನೆಂಟು ವರ್ಷ ಪೂರೈಸುವುದರೊಳಗೆ ಅನೇಕ ಯುದ್ಧಗಳನ್ನು ಗೆದ್ದು ಮೊಗಲ್ ಸಾಮ್ರಾಜ್ಯಕ್ಕೆ ಸ್ಥಿರತೆಯನ್ನು ತಂದುಕೊಟ್ಟ. ದೆಹಲಿಗಿಂತಲೂ ಆಗ್ರಾ ಹೆಚ್ಚು ಸುರಕ್ಷಿತ, ಆಯಕಟ್ಟಿನ ಸ್ಥಳವೆಂದು ಅಕ್ಬರನ ಭಾವನೆಯಾಗಿತ್ತು. ಕ್ರಿ.ಶ.೧೫೫೮ರಲ್ಲಿ ರಾಜಧಾನಿಯನ್ನು ಆಗ್ರಾಕ್ಕೆ ಬದಲಾಯಿಸಿದನು. ಮತ್ತೊಮ್ಮೆ ಆಗ್ರಾ ಕೋಟೆ ಪ್ರಾಮುಖ್ಯತೆ ಪಡೆಯಿತು. ಅಲ್ಲಿಯವರೆಗೆ ಬರೀ ಇಟ್ಟಿಗೆಗಳ ರಚನೆಯಾಗಿದ್ದ ಕೋಟೆಯನ್ನು ಇನ್ನಷ್ಟು ಬಲಪಡಿಸುವ ಉದ್ದೇಶದಿಂದ ಅಕ್ಬರ್ ಇಡೀ ಕೋಟೆಯನ್ನು ಕೆಂಪುಮರಳುಗಲ್ಲಿನಿಂದ ನಿರ್ಮಿಸಲು ಆದೇಶಿಸಿದನು. ಸ್ವತಃ ಕುಶಲ ವಾಸ್ತುಶಿಲ್ಪಿ ಆಗಿದ್ದ ಅಕ್ಬರನ ಈ ಆದೇಶದ ಪರಿಣಾಮವಾಗಿ ಕೋಟೆಯ ಒಳಗೋಡೆಯ ಪದರವನ್ನು ಇಟ್ಟಿಗೆಯಿಂದಲೂ, ಹೊರಪದರವನ್ನು ಕೆಂಪುಮರಳು ಗಲ್ಲಿನಿಂದಲೂ ನಿರ್ಮಿಸಲಾಯಿತು. ಸುಮಾರು ೪,೦೦೦ ಶ್ರಮಿಕರು ೮ ವರ್ಷಗಳ ಕಾಲ ನಿರಂತರ ದುಡಿದು ಆಗ್ರಾದ ಕೆಂಪುಕೋಟೆಗೆ ಈಗಿನ ರೂಪವನ್ನು ನೀಡಿದರು. ಚಕ್ರವರ್ತಿ ಅಶೋಕನ ನಂತರ ಭಾರತ ಉಪಖಂಡದಲ್ಲಿ ಎರಡನೇ ಅತಿ ವಿಸ್ತಾರವಾದ ಸಾಮ್ರಾಜ್ಯವನ್ನು ಸಾಧಿಸಿದ್ದ ಭಾರತೀಯ ಅರಸನೆಂದರೆ ಅಕ್ಬರ್. ಆಗ್ರಾದ ಕೆಂಪು ಕೋಟೆಯಿಂದಲೇ ಅವನು ತನ್ನ ವಿಶಾಲ ಸಾಮ್ರಾಜ್ಯದ ಮೇಲೆ ಆಡಳಿತ ನಡೆಸಿದ.



*ಬಿಳಿ ಅಮೃತಶಿಲೆಯ ಅರಮನೆ*

ಇಡೀ ಕೆಂಪುಕೋಟೆ ಅರ್ಧವರ್ತುಲಾಕಾರದಲ್ಲಿದೆ. ಪರಿಧಿ ೨ ಕಿ.ಮೀ.ಗಳು. ಸರಳ ರೇಖೆ (Chord)ಯ ಭಾಗ ಯಮುನಾನದಿಗೆ ಸಮಾನಾಂತರವಾಗಿದೆ. ಗೋಡೆಗಳು ೭೦ ಅಡಿ ಎತ್ತರ ಇವೆ. ಅಕ್ಬರನ ಗೆಳೆಯ ಮತ್ತು ಇತಿಹಾಸಕಾರ ಅಬುಲ್ ಫಜಲ್ ಕೆಂಪು ಕೋಟೆಯೊಳಗೆ ಬೆಂಗಾಲಿ ಮತ್ತು ಗುಜರಾತ್ ಶೈಲಿಯ ೫೦೦ ಸುಂದರ ಕಟ್ಟಡಗಳು ಇದ್ದುದನ್ನು ಪ್ರಸ್ತಾಪಿಸಿದ್ದಾನೆ. ಆದರೆ ಮುಂದೆ ಷಾಜಹಾನ್ ತನ್ನ ಬಿಳಿ ಅಮೃತಶಿಲೆ ಅರಮನೆ (ಈಗಲೂ ಇದನ್ನು ನೋಡಬಹುದು) ಯನ್ನು ನಿರ್ಮಿಸಲು ಸ್ಥಳಾವಕಾಶಕ್ಕಾಗಿ ಅನೇಕ ಕಟ್ಟಡಗಳನ್ನು ನೆಲಸಮಗೊಳಿಸಿದ. ಮತ್ತೆ ಕೆಲವನ್ನು ಬ್ರಿಟಿಷರು ನಾಶಪಡಿಸಿದರು. ಈಗ ೩೦ ಪ್ರಮುಖ ಕಟ್ಟಡಗಳು ಮಾತ್ರ ಉಳಿದಿವೆ. ಅಕ್ಬರ್ ಹೆಸರಿನ ದ್ವಾರ, ದೆಹಲಿ ದ್ವಾರ ಮತ್ತು ಬೆಂಗಾಲಿ ಮಹಲ್‌ಗಳು ಗಮನಾರ್ಹವಾಗಿವೆ. ದೆಹಲಿಯ ದಿಕ್ಕಿಗೆ ಮುಖ ಮಾಡಿರುವ ದೆಹಲಿ ದ್ವಾರ ಕೋಟೆಯ ಪ್ರವೇಶದ್ವಾರವಾಗಿದೆ.

ಅಕ್ಬರನ ಮರಣಾನಂತರ ಅವನ ಮಗ ಜಹಾಂಗೀರನ ಕಿರೀಟಧಾರಣೆಯೂ ಆಗ್ರಾದ ಕೋಟೆಯಲ್ಲೇ ಜರುಗಿತು. ಜಹಾಂಗೀರ್ ತನ್ನ ಆಡಳಿತವನ್ನು ಬಹುಪಾಲು ಕಾಬೂಲ್, ಲಾಹೋರ್ ಮತ್ತು ಕಾಶ್ಮೀರಗಳಿಂದಲೇ ನಡೆಸಿದರೂ ಆಗಾಗ ಆಗ್ರಾಕ್ಕೆ ಬಂದು ಕೆಂಪುಕೋಟೆಯಲ್ಲಿ ನೆಲೆಸುತ್ತಿದ್ದ. ಆಗ್ರಾ ಈಗಲೂ ಸಾಮ್ರಾಜ್ಯದ ರಾಜಧಾನಿಯಾಗಿಯೇ ಇತ್ತು. ಜಹಾಂಗೀರನ ಮಗ ಷಾಜಹಾನ್ ಅಧಿಕಾರದ ಗದ್ದುಗೆ (ಕ್ರಿ. ಶ. ೧೬೨೮) ಹಿಡಿಯುವ ವೇಳೆಗಾಗಲೆ ಮೊಗಲ್ ಆಡಳಿತ ಆರಂಭವಾಗಿ ಒಂದು ಶತಮಾನವೇ ಕಳೆದುಹೋಗಿತ್ತು. ಈ ಅವಧಿಯಲ್ಲಿ ಆಗ್ರಾ ಮತ್ತು ಆಗ್ರಾದ ಕೆಂಪುಕೋಟೆ ಎರಡೂ ಖ್ಯಾತಿಯ ಶಿಖರದಲ್ಲಿ ವಿಜೃಂಭಿಸುತ್ತಿದ್ದವು. ಈ ಖ್ಯಾತಿಯ ಪರಂಪರೆಯನ್ನು ಷಾಜಹಾನ್ ತಾಜ್‌ಮಹಲ್ ಎಂಬ ಜಗತ್ತಿನ ಅದ್ಭುತವನ್ನು ನಿರ್ಮಿಸುವ ಮೂಲಕ ಮತ್ತಷ್ಟು ಉಜ್ವಲಗೊಳಿಸಿದನು. ಕೆಂಪುಕೋಟೆಗೆದುರಾಗಿ ಯಮುನಾ ನದಿಯ ದಡದಲ್ಲೆ ಒಂದೂವರೆ ಕಿ.ಮೀ. ದೂರದಲ್ಲಿರುವ ಬಿಳಿ ಅಮೃತ ಶಿಲೆಯ ಸುಂದರ ತಾಜಮಹಲ್ ಷಾಜಹಾನನ ನೆಚ್ಚಿನ ಮಡದಿ ಮಮ್ತಾಜ್ ಮಹಲಳ ಜ್ಞಾಪಕಾರ್ಥ ನಿರ್ಮಾಣಗೊಂಡಿತು. ಕೆಂಪುಕೋಟೆಯ ಅರಮನೆಯಿಂದ ತಾಜ್‌ಮಹಲ್ ನೋಟ ಅತ್ಯಂತ ಮನಮೋಹಕ.

**ಆಗ್ರಾದ ಕೆಂಪುಕೋಟೆಯ ಒಳಗೆ ಸುತ್ತಾಡುವುದು ಒಂದು ಅವಿಸ್ಮರಣೀಯ ಅನುಭವ, ಜೊತೆಗೆ ಮೊಗಲ್ ವಾಸ್ತುಶಿಲ್ಪ ಶೈಲಿಯ ಸೌಂದರ್ಯವನ್ನು ಸವಿಯುವ ಒಳ್ಳೆಯ ಅವಕಾಶ. ಅಮೃತಶಿಲೆಯನ್ನು ಕೊರೆದು ತಿಳಿಹಸಿರು ಶಿಲೆಯ ಬಳ್ಳಿಗಳನ್ನು ಕೆತ್ತಿ ಕೂರಿಸಿರುವುದು ಮೊಗಲ್ ಕಲಾವಿದರ ನೈಪುಣ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಕೆಂಪುಕೋಟೆಯ ಸಂದರ್ಶನವಿಲ್ಲದೆ ಆಗ್ರಾ ಭೇಟಿ ಸಂಪೂರ್ಣವಾಗುವುದಿಲ್ಲ.**

ತಾಜ್‌ಮಹಲನ್ನು ಆಗ್ರಾದಲ್ಲೇ ನಿರ್ಮಿಸಿದರೂ ಷಾಜಹಾನ್ ರಾಜಧಾನಿಯನ್ನು ಆಗ್ರಾದಿಂದ ದೆಹಲಿಗೆ ಬದಲಾಯಿಸಿದ. ಆಗ್ರಾದ ಕೆಂಪುಕೋಟೆಯಿಂದ ಸ್ಫೂರ್ತಿಗೊಂಡು ದೆಹಲಿಯಲ್ಲೂ ಒಂದು ಕೆಂಪುಕೋಟೆಯನ್ನು ಕಟ್ಟಿಸಿದ. ಕ್ರಿ.ಶ.೧೬೫೮ರಲ್ಲಿ ಔರಂಗಜೇಬ್ ತನ್ನ ತಂದೆ ಷಾಜಹಾನನ್ನೆ ಆಗ್ರಾದ ಕೆಂಪುಕೋಟೆಯಲ್ಲಿ ಗೃಹ ಬಂಧನಕ್ಕೊಳಪಡಿಸಿ ಅವನಿಂದ ಅಧಿಕಾರ ಕಿತ್ತುಕೊಂಡ. ಕೋಟೆಗೆ ಯಮುನಾ ನದಿಯಿಂದ ನೀರು ಸರಬರಾಜಾಗದಂತೆ ತಡೆದ. ಕುಡಿಯಲು ನೀರು ಸಿಕ್ಕದ ಷಾಜಹಾನ್ ಅಂತಿಮವಾಗಿ ಮಗನಿಗೆ ಶರಣಾದ. ತಾನೇ ಕಟ್ಟಿಸಿದ ತಾಜ್‌ಮಹಲನ್ನು ವೀಕ್ಷಿಸುತ್ತ ಗತಿಸಿದ ಮಡದಿ ಮಮ್ತಾಜ್ ಮಹಲಳ ನೆನಪಿನಲ್ಲಿ ದಿನಕಳೆಯುತ್ತ ಎಂಟು ವರ್ಷ ಸವೆಸಿ ಕೊನೆಗೆ ಕೆಂಪುಕೋಟೆಯಲ್ಲೆ ಖೈದಿಯಾಗಿ ಕೊನೆಯುಸಿರೆಳೆದ. ಅವನನ್ನು ತಾಜ್‌ಮಹಲಿನಲ್ಲಿ ಸಮಾಧಿ ಮಾಡಲಾಯಿತು.



ಕೋಟೆಯ ಒಂದು ಕಾವಲು ಗೋಪುರ

ಷಾಜಹಾನನ ನಂತರ ಆಗ್ರಾದ ಕೆಂಪುಕೋಟೆ ತನ್ನ ವೈಭವವನ್ನು ಕಳೆದುಕೊಳ್ಳತೊಡಗಿತು. ಸ್ವತಃ ಮೊಗಲ್ ಸಾಮ್ರಾಜ್ಯವೇ ಕುಸಿಯತೊಡಗಿತ್ತು. ಔರಂಗಜೇಬನಿಗೆ ದೆಹಲಿಯ ವಾಸ್ತವ್ಯವೇ ಹೆಚ್ಚು ಪ್ರಿಯವಾಗಿತ್ತು. ಅವನ ವಿರುದ್ಧ ಗೆರಿಲ್ಲಾ ಯುದ್ಧಮಾಡಿ ಸಿಕ್ಕುಬಿದ್ದ ಮರಾಠರ ನಾಯಕ ಶಿವಾಜಿ ಆಗ್ರಾದ ಕೆಂಪುಕೋಟೆಗೆ ಬಂದಾಗ (ಕ್ರಿ.ಶ.೧೬೬೬ರಲ್ಲಿ) ಅವನನ್ನು ಔರಂಗಜೇಬ್ ಮೋಸದಿಂದ ಸೆರೆಹಿಡಿಸಿದ. ಅಷ್ಟೇ ಮೋಸದ ವಿಧಾನದಿಂದ ಶಿವಾಜಿ ಕೆಂಪುಕೋಟೆಯಿಂದ ತಪ್ಪಿಸಿಕೊಂಡ. ಔರಂಗಜೇಬನ ನಂತರ ಮೊಗಲ್ ಸಾಮ್ರಾಜ್ಯ ಎಲ್ಲಾ ದಿಕ್ಕುಗಳಲ್ಲೂ ಹಂಚಿ ಹರಿದುಹೋಗತೊಡಗಿತು. ನಂತರದ ಮೊಗಲ್ ದೊರೆಗಳೆಲ್ಲ ದೆಹಲಿಯಲ್ಲೆ ಉಳಿದಿದ್ದರಿಂದ ಆಗ್ರಾದ ಕೆಂಪುಕೋಟೆ ಸಂಪೂರ್ಣ ಅವಜ್ಞೆಗೊಳಗಾಯಿತು. ಸ್ವಲ್ಪಕಾಲ ಜಾಟರು ಮತ್ತು ಮರಾಠ ತುಕಡಿಗಳ ವಶದಲ್ಲಿತ್ತು. ಆ ವೇಳೆಗಾಗಲೇ ಬ್ರಿಟಿಷರು ಭಾರತದಲ್ಲಿ ಆಳವಾಗಿ ಬೇರುಬಿಟ್ಟಿದ್ದರು. ದೇಶೀಯ ರಾಜರುಗಳನ್ನು ಸೋಲಿಸಿ ಅವರ ಕೋಟೆ ಕೊತ್ತಲಗಳನ್ನು ತಮ್ಮದಾಗಿಸಿಕೊಳ್ಳುತ್ತಿದ್ದರು. ಕ್ರಿ. ಶ. ೧೮೦೩ರಲ್ಲಿ ಆಗ್ರಾದ ಕೆಂಪುಕೋಟೆ ಬ್ರಿಟಿಷರ ಪಾಲಾಯಿತು. ಅವರು ಇಡೀ ಕೋಟೆಯನ್ನು ಶಸ್ತ್ರಾಗಾರವನ್ನಾಗಿ ಪರಿವರ್ತಿಸಿದರು. ದೊಡ್ಡ ಸಾಮ್ರಾಜ್ಯದ ಕೇಂದ್ರ ಬಿಂದುವಾಗಿದ್ದ ಕೆಂಪುಕೋಟೆ ಯಃಕಶ್ಚಿತ್ ಶಸ್ತ್ರಾಸ್ತ್ರಗಳ ಗೋದಾಮು ಆಗಿ ರೂಪಾಂತರ ಹೊಂದಿದ್ದು ಇತಿಹಾಸದ ಒಂದು ವ್ಯಂಗ್ಯವೇ ಸರಿ. ಇಲ್ಲಿಂದ ಮುಂದೆ ಆಗ್ರಾದ ಕೆಂಪುಕೋಟೆ ಯಾವ ಪ್ರಮುಖ ಘಟನೆಗೂ ಮೂಕ ಸಾಕ್ಷಿಯಾಗಲಿಲ್ಲ. ಸ್ವಾತಂತ್ರ್ಯಾನಂತರವಷ್ಟೆ ಅದು ಭಾರತ ಗಣರಾಜ್ಯದ ಭಾಗವಾಗಿದ್ದು.

ಆಗ್ರಾದ ಕೆಂಪುಕೋಟೆಯ ಒಳಗೆ ಸುತ್ತಾಡುವುದು ಒಂದು ಅವಿಸ್ಮರಣೀಯ ಅನುಭವ, ಜೊತೆಗೆ ಮೊಗಲ್ ವಾಸ್ತುಶಿಲ್ಪ ಶೈಲಿಯ ಸೌಂದರ್ಯವನ್ನು ಸವಿಯುವ ಒಳ್ಳೆಯ ಅವಕಾಶ. ಅಮೃತಶಿಲೆಯನ್ನು ಕೊರೆದು ತಿಳಿಹಸಿರು ಶಿಲೆಯ ಬಳ್ಳಿಗಳನ್ನು ಕೆತ್ತಿ ಕೂರಿಸಿರುವುದು ಮೊಗಲ್ ಕಲಾವಿದರ ನೈಪುಣ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಕೆಂಪುಕೋಟೆಯ ಸಂದರ್ಶನವಿಲ್ಲದೆ ಆಗ್ರಾ ಭೇಟಿ ಸಂಪೂರ್ಣವಾಗುವುದಿಲ್ಲ.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವವಿಮಾ ನಿಗಮ, ಹಾಸನ - ೫೭೩ ೨೦೧

# ದೊಂಬಿ



ಇಡೀ ದಿನ
ನಾನು
ರಕ್ತದಲ್ಲಿ
ನೆನೆಯುತ್ತ
ಬಿದ್ದಿರುತ್ತೇನೆ.

ಈ ರಕ್ತ
ನಿಧಾನವಾಗಿ
ಹೆಪ್ಪುಗಟ್ಟುತ್ತದೆ
ಮತ್ತು ಕಪ್ಪಾಗತೊಡಗುತ್ತದೆ.

ರಕ್ತದ ಒಂದು ಚಿಪ್ಪು
ಆಕಾರ ಪಡೆಯುತ್ತದೆ
ನಾನದನ್ನು ಉಗುರಿನಿಂದ
ಕೆರೆಯುತ್ತೇನೆ.

ಹಕ್ಕಳೆಗಳ ಜತೆ
ಚರ್ಮ ಕೂಡ
ಸುಲಿಯತೊಡಗುತ್ತದೆ.

ಮೂಗಿನ ತುಂಬ
ರಕ್ತದ ಹಸಿ ವಾಸನೆ
ಬಟ್ಟೆಯ ಮೇಲೆಲ್ಲ
ರಕ್ತದ ಕಪ್ಪು ಕಲೆಗಳು.

ನಾನು ದಿನವೂ
ರಕ್ತದಲ್ಲಿ ಅದ್ದಿದ
ಪತ್ರಿಕೆಯನ್ನು
ಕೊಂಡುಕೊಳ್ಳುತ್ತೇನೆ.

ಮೂಲ : ಗುಲ್ಜಾರ್

ಕನ್ನಡಕ್ಕೆ : ಎಂ. ಡಿ. ಒಕ್ಕುಂದ, ಮುಖ್ಯಸ್ಥರು : ಕನ್ನಡ ವಿಭಾಗ, ಶ್ರೀ ಸಿದ್ದೇಶ್ವರ ಸರಕಾರಿ ಪದವಿ ಕಾಲೇಜು, ನರಗುಂದ (ಗದಗ ಜಿಲ್ಲೆ)

# ಗ್ರಹಣಗಳಲ್ಲದ ಗ್ರಹಣಗಳು

# ಒಂದಲ್ಲ ನಾಲ್ಕು

ಡಾ|| ಬಿ. ಎಸ್. ಶೈಲಜಾ

**ಮೇ** ತಿಂಗಳ ಇಪ್ಪತ್ತೊಂದರ ಸಂಜೆ. ಸಂಜೆ ಮಳೆಗಳಿಂದ ಬಿಡುವು. ದೂಳನ್ನು ಒರೆಸಿದಂತಾಗಿದ್ದ ಸ್ವಚ್ಛ, ನೀಲಿ ಆಕಾಶ ಎಲ್ಲರನ್ನೂ ಕೈಬೀಸಿ ಕರೆಯಿತು. ಅಲ್ಲೊಂದು ಅದ್ಭುತ ದೃಶ್ಯವೇ ಅವರಿಗಾಗಿ ಕಾದಿತ್ತು. ಬಾಲಚಂದ್ರನ ಪಕ್ಕ ಫಳಗುಟ್ಟುವ ಚುಕ್ಕೆ ಕಂಡಿತು. ತಾರಸಿಗಳ ಮೇಲೆ ನಿಂತವರು ಕೆಳಗಿಳಿಯಲೇ ಇಲ್ಲ. ಸುಮಾರು ಎಂಟೂವರೆಯ ಹೊತ್ತಿಗೆ ಚಂದ್ರ ದಿಗಂತದ ಅಂಚು ಮುಟ್ಟಿ ಕೆಂಪಾದಾಗ, ಆ ಚುಕ್ಕೆ ಅದರಿಂದ ಸ್ವಲ್ಪ ದೂರ ಸರಿದದ್ದು ಎಲ್ಲರಿಗೂ ಸ್ಪಷ್ಟವಾಗಿಯೇ ಕಂಡಿತು. ಅದೇ ಶುಕ್ರಗ್ರಹ. ಚಂದ್ರ ಅದರ ಮುಂದೆ ಹಾದು ಹೋದದ್ದು ದೆಹಲಿ ಮತ್ತು ಇನ್ನೂ ಉತ್ತರದ ಭಾಗದವರಿಗೆ ಕಂಡಿತು. ನಮಗೆ ಕಂಡದ್ದು ಹೀಗೆ ಸವರಿಕೊಂಡು ಹೋದ ನೋಟ ಮಾತ್ರ.

ಸೂರ್ಯನನ್ನು 'ಗ್ರಹಣ'ದಂದು ಮುಚ್ಚುವ ಚಂದ್ರ ದಿನವಿಡೀ ಇತರ ನಕ್ಷತ್ರಗಳನ್ನೋ ಗ್ರಹಗಳನ್ನೋ ಮುಚ್ಚಿಡುವ ಆಟ ಆಡುತ್ತಲೇ ಇರುತ್ತಾನೆ. ಇದಕ್ಕೆ ಆಚ್ಛಾದನೆ ಎಂಬ ಹೆಸರಿದೆ. ಈ ಆಟಗಳೇ ನಭಾವಲೋಕನ ಅಂಕಣಕ್ಕೆ ಜೀವ ತುಂಬಿವೆ. ಆಚ್ಛಾದನೆಯ ಈ ನೋಟಗಳು ಯಾವಾಗಲೂ ನಮಗೇ ಮೀಸಲಲ್ಲ. ಒಮ್ಮೆ ನಮಗೆ, ಇನ್ನೊಮ್ಮೆ ಜಪಾನಿಗೆ, ಮತ್ತೊಮ್ಮೆ ಅಮೆರಿಕಕ್ಕೆ... ಹೀಗೆ. ಕೆಲವು ಬಾರಿ ಸಮುದ್ರದ ಮೇಲಿನ ಯಾತ್ರಿಗಳಿಗೆ ಮಾತ್ರವೇ ಕಾಣಬಹುದು. ಈ ತಿಂಗಳಲ್ಲಿ ಇಂಥ ನಾಲ್ಕು (ಗ್ರಹಣವಲ್ಲದ) ಆಚ್ಛಾದನೆಗಳಿವೆ. ಇವುಗಳಲ್ಲಿ ಎರಡು ಬೆಳಿಗ್ಗೆ ಬೇಗ ಏಳುವವರಿಗೆ, ಇನ್ನೊಂದು ೧೪ರ ಸಂಜೆಗೆ, ಮತ್ತೊಂದು ಅಮೆರಿಕದವರಿಗೆ.

ಈ ಆಟದ ರಸಾಸ್ವಾದನೆಗೆ ಸ್ವಲ್ಪ ಸಿದ್ಧತೆ ಮಾಡಿಕೊಳ್ಳಿ. ನವೆಂಬರ್ ೫ರಂದು ಬೆಳಿಗ್ಗೆ ಬೇಗ ಏಳಬೇಕು. ಸುಮಾರು ೫:೩೦. ನೆತ್ತಿಯ ಮೇಲೆ ಅರ್ಧ ಚಂದ್ರ ಪಕ್ಕಕ್ಕೊಂದು ಚುಕ್ಕೆ (ಮಿನುಗುವುದಿಲ್ಲ - ಆದ್ದರಿಂದ ಗ್ರಹ - ಇದೇ ಶನಿ). ಇನ್ನೊಂದು ಪಕ್ಕ ಮಿನುಗುವ ಚುಕ್ಕೆ-ಮಘ ನಕ್ಷತ್ರ. ಪೂರ್ವಕ್ಕೆ ದೃಷ್ಟಿಹರಿಸಿ. ಎರಡು ಫಳಗುಟ್ಟುವ ಚುಕ್ಕೆಗಳು ನಿಮ್ಮ ಕಣ್ಸೆಳೆಯುತ್ತವೆ. ಶುಕ್ರ ಮತ್ತು ಗುರು. ತೀರಾ ಕ್ಷೀಣವಾದ ಇನ್ನೊಂದು ಚುಕ್ಕೆಯೂ ಕಾಣಬಹುದು. ಅದು ಕನ್ಯಾ ರಾಶಿಯ ಮೂರನೆಯ ಪ್ರಖರ ನಕ್ಷತ್ರ-ಗಾಮಾ ವರ್ಜಿನಿಸ್. ಕ್ಯಾಮೆರಾದಲ್ಲಿ ಇವನ್ನು ಸೆರೆಹಿಡಿಯುವ ಪ್ರಯತ್ನ ಮಾಡಿ.

ಪುನಃ ನೀವು ಬೆಳಿಗ್ಗೆ ಬೇಗ ಏಳಬೇಕಾದದ್ದು ಒಂಬತ್ತರಂದು. ನೆತ್ತಿಯ ಮೇಲೆ ಶನಿ, ಮಘ ಇವೆ. ಆದರೆ ಚಂದ್ರ ಓಡಿಬಿಟ್ಟಿದ್ದಾನೆ. ಈಗದು ಗುರುಗ್ರಹದ ಪಕ್ಕ. ಗಾಮಾ ವರ್ಜಿನಿಸ್ ಕೂಡ ಅಲ್ಲೇ ಇದೆ. ಆದರೆ ಶುಕ್ರ ಮುಂದಕ್ಕೆ ಓಡಿಬಿಟ್ಟಿದೆ. ಆ ದಿನ ಮಧ್ಯಾಹ್ನ ಗುರುಗ್ರಹವನ್ನು ಚಂದ್ರ ಮರೆಮಾಡುತ್ತದೆ. ಈ ನೋಟ ಅಮೆರಿಕ, ಗ್ರೀನ್ ಲೆಂಡ್ ಮತ್ತು ಐಸ್‌ಲೆಂಡ್‌ನವರಿಗೆ ಮಾತ್ರ. ಮರುದಿನ ಅಂದರೆ ಹತ್ತರ ಬೆಳಿಗ್ಗೆ ಪುನಃ ಪೂರ್ವಕ್ಕೆ ನೋಟ ಹರಿಸಿ. ಗುರು ಮತ್ತು ಗಾಮಾ ಹಾದುಬಂದ ಚಂದ್ರ ಈಗ ಶುಕ್ರದೊಡನೆ ಕಣ್ಣು ಮುಚ್ಚಾಲೆಗೆ ಸಿದ್ಧವಾಗಿದ್ದಾನೆ. ಏಳುವುದು ತಡ ಮಾಡಬೇಡಿ. ಆಗ ಶುಕ್ರ ಕಳೆದೇ ಹೋಗಿರುತ್ತದೆ. ಶುಕ್ರ ಉದಯಿಸುವುದು ೪:೦೦ ಗಂಟೆಗೆ, ಚಂದ್ರ ಉದಯಿಸಿದ ಐದು ನಿಮಿಷದ ನಂತರ. ಅಲ್ಲಿಂದ ಮುಂದೆ ಅದನ್ನು ಚಂದ್ರ ಅಟ್ಟಿಸಿಕೊಂಡು ಬರುವ ನೋಟವನ್ನು ಹಂತ ಹಂತವಾಗಿ ಗಮನಿಸಿ. ಕ್ಯಾಮೆರಾ ಇದ್ದವರು ಚಿತ್ರೀಕರಿಸಲೂಬಹುದು. ೪:೪೪ ನಿಮಿಷಕ್ಕೆ ಶುಕ್ರನನ್ನು ಚಂದ್ರ ಮರೆ ಮಾಡಿಬಿಡುವುದು. ಈ ಆಟ ಮುಗಿಯುವ ವೇಳೆಗೆ (೫:೫೨) ಬೆಳಕಾಗಿಬಿಟ್ಟಿರುತ್ತದೆ. ಆಟದ ಅಂತ್ಯ ಯೂರೋಪಿಯನ್ನರಿಗೆ ನೋಡಲು ಸಿಗುತ್ತದೆ. ಶುಕ್ರ ''ಕಳೆದು ಹೋಗುವ'' ಈ ಆಟವನ್ನು ನೋಡಲು ಬೇಗ ಏಳಲೇಬೇಕು.

ಆಟದ ಮೂರನೆ ಭಾಗ ಮರುದಿನಕ್ಕೆ. ಹನ್ನೊಂದರ ಬೆಳಿಗ್ಗೆ ಮತ್ತೆ ಪೂರ್ವ ದಿಕ್ಕಿಗೆ ದೃಷ್ಟಿಹರಿಸಿ. ಶುಕ್ರನನ್ನು ದಾಟಿ ಬಂದ ಚಂದ್ರ ಈಗ ಮಂಗಳದೊಡನೆ ಕಣ್ಣು ಮುಚ್ಚಾಲೆ ಆರಂಭಿಸುತ್ತಾನೆ. ಶುಕ್ರನಷ್ಟು ಪ್ರಕಾಶವಿರದಿದ್ದರೂ ಮಂಗಳ ಬರಿಗಣ್ಣಿಗಂತೂ ಕಾಣುತ್ತದೆ. ತೆಳ್ಳನೆಯ ಗೆರೆಯ ಚಂದ್ರನನ್ನು ಹುಡುಕಿ. ಅದಕ್ಕೆ ಅಂಟಿಕೊಂಡಂತೆ ಕಾಣುವ ಕೆಂಪು ಚುಕ್ಕೆಯೇ ಮಂಗಳ.

ಹೀಗೆ ಸೂರ್ಯೋದಯಕ್ಕೆ ಮುನ್ನ ಏಳುವುದನ್ನು ರೂಢಿಸಿಕೊಂಡಾಗ ಸಿಗುವ ಬೋನಸ್ ಅಂಶವೂ ಇದೆ. ಅದೇ ೮ರಂದು ಗರಿಷ್ಠ ಮುಟ್ಟುವ ಟಾರಿಡ್ ಉಲ್ಕಾವೃಷ್ಟಿ. ವೃಷಭದಿಂದ ಹೊರಟಂತೆ ಕಾಣುವ ಉಲ್ಕೆಗಳು ಗಂಟೆಗೆ ೮ರಿಂದ ೧೦ರಂತೆ ಕಾಣುವುವು. ಅತಿ ಚಿಕ್ಕ ಅವಧಿಯ ಎನ್ಕೆ ಎಂಬ ಧೂಮಕೇತುವಿನ ತುಣುಕುಗಳು ಇವು.

ತಿಂಗಳ ಕೊನೆಗೆ ಮತ್ತೆ ಪೂರ್ವದತ್ತ ನೋಟ ಹರಿಸಿ. ಗುರು ಮತ್ತು ಗಾಮಾ ವರ್ಜಿನಿಸ್ ಅನ್ನು ಬಿಟ್ಟು ಓಡಿಬಂದ ಶುಕ್ರ ಆಲ್ಫಾವರ್ಜಿನಿಸ್ ಅಂದರೆ ಚಿತ್ರಾ (ಸ್ಪಿಕಾ) ನಕ್ಷತ್ರದ ಜತೆಗೂಡಿರುವುದನ್ನು ಕಾಣಬಹುದು. ಅದರ ಕೆಳಗಿನ ಕೆಂಪು ಚುಕ್ಕೆ ಮಂಗಳ.

ಇನ್ನು ಸಂಜೆಯ ಆಕಾಶದ ನಕ್ಷೆಯತ್ತ ದೃಷ್ಟಿ ಹರಿಸೋಣ. ಯಾವುದೇ ಗ್ರಹ ಇಲ್ಲಿಲ್ಲ. ಆದ್ದರಿಂದ ಚಂದ್ರನೇ ಮಾರ್ಗದರ್ಶಿಯಾಗಬೇಕು. ಆದರೆ ಚಂದ್ರ ಸಿಗುವುದು ದೀಪಾವಳಿಯ ಸಡಗರದ ನಂತರವೇ. ಚಿಂತೆಯಿಲ್ಲ. ಪ್ರಕಾಶಮಾನವಾದ ನಕ್ಷತ್ರಪುಂಜಗಳನ್ನು ಗುರುತಿಸಲು ಪ್ರಯತ್ನಿಸಿ. ಬೇಸಿಗೆ ತ್ರಿಕೋಣ ಎಂದು ಯೂರೋಪಿಯನ್/ಅಮೆರಿಕನ್ನರಿಂದ ಹೆಸರು ಪಡೆದುಕೊಂಡಿರುವ ದೆನೆಬ್ (ಆಲ್ಫಾಸಿಗ್ನಸ್, ರಾಜಹಂಸ ಪುಂಜದ ಪ್ರಕಾಶಮಾನ ನಕ್ಷತ್ರ), ವೇಗಾ (ಅಭಿಜಿತ್, ಆಲ್ಫ ಲೈರಾ, ವೀಣಾ ಪುಂಜದ ಅತಿ ಪ್ರಕಾಶಮಾನ ನಕ್ಷತ್ರ) ಮತ್ತು ಆಲ್ಟೇರ್ (ಶ್ರವಣ, ಆಲ್ಫಾ ಆಕ್ವಿಲಾ, ಗರುಡ ಪುಂಜದ್ದು) ಈ ಮೂರೂ ನಕ್ಷತ್ರಗಳನ್ನು ತೆಳ್ಳನೆಯ ಮೋಡವಿದ್ದಾಗಲೂ ಗುರುತಿಸುವುದು ಕಷ್ಟವಾಗುವುದಿಲ್ಲ. ಪಶ್ಚಿಮದ ಅಂಚಿನಲ್ಲಿ ವೃಶ್ಚಿಕದ ಬಾಲದ ಭಾಗ ತಿಂಗಳ ಮೊದಲಲ್ಲಿ ಮಾತ್ರ ಕಾಣುತ್ತದೆ. ಧನುರಾಶಿಯ ಸೊಬಗನ್ನು ಆಸ್ವಾದಿಸಲು ಸಂಜೆಗೆಂಪು ಅಡ್ಡಿಯಾಗುವುದು. ಕ್ಷೀಣವಾದ ಮಕರ ಕುಂಭಗಳ ದಕ್ಷಿಣಕ್ಕೆ ಹೊಳೆಯುವ ಏಕಾಂಗಿ ನಕ್ಷತ್ರ. ದಕ್ಷಿಣ ಮೀನ



*ಮೇ ೨೧ರಂದು ಸಂಜೆ ಕಂಡ ಶುಕ್ರ-ಚಂದ್ರ ಸಮಾಗಮ. ಇಂಥ ದೃಶ್ಯ ಈ ತಿಂಗಳಲ್ಲೂ ಕಾಣಲಿದೆ*




*ನವೆಂಬರ್ ೩೦ರಂದು ಬೆಳಗಿನ ಜಾವ ಪೂರ್ವದಲ್ಲಿ ಕಾಣುವ ದೃಶ್ಯ*

ಪುಂಜದ ಮೀನಾಕ್ಷಿ (ಫಾಮಲ್‌ಹಾಟ್) ಅದರಿಂದ ದಕ್ಷಿಣಕ್ಕೆ ಕಾಣುವ ಎರಡು ಚುಕ್ಕೆಗಳು ಬಕ (ಗ್ರುಸ್) ಎಂಬ ಪುಂಜಕ್ಕೆ ಸೇರಿದವು. ಈಗ ನೆತ್ತಿಯತ್ತ ದೃಷ್ಟಿ ಹರಿಸಿ. ಪೆಗಸಸ್‌ದ (ನಕುಲ) ಚೌಕ, ಅಲ್ಲಿಂದ ಉತ್ತರಕ್ಕೆ ಕಾಸಿಯೋಪಿಯಾ (ಕುಂತಿ), ಆಂಡ್ರೋಮಿಡಾ (ದ್ರೌಪದಿ). ಈಶಾನ್ಯದ ಅಂಚಿನಲ್ಲಿ ಪರ್ಸಿಯುಸ್ (ಅರ್ಜುನ). ಪೂರ್ವದಿಗಂತಕ್ಕೂ ಪೆಗಸಸ್‌ನ ಚೌಕಕ್ಕೂ ಮಧ್ಯೆ ಕಾಣುವ ಪುಟ್ಟ ತ್ರಿಕೋಣವೇ ಮೇಷ. ಪುಟ್ಟ ನಕ್ಷತ್ರಗುಚ್ಛ ಕೃತ್ತಿಕೆ ಉದಯಿಸುವ ಪೂರ್ಣಚಂದ್ರನ ಸೊಬಗು (೨೬ರಂದು) ಹೆಚ್ಚಿಸುವುದು.

ಎರಡುಮೂರು ವರ್ಷಗಳ ಹಿಂದೆ ಸುದ್ದಿ ಮಾಡಿದ ಲಿಯೋನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ ೧೭ ರಂದು. ಟೆಂಪಲ್ ಟಟಲ್ ಎಂಬ ಹೆಸರಿನ ಧೂಮಕೇತುವಿನ ತುಣುಕುಗಳು ಇವು. ೧೯೯೮ರಲ್ಲಿ ಈ ಧೂಮಕೇತು ಬಂದು ಹೋದಮೇಲೆ ಕಳೆದ ವರ್ಷದವರೆಗೂ ಉಲ್ಕೆಗಳು ಹೆಚ್ಚಾಗಿ ಬೀಳುತ್ತಿದ್ದವು. ಈಗ ಗಂಟೆಗೆ ೨೦ಕ್ಕೆ ಇಳಿದಿದೆ.

ಬುಧಗ್ರಹ ಸಂಜೆಯ ಆಕಾಶದಲ್ಲಿ ತಿಂಗಳ ಉತ್ತರಾರ್ಧದಲ್ಲಿ ಕಾಣಲಿದೆ. ಚಂದ್ರ ಈ ಗ್ರಹವನ್ನೂ ಮುಚ್ಚುವ ಆಟ ನಡೆಸುತ್ತಾನೆ. ೧೪ರಂದು ಬೆಳಿಗ್ಗೆ ಸುಮಾರು ೮ಗಂಟೆಗೆ ಈ ಘಟನೆ ನಡೆಯುವುದು. ಆ ಸಂಜೆಯ ಆಕಾಶದಲ್ಲಿ ಬಿದಿಗೆಯ ರೇಖಾ ಚಂದ್ರನನ್ನು ಹುಡುಕಿ. ಅದಕ್ಕೆ ಅಂಟಿಕೊಂಡಂತೆ ಕಾಣುವ ಚುಕ್ಕೆಯೇ ಬುಧ. ದಿನೇ ದಿನೇ ಬುಧ ಗ್ರಹವನ್ನು ಗಮನಿಸಿ. ಒಂದೇ ವಾರದಲ್ಲಿ ಅದು ೨೨ ಡಿಗ್ರಿ ಎತ್ತರಕ್ಕೆ ಏರುವುದನ್ನು ಕಾಣಬಹುದು. ಪುನಃ ದಿಗಂತದ ಕಡೆಗೆ ಸರಿಯುವ ಅದು ೩೦ರಿಂದ ಹಿನ್ನಡೆದಂತೆ ಕಾಣುತ್ತದೆ.

ಒಟ್ಟಿನಲ್ಲಿ ಚಂದ್ರ ಒದಗಿಸುವ ಈ ನಾಲ್ಕು ಅವಕಾಶಗಳನ್ನು ಕ್ಯಾಮೆರಾ ಇದ್ದವರು ಮರೆಯದೇ ಉಪಯೋಗಿಸಿಕೊಳ್ಳಿ. ನಾಲ್ಕರಲ್ಲಿ ಎರಡನ್ನಾದರೂ ಸೆರೆ ಹಿಡಿದಿರಾದರೆ ಖಗೋಳ ಘಟನೆಗಳ ಅಪೂರ್ವ ಸಂಗ್ರಹ ನಿಮ್ಮದಾಗುತ್ತದೆ.

### ಖಗೋಳ ದಿನಚರಿ

೨ ಚಂದ್ರ-ಭೂಮಿ ದೂರ ಗರಿಷ್ಠ
೪ ಚಂದ್ರ-ಶನಿ ನಡುವೆ ಕನಿಷ್ಠ ಕೋನ
೫ ಶುಕ್ರ-ಗುರು ನಡುವೆ ಕನಿಷ್ಠ ಕೋನ
ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೮ ಶನಿಗ್ರಹದ ಹಿನ್ನಡೆ ಆರಂಭ
ಟಾರಿಡ್ ಉಲ್ಕಾವೃಷ್ಟಿ
೯ ರಾತ್ರಿ ೨೧:೦೯ಕ್ಕೆ ಚಂದ್ರನಿಂದ ಗುರುಗ್ರಹದ ಆಚ್ಛಾದನೆ.
(ಬೆಳಗಿನ ಜಾವ ನೋಡಿದಾಗ ಪರಸ್ಪರ ಸಮೀಪ ಇರುವುವು)
೧೦ ಬೆಳಿಗ್ಗೆ ಚಂದ್ರನಿಂದ ಶುಕ್ರದ ಆಚ್ಛಾದನೆ
(ಮರೆಯದೇ ೪:೩೦ ಗಂಟೆಗೇ ಎದ್ದು ನೋಡಿ)
೧೧ ಬೆಳಿಗ್ಗೆ ೯:೪೯ಕ್ಕೆ ಚಂದ್ರನಿಂದ ಮಂಗಳದ ಆಚ್ಛಾದನೆ




*ನವೆಂಬರ್ ೫ರಂದು ಬೆಳಗಿನ ಜಾವ ಪೂರ್ವದಲ್ಲಿ ಕಾಣುವ ನೋಟ. - ಗಾಮಾ ಎಂಬುದು ಕ್ಷೀಣ ನಕ್ಷತ್ರ*

(ಮರೆಯದೇ ೫ ಗಂಟೆಗೇ ಎದ್ದು ನೋಡಿ)
ಬುಧಗ್ರಹದ ಪಕ್ಕ ಜ್ಯೇಷ್ಠಾ ನಕ್ಷತ್ರ (ಕಾಣುವುದು ಕಷ್ಟ)
೧೨ ಅಮಾವಾಸ್ಯೆ ೧೯:೫೭ಕ್ಕೆ
೧೪ ೮:೩೯ಕ್ಕೆ ಚಂದ್ರನಿಂದ ಬುಧಗ್ರಹದ ಆಚ್ಛಾದನೆ
(ಸಂಜೆ ಪಶ್ಚಿಮದ ಅಂಚಿನಲ್ಲಿ ಹುಡುಕಿ)
ಚಂದ್ರ-ಭೂಮಿ ದೂರ ಕನಿಷ್ಠ
೧೬ ಶುಕ್ರ-ಚಿತ್ರಾ ನಡುವೆ ಕನಿಷ್ಠ ಕೋನ
೧೯ ಚಾಂದ್ರಮಾಸದ ಪ್ರಥಮ ಪಾದ
(ಚಂದ್ರಾಸ್ತ ನಡುರಾತ್ರಿಗೆ)
೨೧ ಬುಧಗ್ರಹ ಗರಿಷ್ಠ ಎತ್ತರದಲ್ಲಿ ೨೨°
(ಸಂಜೆ ಪಶ್ಚಿಮದಲ್ಲಿ ಹುಡುಕಿ)
೨೭ ೦೧:೩೭ಕ್ಕೆ ಹುಣ್ಣಿಮೆ ; ಕೃತ್ತಿಕಾ ಗುಚ್ಛದ ಪಕ್ಕ ಚಂದ್ರ
೩೦ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
ಬುಧಗ್ರಹದ ಹಿನ್ನಡೆ ಆರಂಭ
ಚಂದ್ರ–ಶನಿ ನಡುವೆ ಕನಿಷ್ಠ ಕೋನ.

**ಡಾ|| ಬಿ.ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧

# ಭ್ರಷ್ಟಾಚಾರ ತೊಲಗಿಸಬೇಕು

ಭಾರತವನ್ನು ಕಿಡಿಗೇಡಿಗಳಿಗೆ, ದಂಗೆಕೋರರಿಗೆ ಒಪ್ಪಿಸುವುದು ನನ್ನ ಕೆಲಸವಲ್ಲ ಎಂದರು ಕೇಂದ್ರಗೃಹ ಸಚಿವರಾಗಿದ್ದ ವಲ್ಲಭ ಭಾಯ್ ಪಟೇಲರು. ಭಾರತವನ್ನು ಭ್ರಷ್ಟರಿಗೆ ಒಪ್ಪಿಸುವುದೂ ನಮ್ಮ ಕೆಲಸವಲ್ಲ.

ದೇಶದ ಸಂಪತ್ತು ಪ್ರಜೆಗಳದು. ರಾಜಕಾರಣಿಗಳು ಅದರ ಧರ್ಮದರ್ಶಿಗಳು. ಅವರು ಅದರ ದುರ್ಬಳಕೆ ಮಾಡುತ್ತಿದ್ದಾರೆ. ಅವರ ವಿರುದ್ಧ ಹೋರಾಡುವುದು ಪ್ರಜೆಗಳ ಧರ್ಮ.

Transparency International (ORG) Marg ಸಂಸ್ಥೆಯ ಸಮೀಕ್ಷೆಯ ಮೇರೆಗೆ ಭಾರತದಲ್ಲಿ ಮುಖ್ಯವಾಗಿ ಹತ್ತು ಕ್ಷೇತ್ರಗಳಲ್ಲಿ, ಇಲಾಖೆಗಳಲ್ಲಿ, ಭ್ರಷ್ಟ ರಾಜಕಾರಣಿಗಳ ಹಾಗೂ ಉನ್ನತಾಧಿಕಾರಿಗಳ ಜೇಬಿಗೆ ಬಿದ್ದಿರುವ ಹಣ ೨೬,೦೨೮ ಕೋಟಿ ರೂಪಾಯಿಗಳು. ಆ ಹತ್ತು ಇಲಾಖೆಗಳೆಂದರೆ ಆರೋಗ್ಯ, ವಿದ್ಯುತ್, ಶಿಕ್ಷಣ, ಕಂದಾಯ ಇಲಾಖೆ, ನ್ಯಾಯಕ್ಷೇತ್ರ, ಪೊಲೀಸ್, ತೆರಿಗೆ ಇಲಾಖೆ, ಸಾರ್ವಜನಿಕ ವಿತರಣಾ ವ್ಯವಸ್ಥೆ, ಟೆಲಿಕಾಂ ಮತ್ತು ರೈಲ್ವೆ.

ವಿಶ್ವದಲ್ಲೇ ಅತಿ ಭ್ರಷ್ಟ ಎನಿಸಿದ ರಾಷ್ಟ್ರಗಳಲ್ಲಿ ಭಾರತ ಒಂಬತ್ತನೆಯ ಸ್ಥಾನದಲ್ಲಿದೆ. ಏಷ್ಯಾಖಂಡದಲ್ಲಿ ಇಂಡೋನೇಷ್ಯ ಮೊದಲನೆಯ ಸ್ಥಾನದಲ್ಲಿದ್ದರೆ, ಭಾರತ ಎರಡನೆಯ ಸ್ಥಾನದಲ್ಲಿದೆ.

ಭ್ರಷ್ಟಾಚಾರಕ್ಕೆ ಮೂಲ ಕಾರಣ ನೈತಿಕ ಅಧಃಪತನ. ನಾವು ಭಾರತೀಯರು ಲಂಚ ಕೊಡುವ ಮತ್ತು ತೆಗೆದುಕೊಳ್ಳುವ ದುಷ್ಟ ಪದ್ಧತಿಗೆ ಬಲಿಯಾಗಿದ್ದೇವೆ. ಇದನ್ನು ಕೊನೆಗಾಣಿಸಬೇಕೆಂದು ಯಾವ ನಾಗರಿಕನಿಗೂ ಅನಿಸುತ್ತಿಲ್ಲ. ವೈಯಕ್ತಿಕ ನೆಲೆಯಲ್ಲಿ ಈ ಧರ್ಮಯುದ್ಧ ಆರಂಭವಾಗಬೇಕು. ಇದು ನಮ್ಮ ಕರ್ಮ ಎಂದುಕೊಂಡು ತಲೆಯ ಮೇಲೆ ಕೈಹೊತ್ತು ಕೂಡಬಾರದು. ಭ್ರಷ್ಟಾಚಾರ ಕೊನೆಗಾಣಿಸಲು ಸಾಮಾಜಿಕ, ರಾಜಕೀಯ ಎರಡೂ ನೆಲೆಗಳಿಂದ ಹೋರಾಟ ಆರಂಭಿಸಬೇಕು. ಭ್ರಷ್ಟಾಚಾರ ತಲೆ ಎತ್ತಲು ಮುಖ್ಯರಾದವರು ರಾಜಕಾರಣಿಗಳು ಹಾಗೂ ಅವರು ರಚಿಸುವ ಸರ್ಕಾರಗಳು.

ಸರ್ಕಾರಗಳು ಉತ್ಪಾದನೆ ಹೆಚ್ಚಿಸುವ ಉದ್ದೇಶಗಳಿಗಾಗಿ ಸಾಲವೆತ್ತಿ ಅದನ್ನು ಅನುತ್ಪಾದಕ ಯೋಜನೆಗಳಿಗೆ ಬಳಸುವುದರಿಂದ ತಾವು ಮಾಡಿದ ಸಾಲ ತೀರಿಸಲು ಸಾಧ್ಯವಾಗುತ್ತಿಲ್ಲ. ಅನುತ್ಪಾದಕ ಯೋಜನೆಯಲ್ಲಿ ಭ್ರಷ್ಟಾಚಾರವೂ ಸೇರುತ್ತದೆ.

ಕುಡಿತದ ಮಾರಾಟವನ್ನು ವಿಸ್ತರಿಸುವುದು, ಲಾಟರಿ, ಜೂಜಿಗೆ ಪ್ರೋತ್ಸಾಹ ನೀಡುವುದು ಸರಿಯೇ ತಪ್ಪೇ ಎಂದು ಚರ್ಚಿಸಬೇಕಾದ ವಿಷಯವೇ ಅಲ್ಲ. ಆ ಮೂಲಕ ಇವುಗಳಿಗೆ ಜೀವ ತುಂಬುವುದು, ಅವರು ಕೊಡುವ ಹಣವನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುವುದು, ಕೊಳ್ಳೆ ಹೊಡೆಯುವ ರಾಜಕೀಯ. ಇದನ್ನು ಒಂದು ಜ್ವಲಂತ ವಿಷಯವನ್ನಾಗಿ ಮಾಡಿಕೊಂಡು ಜನತೆ ಒಂದು ಪ್ರಚಂಡ ಹೋರಾಟ ನಡೆಸಬೇಕು.

ಆಡಳಿತದಲ್ಲಿ ಪಾರದರ್ಶಕತೆ ಇಲ್ಲ. ಆಡಳಿತ ಕಾರ್ಯಪದ್ಧತಿಯನ್ನು ಸರಳಗೊಳಿಸಬೇಕು. ಆಗ ಭ್ರಷ್ಟಾಚಾರ ಕಡಿಮೆಯಾಗುತ್ತದೆ. ನಮ್ಮ ಆಡಳಿತಗಾರರಿಗೆ ಅಧಿಕಾರ ಬೇಕು, ಹೊಣೆಗಾರಿಕೆ ಬೇಡ. ಅಧಿಕಾರ ಮತ್ತು ಹಣಕ್ಕಾಗಿ ಅವರಿಗೆ ರಾಜಕೀಯ ಬೇಕು. ಆದರೆ ಹೊಣೆಗಾರಿಕೆ ಬೇಡ. ಈ ತತ್ವರಹಿತ ರಾಜಕೀಯವೇ ಭ್ರಷ್ಟಾಚಾರಕ್ಕೆ ಎಡೆಮಾಡುವುದು.

ನಮ್ಮ ಚುನಾವಣಾ ಪದ್ಧತಿ ತುಂಬ ದೋಷಪೂರ್ಣವಾಗಿದೆ. ಅದು ಆಮೂಲಾಗ್ರವಾಗಿ ಬದಲಾವಣೆ ಆಗಬೇಕಾಗಿದೆ. ರಾಜಕೀಯ ಪಕ್ಷಗಳಿಗೆ ಚುನಾವಣಾ ಪದ್ಧತಿಯ ಪರಿಷ್ಕಾರ ಬೇಕಾಗಿಲ್ಲ. ನೈತಿಕತೆ ಯಾವ ರಾಜಕೀಯ ಪಕ್ಷದಲ್ಲೂ ಇಲ್ಲದಿರುವುದೇ ಭ್ರಷ್ಟಾಚಾರ ಇಷ್ಟು ಭಯಾನಕವಾಗಿ ಬೆಳೆದಿರುವುದಕ್ಕೆ ಕಾರಣ.

ಅನಕ್ಷರತೆ ಜನತೆಯ ಅಜ್ಞಾನಕ್ಕೆ ಕಾರಣ. ಬಡತನ ಮಾನವನ ನೈತಿಕನಿಷ್ಠೆ ಬೆಳೆಯಲು ಅಡ್ಡಿಯಾಗಿದೆ.

ಸ್ವಾತಂತ್ರ್ಯಾನಂತರದ ೫-೧೦ ವರ್ಷಗಳವರೆಗೆ ಸ್ವಾರ್ಥಿ ಬಂಡವಾಳಶಾಹಿಗಳು, ಕ್ರಿಮಿನಲ್‌ಗಳು, ಹೆಂಡದ ದೊರೆಗಳು, ರಾಜಕೀಯಕ್ಕೆ ಬರಲು ಹೆದರುತ್ತಿದ್ದರು. ಆಗಿನ ರಾಜಕೀಯದಲ್ಲಿ ಹಣ ಮಾಡುವುದು ಗೊತ್ತಿರಲಿಲ್ಲ. ಈಗ ರಾಜಕೀಯ ಒಂದು ವ್ಯಾಪಾರಿ ದಂಧೆ – ಜೂಜಿನ ಕಟ್ಟೆ ಎಂದರೂ ತಪ್ಪಾಗಲಾರದು.

ಮಾದಕ ಪದಾರ್ಥಗಳ ಕಳ್ಳ ಸಾಗಾಣಿಕೆ, ಹವಾಲಾ ಚಟುವಟಿಕೆಗಳು ಮತ್ತು ಶಸ್ತ್ರಾಸ್ತ್ರಗಳ ಅಕ್ರಮ ಸಾಗಾಣಿಕೆಗಳು ಇವೂ ಈಗ ದಂಧೆಗಳಾಗಿವೆ. ಭ್ರಷ್ಟಾಚಾರ ವಿಜೃಂಭಿಸಲು ಇವೂ ಸಹಕಾರಿಯಾಗಿವೆ. ಸರ್ಕಾರದಿಂದ ಈ ಭ್ರಷ್ಟರಿಗೆ ರಕ್ಷಣೆ ದೊರೆಯುತ್ತಿದೆ. ಹೀಗಾಗಿ ಭ್ರಷ್ಟಾಚಾರ ಆರ್ಥಿಕ ಮುನ್ನಡೆಗೆ ಅಡ್ಡಿಯೊಡ್ಡುತ್ತಿದೆ ಮತ್ತು ಸಮಾನಾಂತರ ಆರ್ಥಿಕ ವ್ಯವಸ್ಥೆ ದೇಶದ ತುಂಬ ಬೆಳೆಯಲು ಸಹಕಾರವಿತ್ತಿದೆ. ಆ ಮೂಲಕ ಕಪ್ಪು ಹಣ ಸೃಷ್ಟಿಯಾಗುತ್ತಿದೆ.

ರಾಜಕೀಯ ಧೂರ್ತರೂ, ಸರ್ಕಾರಿ ಉನ್ನತಾಧಿಕಾರಿಗಳೂ, ಕಂಟ್ರಾಕ್ಟರುಗಳು, ಗೂಂಡಾಗಳು, ದುಡ್ಡಿನ ಡಬ್ಬಗಳು ಇವರೊಡನೆ ಘನಿಷ್ಠ ಸ್ನೇಹ ಬೆಳೆಸುತ್ತಿದ್ದಾರೆ. ಸಾರ್ವಜನಿಕ ಆಡಳಿತ ಹೀಗಾಗಿ ಭ್ರಷ್ಟಾಚಾರದಿಂದ ತುಂಬಿಹೋಗಿದೆ. ಅದು ರಾಷ್ಟ್ರದ ಆರ್ಥಿಕಾಭಿವೃದ್ಧಿಗೆ ಅಡ್ಡಿಯಾಗುತ್ತಿದೆ.

ಭಾರತದಲ್ಲಿ ಹಾಗೂ ಬೇರೆ ರಾಷ್ಟ್ರಗಳಲ್ಲಿ ನಡೆದಿರುವ ಕೆಲವು ಭ್ರಷ್ಟಾಚಾರದ ಪ್ರಕರಣಗಳನ್ನು ಈಗ ಗಮನಿಸೋಣ.

**ಬಿಹಾರದ ಮೇವು ಹಗರಣ**

ಮೇವು ಹಗರಣದಲ್ಲಿ ಬಿಹಾರ ಸರ್ಕಾರದ ಖಜಾನೆಯಿಂದ ೨೦೦ ಕೋಟಿ ರೂಪಾಯಿ ಲಪಟಾಯಿಸಲಾಯಿತು. ಲಲ್ಲೂ ಅವರು ಮುಖ್ಯಮಂತ್ರಿಗಳಾಗಿದ್ದಾಗ ಪಶು ಸಂಗೋಪನ ಇಲಾಖೆಯ ಅನೇಕ ಅಧಿಕಾರಿಗಳು, ಸರಬರಾಜುದಾರರು, ಸಚಿವಾಲಯದ ಹಣಕಾಸಿನ ಅಧಿಕಾರಿಗಳು, ಸರ್ಕಾರದ ಅನುದಾನಕ್ಕಿಂತ ಹೆಚ್ಚಿನ ಹಣವನ್ನು ಸರ್ಕಾರದ ನೆರವಿನಿಂದ ಪಡೆದು ಹಂಚಿಕೊಂಡರು. ಸುಳ್ಳು ವೋಚರ್‌ಗಳು ಸೃಷ್ಟಿಯಾದವು. ೨೦೦ ಕೋಟಿಯಷ್ಟು ಹಣ ದುಷ್ಟ ರಾಜಕಾರಣಿಗಳ, ಅಧಿಕಾರಿಗಳ ಪಾಲಾಯಿತು. ಈ ಹಣ ಜನರು ಕೊಟ್ಟ ತೆರಿಗೆಗಳಿಂದ ಬಂದದ್ದು. ಈ ರೀತಿ ನಷ್ಟವಾದ ಹಣವನ್ನು ಸರಿದೂಗಿಸಲು ಜನತೆಯ ಮೇಲೆ ಹೊಸ ತೆರಿಗೆ ವಿಧಿಸಲಾಗುತ್ತದೆ. ಇಲ್ಲವೇ ಅಭಿವೃದ್ಧಿಯ ಕೆಲಸ ಸ್ಥಗಿತಗೊಳ್ಳುತ್ತದೆ.

ಭ್ರಷ್ಟಾಚಾರಕ್ಕೆ ಮೂಲ ಕಾರಣ ನೈತಿಕ ಅಧಃಪತನ. ನಾವು ಭಾರತೀಯರು ಲಂಚ ಕೊಡುವ ಮತ್ತು ತೆಗೆದುಕೊಳ್ಳುವ ದುಷ್ಟ ಪದ್ಧತಿಗೆ ಬಲಿಯಾಗಿದ್ದೇವೆ. ಇದನ್ನು ಕೊನೆಗಾಣಿಸಬೇಕೆಂದು ಯಾವ ನಾಗರಿಕನಿಗೂ ಅನಿಸುತ್ತಿಲ್ಲ. ವೈಯಕ್ತಿಕ ನೆಲೆಯಲ್ಲಿ ಈ ಧರ್ಮಯುದ್ಧ ಆರಂಭವಾಗಬೇಕು. ಇದು ನಮ್ಮ ಕರ್ಮ ಎಂದುಕೊಂಡು ತಲೆಯ ಮೇಲೆ ಕೈಹೊತ್ತು ಕೂಡಬಾರದು. ಭ್ರಷ್ಟಾಚಾರ ಕೊನೆಗಾಣಿಸಲು ಸಾಮಾಜಿಕ, ರಾಜಕೀಯ ಎರಡೂ ನೆಲೆಗಳಿಂದ ಹೋರಾಟ ಆರಂಭಿಸಬೇಕು. ಭ್ರಷ್ಟಾಚಾರ ತಲೆ ಎತ್ತಲು ಮುಖ್ಯರಾದವರು ರಾಜಕಾರಣಿಗಳು ಹಾಗೂ ಅವರು ರಚಿಸುವ ಸರ್ಕಾರಗಳು.

**ಎಚ್. ಎಸ್. ದೊರೆಸ್ವಾಮಿ**

**ಯಶವಂತ ಸಿನ್ಹ ಪ್ರಕರಣ**

ಯಶವಂತ ಸಿನ್ಹ ಕೇಂದ್ರದ ಹಣಕಾಸು ಸಚಿವರಾಗಿದ್ದರು. ಭಾರತ ಹಾಗೂ ಮಾರಿಷಸ್ ಮಧ್ಯೆ ಒಂದು ವಾಣಿಜ್ಯ ಒಪ್ಪಂದ ಆಯಿತು. ಮಾರಿಷಸ್ ಭಾರತದಲ್ಲಿ ಉದ್ಯಮ ಆರಂಭಿಸಿದರೆ, ಆ ಉದ್ಯಮ ಗಳಿಸಿದ ಲಾಭಕ್ಕೆ ತೆರಿಗೆ ಕಟ್ಟಬೇಕಾಗಿಲ್ಲ ಎಂಬುದೇ ಆ ಒಪ್ಪಂದ. ಅಮೆರಿಕ ಮತ್ತು ದುರ್ಲಾಭ ಪಡೆಯಲು ಕಾದು ನಿಂತಿರುವ ಇತರ ರಾಷ್ಟ್ರಗಳ ಕಂಪೆನಿಗಳು, ತಮ್ಮ ಕಂಪೆನಿಗಳನ್ನು ಮಾರಿಷಸ್‌ನಲ್ಲಿ ನೋಂದಾವಣೆ ಮಾಡಿ, ಭಾರತದಲ್ಲಿ ಆ ಕಂಪೆನಿಗಳ ಕಾರ್ಯವನ್ನು ಆರಂಭ ಮಾಡಿದವು. ಬಂದ ಲಾಭವನ್ನೆಲ್ಲ ತಮ್ಮ ರಾಷ್ಟ್ರಗಳಿಗೆ ಅವು ಸಾಗಿಸಹತ್ತಿದವು. ರಿಜರ್ವ್ ಬ್ಯಾಂಕ್ ಅಧಿಕಾರಿಯೊಬ್ಬರು ಈ ಕಂಪೆನಿಗಳಿಗೆ ನೋಟೀಸ್ ನೀಡಿ, ಭಾರತ ಸರ್ಕಾರಕ್ಕೆ ಮೋಸ ಮಾಡುತ್ತಿರುವ ನೀವು ಅಷ್ಟೂ ಹಣ ಕಟ್ಟಬೇಕು ಎಂದು ತಾಕೀತು ಮಾಡಿದರು. ಇವುಗಳ ಪೈಕಿ ಇಂಡಿಯ ಫಂಡ್ ಎಂಬ ಒಂದು ಕಂಪೆನಿ ಮಾರಿಷಸ್‌ನಲ್ಲಿ ನೋಂದಾಯಿಸಿಕೊಂಡು ಭಾರತದಲ್ಲಿ ಕಾರ್ಯೋನ್ಮುಖವಾಗಿತ್ತು. ಯಶವಂತ ಸಿನ್ಹ ಅವರ ಸೊಸೆ ಪುನೀತಾ ಸಿನ್ಹ ಈ ಕಂಪೆನಿಯ ಪಾಲುದಾರಳಾಗಿದ್ದರು. ತೆರಿಗೆ ಅಧಿಕಾರಿಯ ನೋಟೀಸ್ ಪುನೀತಾಗೆ ಹೋದ ಕೂಡಲೇ

## ಬದುಕನ್ನು ಪ್ರೀತಿಸುತ್ತೇನೆ

ಖಾಲಿ ಕುಳಿತಂತೆ
ಇಲ್ಲಸಲ್ಲದ ವಿಚಾರಗಳು
ಬೇತಾಳದಂತೆ ಕಾಡುತ್ತವೆ.

ಅದೆಷ್ಟೊ ಆಸೆಗಳು
ಮೊಳೆತು, ಚಿಗುರಿ
ಹೆಮ್ಮರಗಳಾಗಿ ಬೆಳೆದು ನಿಲ್ಲುತ್ತವೆ.

ಅದೆಷ್ಟೊ ಕನಸುಗಳು
ಮೂಡಿ, ತೇಲಿ
ಬಾನೆತ್ತರದಲಿ ಹಾರಾಡುತ್ತವೆ.

ಅದೆಷ್ಟೋ ಭಾವನೆಗಳು
ಮಿಡಿದು, ಹೊಮ್ಮಿ
ಎದೆಯಾಳದಲಿ ಮಿಸುಕಾಡುತ್ತವೆ.

ಕನಸಿನ ಸೌಧ ಕುಸಿದು
ಬದುಕಿನ ಕರಾಳ ಚಿತ್ರ
ತೇಲಿ ಬಂದಾಗ,
ಹಿಮಾಲಯದಿಂದ
ಜಾರಿಬಿದ್ದ ಅನುಭವ !

ಆದಾಗ್ಯೂ,
ಕನಸುಗಳನ್ನು ಹೆಣೆಯಲು
ಕಲ್ಪನೆಗಳಲ್ಲಿ ತೇಲಲು
ಭಾವನೆಗಳಲ್ಲಿ ಮೀಯಲು
ಅವಕಾಶ ಮಾಡಿಕೊಟ್ಟ
ಈ ಬದುಕನ್ನು ಪ್ರೀತಿಸುತ್ತೇನೆ.

ವಿ. ಆಂಜನೇಯ
ತಾಂತ್ರಿಕ ಗ್ರಂಥಾಲಯ, ಬಿ.ಎಚ್.ಇ.ಎಲ್, ಮೈಸೂರು ರಸ್ತೆ,
ಬೆಂಗಳೂರು - ೫೬೦ ೦೨೬



ಯಶವಂತ ಸಿನ್ಹ ಅವರಿಗೆ ಗಾಬರಿ ಆಯಿತು. ಆ ನೋಟೀಸ್ ನೀಡಿದ ಅಧಿಕಾರಿಯನ್ನು ಬೇರೆಡೆಗೆ ವರ್ಗಾಯಿಸಿದರು. ಆ ಅಧಿಕಾರಿ ನೀಡಿದ್ದ ನೋಟೀಸ್ ಅಸಂಬದ್ಧ ಎಂದು ತಿಳಿಸಿ, ಬೇರೊಂದು ಸುತ್ತೋಲೆ ಕಳುಹಿಸುವುದರಲ್ಲಿ ಯಶಸ್ವಿಯಾದರು. ನ್ಯಾಯಾಲಯದಲ್ಲಿ ಈ ನೋಟೀಸಿನ ವಿರುದ್ಧ ಖಟ್ಲೆ ನಡೆದು ವಾದವಿವಾದಗಳಾದವು. ನ್ಯಾಯಾಲಯ ಸಿನ್ಹ ಅವರಿಗೆ ಛೀಮಾರಿ ಹಾಕಿತು. ಹತ್ತು ಸಾವಿರ ಕೋಟಿ ರೂಪಾಯಿ ಕಟ್ಟಬೇಕೆಂದು ಇಂಡಿಯ ಫಂಡ್ ಕಂಪೆನಿಗೆ ನ್ಯಾಯಾಲಯ ತಾಕೀತು ಮಾಡಿತು. ಈ ಘಟನೆ ನಡೆದ ಒಡನೆ ಯಶವಂತ ಸಿನ್ಹ ಹಣ ಕಾಸು ಸಚಿವ ಖಾತೆಯನ್ನು ತೆರವು ಮಾಡಬೇಕಾಯಿತು. ಸಿನ್ಹ ವಿದೇಶಾಂಗ ಸಚಿವರಾದರು. ಭ್ರಷ್ಟಾಚಾರವನ್ನು ಮುಚ್ಚಿ ಹಾಕುವವರಿಗೆ ನಮ್ಮ ದೇಶದಲ್ಲಿ ಮಾಡಲಾಗುವ ಶಿಕ್ಷೆ (?) ಇದು.

### ನಕಲಿ ಸ್ಟಾಂಪ್ ಹಗರಣ

ಪೊಲೀಸರ ಲೆಕ್ಕಾಚಾರದ ಪ್ರಕಾರ ತೆಲಗಿ ೨೦೦೦೦ ಕೋಟಿ ರೂ.ಗಳ ನಕಲಿ ಸ್ಟಾಂಪ್ ಮಾರಾಟ ಮಾಡಿದ್ದಾನೆ. ಇತ್ತೀಚಿನ ಅಂದಾಜಿನ ಪ್ರಕಾರ ಅದು ೩೨,೦೦೦ ಕೋಟಿ ತಲಪಿದೆ. ಈ ಪೈಕಿ ೩,೩೦೦ ಕೋಟಿ ರೂ.ಗಳ ಮೌಲ್ಯದ ಸ್ಟಾಂಪ್ ಮಾರಾಟವಾಗಿರುವ ಲೆಕ್ಕ ಸಿಕ್ಕಿದೆ. ಎಷ್ಟೋ ಲಕ್ಷ ರೂ.ಗಳ ಸ್ಟಾಂಪ್ ಪೇಪರ್‌ಗಳನ್ನು ವಶಪಡಿಸಿಕೊಳ್ಳಲಾಗಿದೆ. ಅದು ಒಂದು ಬಗೆಯ ಒಂದು ಬೆಲೆಯ ಸ್ಟಾಂಪ್ ಅಲ್ಲ. ಅವುಗಳ ವಿವರ ಹೀಗಿದೆ :

Court fee stamp Paper
Foreign Bill stamp Paper
Share Transfer stamp Paper
Insurance Policy stamp Paper
Non-Judicial stamp Paper ಇತ್ಯಾದಿ ಇತ್ಯಾದಿ...

ಈ ನಕಲಿ ಸ್ಟಾಂಪ್ ಪೇಪರ್ ಮಾರಾಟವಾಗಿ ಆ ಹಣವೆಲ್ಲ ಕಪ್ಪು ಹಣ ಆಯಿತು. ಹಣದುಬ್ಬರಕ್ಕೆ ತೆಲಗಿ ಕಾರಣನಾದ. ರೂಪಾಯಿಯ ಬೆಲೆ ಕುಸಿತಕ್ಕೆ ಹಣದುಬ್ಬರದ ಪರಿಣಾಮವೂ ಒಂದು ಕಾರಣವಾಗುತ್ತದೆ.

ಇಡೀ ಭಾರತದಲ್ಲಿ ನಡೆದಿರುವ ಹಗರಣ ಇದು. ಭಾರತ ಸರ್ಕಾರಕ್ಕೆ ನೋಟುಗಳನ್ನು ಮುದ್ರಿಸಿಕೊಡುವ ನಾಸಿಕ್ ಟಂಕಸಾಲೆಯೂ ಈ ಹಗರಣದಲ್ಲಿ ಶಾಮೀಲಾಗಿದೆ. ಭಾರತದ ವಿವಿಧ ರಾಜ್ಯಗಳ ವರಿಷ್ಠ ಪೊಲೀಸ್ ಅಧಿಕಾರಿಗಳೂ ರಾಜಕಾರಣಿಗಳೂ ಅವರ ಬಂಧುಗಳೂ ಈ ಹಗರಣದಲ್ಲಿ ಭಾಗಿಗಳಾಗಿದ್ದಾರೆ ಎಂದಮೇಲೆ ಸರ್ಕಾರದಲ್ಲಿ ನಂಬಿಕೆ ಹೇಗೆ ಉಳಿದೀತು ?

### ಕರ್ನಾಟಕ ಲೋಕಾಯುಕ್ತರು

ಬೆಂಗಳೂರು ನಗರಪಾಲಿಕೆಯಲ್ಲಿ ೩೦೦ ಕೋಟಿ ರೂ.ಗಳಷ್ಟು ಹಣ ಲಪಟಾಯಿಸಿರುವುದನ್ನು ಲೋಕಾಯುಕ್ತರು ಪತ್ತೆ ಹಚ್ಚಿದ್ದಾರೆ. ಉದ್ಯಾನವನದ ಅಭಿವೃದ್ಧಿಗೆ ಮಂಜೂರಾದ ಹಣದಲ್ಲಿ ಅರ್ಧವನ್ನು ಅಧಿಕಾರಿಗಳೂ ಕಾರ್ಪೊರೇಷನ್ ಸದಸ್ಯರೂ ಜೇಬಿಗೆ ಇಳಿಸಿದ್ದಾರೆ. ಪೆಟ್ರೋಲ್ ಬಂಕ್‌ಗಳ ಮೇಲೆ ದಾಳಿ ನಡೆಸಿದಾಗ, ಕಾರ್ಪೊರೇಷನ್ ವಾಹನ ಚಾಲಕರು ಮತ್ತು ವಾಹನಗಳ ಮೇಲ್ವಿಚಾರಣೆ ನೋಡುವವರು ನಡೆಸಿರುವ ಪೆಟ್ರೋಲ್ ದುರ್ಬಳಕೆ ವಿಚಾರ ಹೊರಬಿದ್ದಿದೆ. ವಾಹನ ದುರಸ್ತಿ ಸಂದರ್ಭದಲ್ಲಿ ಹಣ ಗುಳುಂ ಆಗಿರುವುದು ಪತ್ತೆಯಾಗಿದೆ.

### ಔಷಧಿ ಹಗರಣ

ಔಷಧಿ ಕೊಳ್ಳುವುದರಲ್ಲಿ, ಆಸ್ಪತ್ರೆಗಳು ಔಷಧಿಗಳನ್ನು ಮಾರಿಕೊಳ್ಳುವ ಸಂದರ್ಭದಲ್ಲಿ ೩೦೦ ಕೋಟಿ ರೂ.ಗಳ ದುರ್ವ್ಯವಹಾರ ನಡೆದಿರುವುದು ಪತ್ತೆಯಾಗಿದೆ. ಇದು ರಾಜ್ಯ ಸರ್ಕಾರ ಹಾಗೂ ನಗರ ಪಾಲಿಕೆ ಇಬ್ಬರಿಗೂ ಸಂಬಂಧಪಟ್ಟ ದುರ್ವ್ಯವಹಾರ. ಈ ಎಲ್ಲ ನಷ್ಟವನ್ನೂ ಸರಿತೂಗಿಸಲು ಕಟ್ಟಡದ ತೆರಿಗೆ ಪರಿಷ್ಕರಣ, ಇತರೇ ತೆರಿಗೆಗಳನ್ನು ಹಾಕುವುದು ನಗರಪಾಲಿಕೆಗೆ ಅನಿವಾರ್ಯವಾಗಿದೆ.

ನಗರದ ಫುಟ್‌ಪಾತ್‌ಗಳ ನವೀಕರಣದ ಹೆಸರಿನಲ್ಲಿ ನೂರಾರು ವರ್ಷ ಶಾಶ್ವತ

ವಾಗಿರುವ, ಹಾಸಿದ ಕಲ್ಲು ಚಪ್ಪಡಿಗಳೆಲ್ಲಾ ಮಾಯವಾದವು ಅಥವಾ ಪುಡಿಪುಡಿಯಾದವು. ಅಶಾಶ್ವತವಾದ ಕಳಪೆ ಸಿಮೆಂಟ್ ಹೆಂಚಿನ ಬಳಕೆ ಮಾಡಲಾಯಿತು. ಇದು ಯಾರದೋ ಜೇಬನ್ನು ಭರ್ತಿಮಾಡುವ ಯೋಜನೆ. ಅಲ್ಲದೆ ಪ್ರತಿವರ್ಷ ಈ ಬಾಬಿನಲ್ಲಿ ಹಣ ಗಿಟ್ಟಿಸುವ ದೂರಾಲೋಚನೆಯಿಂದ ಕೈಗೊಳ್ಳಲಾದ ಯೋಜನೆ.

**ಭಾರತೀಯ ಹೊಗೆಸೊಪ್ಪು ಕಂಪೆನಿ ಹಗರಣ**

೧೨೯ ಕೋಟಿ ರೂಪಾಯಿಗಳ ಬೆಲೆಯ ಹೊಗೆಸೊಪ್ಪಿನ ಖರೀದಿ ಪಟ್ಟಿ ಸಲ್ಲಿಸುವಾಗ, ಈ ಕಂಪೆನಿ ತಂಬಾಕಿನ ಪ್ರಮಾಣ ಮತ್ತು ಖರೀದಿ ಬೆಲೆಯನ್ನು ಕಡಿಮೆ ತೋರಿಸಿ, ರಫ್ತು ಮಾಡಿತು. ಹವಾಲಾಗಳ ಮೂಲಕ ದಸ್ತಾವೇಜನ್ನು ಸಲ್ಲಿಸಲಾಯಿತು. ಈ ವ್ಯವಹಾರದ ವ್ಯತ್ಯಾಸದ ಹಣವನ್ನು ವಿದೇಶಿ ಬ್ಯಾಂಕುಗಳಲ್ಲಿ ಸಂಬಂಧಪಟ್ಟ ಅಧಿಕಾರಿಗಳ ಖಾತೆಗೆ ಜಮಾ ಮಾಡಲಾಯಿತು. ಈ ವ್ಯವಹಾರದಲ್ಲಿ ಖಜಾನೆಗೆ ಸೇರಬೇಕಾದ ಹೆಚ್ಚಿಗೆ ಹಣ ವಂಚನೆಗೆ ಒಳಪಟ್ಟಿತು. ಹೊಗೆಸೊಪ್ಪಿಗೆ ಪರಮಾವಧಿ ಬೆಲೆ ಸಿಕ್ಕಿತಾದರೂ, ಮಾರಾಟವಾದ ಬೆಲೆಗಿಂತ ಕಡಿಮೆ ಬೆಲೆ ನಮೂದಿಸಿದ್ದರಿಂದಲೂ ನಮೂದಿಸಿದ ಪ್ರಮಾಣಕ್ಕಿಂತ ಹೆಚ್ಚಿಗೆ ತಂಬಾಕನ್ನು ರಫ್ತು ಮಾಡಿದ್ದರಿಂದಲೂ, ಬಂದ ಹೆಚ್ಚಿಗೆ ಹಣವನ್ನು ಬೇನಾಮಿ ಹೆಸರಿನಲ್ಲಿ ವಿದೇಶಿ ಬ್ಯಾಂಕುಗಳಲ್ಲಿ ಜಮಾ ಮಾಡಲಾಯಿತು.

**ಸ್ವಿಸ್ ಬ್ಯಾಂಕ್‌ನ ಲಗ್ಗೆಗೆ ದಾರಿ ತೋರಿದವರು**

ಸ್ವಿಸ್ ಬ್ಯಾಂಕು ಯಾವುದೇ ರಾಷ್ಟ್ರದ ವ್ಯಕ್ತಿ ತನ್ನ ಬ್ಯಾಂಕಿನಲ್ಲಿ ಹಣ ತೊಡಗಿಸುವುದಕ್ಕೆ ಅವಕಾಶ ನೀಡುತ್ತದೆ. ಆ ಹಣ ಭ್ರಷ್ಟಾಚಾರದ ಹಣವಾದರೂ ಸರಿಯೇ, ಸ್ವಿಸ್ ಬ್ಯಾಂಕು ಅದರ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಬಡಪಟ್ಟಿಗೆ ಹಾಗಿಟ್ಟ ಹಣದ ಗುಟ್ಟನ್ನು ಬ್ಯಾಂಕ್ ಬಿಟ್ಟು ಕೊಡುವುದಿಲ್ಲ. ಸ್ವಿಸ್ ಬ್ಯಾಂಕಿನಲ್ಲಿ ಹಣ ಇಟ್ಟವರು 'ನಮ್ಮ ರಾಷ್ಟ್ರದಲ್ಲಿ ಹಣ ಕೊಳ್ಳೆ ಹೊಡೆದು ನಿಮ್ಮಲ್ಲಿ ಇಟ್ಟಿದ್ದಾರೆ. ಆ ಹಣ ನಮ್ಮ ರಾಷ್ಟ್ರದ ಸಂಪತ್ತು' ಎಂದು ಘೋಷಿಸಿದ್ದೇ ಆದರೆ ಕೂಡಲೇ ಆ ವ್ಯಕ್ತಿಯ ಹೆಸರಿನಲ್ಲಿರುವ ಹಣವನ್ನು ಆ ರಾಷ್ಟ್ರಕ್ಕೆ ರವಾನಿಸಲಾಗುವುದು.

ಪಾಕಿಸ್ತಾನದ ಸರ್ವಾಧಿಕಾರಿ ಮುಷ್ರಫ್ ಅಧಿಕಾರ ಹಿಡಿದೊಡನೆ ಹಿಂದಿನ ಮುಖ್ಯಮಂತ್ರಿ ನವಾಜ್ ಷರೀಫ್ ಸ್ವಿಸ್ ಬ್ಯಾಂಕಿನಲ್ಲಿ ಇಟ್ಟಿದ್ದ ೫ ಸಾವಿರ ಕೋಟಿ ರೂ.ಗಳನ್ನು ಬ್ಯಾಂಕ್ ಆಫ್ ಪಾಕಿಸ್ತಾನಕ್ಕೆ ವರ್ಗಾವಣೆ ಮಾಡಿಸುವುದರಲ್ಲಿ ಯಶಸ್ಸು ಕಂಡರು.

ನವಾಜ್ ಷರೀಫ್ ಕೂಡ ತಾನು ಅಧಿಕಾರಕ್ಕೆ ಬಂದಾಗ ಹಿಂದೆ ಪ್ರಧಾನ ಮಂತ್ರಿಯಾಗಿದ್ದ ಬೆನ್‌ಜೀರ್ ಭುಟ್ಟೋ ಮತ್ತು ಅವಳ ಗಂಡ ವಿದೇಶಿ ಬ್ಯಾಂಕುಗಳಲ್ಲಿ ಇಟ್ಟಿದ್ದ ಕಪ್ಪು ಹಣವನ್ನು ಪತ್ತೆ ಹಚ್ಚಿ, ಅದನ್ನು ರಾಷ್ಟ್ರೀಯ ಸಂಪತ್ತು ಎಂದು ಘೋಷಿಸಿ, ಬೆನ್‌ಜೀರ್ ಭುಟ್ಟೋ ದಂಪತಿಗಳ ಹೆಸರಿನಲ್ಲಿದ್ದ ಹಣವನ್ನು ಪಾಕಿಸ್ತಾನಕ್ಕೆ ತರಿಸಿಕೊಂಡರು.

ವ್ಯಕ್ತಿ ಎಷ್ಟು ದೊಡ್ಡವನೇ ಇರಲಿ ಅವನು ಅನೈತಿಕವಾಗಿ ಗಳಿಸಿದ ಹಣವನ್ನು ಸ್ವಿಸ್ ಬ್ಯಾಂಕೇ ಮುಂತಾದ ವಿಶ್ವದ ಬೇರೆ ಬೇರೆ ರಾಷ್ಟ್ರಗಳಲ್ಲಿನ ಬ್ಯಾಂಕುಗಳಲ್ಲಿ ಇರಿಸಿದ್ದಲ್ಲಿ ಸರ್ಕಾರಗಳು ಮುಲಾಜಿಲ್ಲದೆ ಆ ಹಣವನ್ನೆಲ್ಲ ವಶಪಡಿಸಿಕೊಳ್ಳಬೇಕು.

ನೈಜೀರಿಯಾದ ಸಚಿವರೊಬ್ಬರು ಸ್ವಿಸ್ ಬ್ಯಾಂಕಿನಲ್ಲಿ ಗುಪ್ತವಾಗಿ ಹಣ ಇಟ್ಟಿದ್ದು ಬಯಲಾದಾಗ ಅಂತರರಾಷ್ಟ್ರೀಯ ಮಟ್ಟದಲ್ಲಿ ಪತ್ರವ್ಯವಹಾರಗಳು ನಡೆದುದರ ಫಲವಾಗಿ ಸ್ವಿಸ್ ಬ್ಯಾಂಕ್, ೨೦೦ ಕೋಟಿ ರೂಪಾಯಿಗಳನ್ನು ನೈಜೀರಿಯಾ ಸರ್ಕಾರಕ್ಕೆ ಸಂದಾಯ ಮಾಡಿತು.

ಫಿಲಿಫೈನ್ಸ್‌ನ ಅಧ್ಯಕ್ಷ ಫರ್ನಾಂಡೊ ಫ್ರಾನ್ಸಿಸ್ ಅಧಿಕಾರದಲ್ಲಿದ್ದಾಗ ಅಕ್ರಮವಾಗಿ ಹಣವನ್ನು ಸಂಪಾದಿಸಿದ್ದರು. ಜನ ಅವರನ್ನು ದೇಶಬಿಟ್ಟು ಓಡಿಸಿದರು. ಆ ನಂತರ ಫಿಲಿಫೈನ್ಸ್ ಸರ್ಕಾರ ಸ್ವಿಟ್ಜರ್ಲೆಂಡ್ ಸರ್ಕಾರದೊಡನೆ ವ್ಯವಹರಿಸಿ, ಸ್ವಿಸ್ ಬ್ಯಾಂಕಿನಲ್ಲಿ ಇಡಲಾಗಿದ್ದ ಆ ಹಣವನ್ನು ಪತ್ತೆ ಹಚ್ಚಿತು.

ಮಲೇಷ್ಯಾದಲ್ಲಿ ಉಪಪ್ರಧಾನ ಮಂತ್ರಿ ಅನ್ವರ್ ಇಬ್ರಾಹಿಂ ಮೇಲೆ ೪ ಭ್ರಷ್ಟಾಚಾರದ ಆಪಾದನೆಗಳನ್ನು ಹೊರಿಸಲಾಯಿತು. ಅಲ್ಲಿಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ವಿಚಾರಣೆ ನಡೆಸಿ, ಅವರಿಗೆ ೬ ವರ್ಷಗಳ ಕಠಿಣ ಸಜಾ ವಿಧಿಸಿದರು.

ಪಾಕಿಸ್ತಾನದಲ್ಲಿ ಬೆನಜೀರ್ ಭುಟ್ಟೋ ಮತ್ತು ಅವರ ಗಂಡನ ವಿಚಾರಣೆ ನಡೆದು ಅವರಿಗೆ ೫ ವರ್ಷಗಳ ಕಠಿಣ ಶಿಕ್ಷೆ ವಿಧಿಸಲಾಗಿದ್ದು ೮.೩ ಮಿಲಿಯನ್ ಡಾಲರ್ ದಂಡ ಹಾಕಲಾಗಿದೆ ಮತ್ತು ಅವರನ್ನು ರಾಜಕೀಯದಲ್ಲಿರಲು ನಾಲಾಯಕ್ ಎಂದು ಘೋಷಿಸಲಾಗಿದೆ.

ಆದರೆ ಭಾರತದಲ್ಲಿ ಭ್ರಷ್ಟಾಚಾರವನ್ನು ತಡೆ ಹಿಡಿಯುವವರೇ ಇಲ್ಲ. ಭಾರತ ಸರ್ಕಾರಕ್ಕೆ ಈ ಕ್ರಮ ರುಚಿಸುತ್ತಲೇ ಇಲ್ಲ.

ಭಾರತದಲ್ಲಿ ನೂರಾರು ರಾಜಕೀಯ ಪುಢಾರಿಗಳ ಮೇಲೆ ಸಾವಿರಾರು ಆಪಾದನೆಗಳಿವೆ. ನ್ಯಾಯಾಲಯಗಳೂ ಸಾಕ್ಷ್ಯವಿಲ್ಲ ಎಂದು ಮತ್ತು ಇತರೆ ಜುಜುಬಿ ಕಾರಣಗಳಿಗಾಗಿ ಎಲ್ಲರನ್ನೂ ಖುಲಾಸೆ ಮಾಡಿವೆ. ಕಾನೂನು ಮಾಡುವವರು, ಕಾನೂನು ಪಾಲನೆ ಮಾಡಲು ನಿಯೋಜಿತರಾದವರು, ಕಾನೂನು ಮುರುಕರಾಗುತ್ತಿದ್ದಾರೆ. ಕಾನೂನು ಎತ್ತಿ ಹಿಡಿಯಬೇಕಾದವರು ವಿಫಲರಾಗಿದ್ದಾರೆ.

ವಿರೋಧ ಪಕ್ಷಗಳು ದುರ್ಬಲವಾಗಿವೆ. ಅವರು ತಮ್ಮ ಕರ್ತವ್ಯ ಮಾಡುತ್ತಿಲ್ಲ. ಅವರೂ ಅನೇಕ ಸಂದರ್ಭಗಳಲ್ಲಿ ಲೂಟಿಯಲ್ಲಿ ಪಾಲ್ಗೊಳ್ಳುವವರೇ ಆಗಿದ್ದಾರೆ.

ಕಾನೂನು ಸತ್ತಿದೆ ನಿಜ. ಆದರೆ ಅಂತರಾತ್ಮ ಒಂದಿದೆಯಲ್ಲಾ ಅದನ್ನೂ ಸಾಯಗೆಡವಿದ್ದಾರೆ ಈ ಭ್ರಷ್ಟ ರಾಜಕಾರಣಿಗಳು. ಭ್ರಷ್ಟಾಚಾರ ಈಗ ಒಳಗೂ ಹೊರಗೂ ಸುತ್ತಮುತ್ತಲೂ ಹರಡಿಕೊಂಡಿರುವ ನಮ್ಮ ಪರಮಶತ್ರು.

ಸತ್ಯಸಂಧರಿಗೆ ಮೌಲ್ಯ ದೊಡ್ಡದಾದರೆ ಈ ಭ್ರಷ್ಟರಿಗೆ ದ್ರವ್ಯ ದೊಡ್ಡದು. ಭ್ರಷ್ಟತೆಯ ವಿರುದ್ಧ ನಡೆಯಬೇಕಾದ ಸಮರ ವಿಶ್ವಯುದ್ಧಕ್ಕಿಂತಲೂ ಘೋರವಾಗಿ ನಡೆಯಬೇಕು.

ದೃಢ ಮನಸ್ಸಿನಿಂದ ದೇಶದಲ್ಲಿ ಆರ್ಥಿಕ ಶಿಸ್ತನ್ನು ಜಾರಿಗೆ ತಂದು ಭ್ರಷ್ಟಾಚಾರವನ್ನು ತೊಲಗಿಸುವಂಥವರು ನಾಯಕರಾಗಬೇಕು.

ಪ್ರಜಾಪ್ರಭುತ್ವ ಈಗ ದ್ರೋಹಿಗಳ, ಸಮಯ ಸಾಧಕರ, ಭ್ರಷ್ಟಾಚಾರಿಗಳ ವಶವಾಗಿಬಿಟ್ಟಿದೆ. ಇವರಿಂದ ದೇಶವನ್ನು ಬಚಾವ್ ಮಾಡಬೇಕಿದೆ.

---

*ಭ್ರಷ್ಟಾಚಾರ ನಿರ್ಮೂಲನ ಮಾಡಿ*
*ದೇಶವನ್ನು ರಕ್ಷಿಸಿ*
*ಲೇ. ಎಂ. ಪಿ. ಕೃಷ್ಣಪ್ಪ (ವಕೀಲರು)*

**ಎಚ್. ಎಸ್. ದೊರೆಸ್ವಾಮಿ**
ನಂ. ೧೫೬೩, ೩೯ 'ಎಫ್' ಕ್ರಾಸ್, 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

# ಅಮೆರಿಕದ ಹಿಡಿತದಿಂದ ವಿಶ್ವಸಂಸ್ಥೆಯನ್ನು ಮುಕ್ತಗೊಳಿಸಬೇಕು




ವಿಶ್ವಸಂಸ್ಥೆಯ ಇನ್ನೊಂದು ಮಹಾಸಭೆ ಜರುಗಿತು. ಎಲ್ಲವೂ ಮಾಮೂಲಿನಂತೆ. ಪ್ರತಿ ವರ್ಷವೂ ನಡೆಯುವ ಹಾಗೆಯೇ. ರಾಷ್ಟ್ರ ಪ್ರಮುಖರ ಭಾಷಣಗಳು, ನಿರ್ಣಯಗಳು ಕಡತ ಸೇರಿತು. ವಿವಿಧ ರಾಷ್ಟ್ರಗಳ ನಾಯಕರುಗಳ ಮಧ್ಯೆ ಮಾತುಕತೆಗಳು, ತೆರೆಮರೆಯ ಸಂಧಾನಗಳು, ಸೌಹಾರ್ದತೆಯ ಸಂಕೇತದ ಕೈಕುಲುಕಾಟ, ಮುಗುಳ್ನಗೆ ಎಲ್ಲವೂ ಪ್ರಚಾರ ಸಾಮಗ್ರಿ. ಅಮೆರಿಕದ ದೊಡ್ಡಣ್ಣ ತಲೆ ಆಡಿಸಿ, ಅಂಗೀಕಾರ ಮುದ್ರೆ ಒತ್ತುವವರೆಗೆ ಎಲ್ಲ ಯಥಾಸ್ಥಿತಿ. ಹಾಗಾಗಿ, ವಿಶ್ವಸಂಸ್ಥೆಯ ಮಹಾಸಭೆ ಇಂದಿನ ಪರಿಸ್ಥಿತಿಯಲ್ಲಿ ತನ್ನ ಮುಖ್ಯತ್ವವನ್ನು ಕಳೆದುಕೊಂಡಿದೆ. ಮಹಾಸಭೆಯ ನಿರ್ಣಯಗಳು ಒಂದು ಕಾಲದಲ್ಲಿ ನೈತಿಕ ಮೌಲ್ಯದ್ದಾಗಿದ್ದು, ಜನಾಭಿಪ್ರಾಯ ಪ್ರತಿಬಿಂಬಿಸುವುದಾಗಿದ್ದುವು. ಭದ್ರತಾ ಮಂಡಲಿಯು ಅವನ್ನು ಗಮನಕ್ಕೆ ತೆಗೆದುಕೊಳ್ಳುತ್ತಿತ್ತು. ಆದರೆ ಈಗ ಹಾಗಿಲ್ಲ. ಮಹಾಸಭೆಯ ತೀರ್ಮಾನಗಳಿಗೆ ಬೆಲೆಯೇ ಇಲ್ಲವಾಗುತ್ತಿದೆ. ಮುಂದಿನ ವರ್ಷ ಈ ಮಹಾನ್ ಜಾಗತಿಕ ಸಂಸ್ಥೆಗೆ ಅರವತ್ತು ತುಂಬಲಿದೆ. ಆಗ ಅದರ ಸಾಧನೆ, ವೈಫಲ್ಯಗಳ ಬಗೆಗೆ ಬೇಕಾದಷ್ಟು ಸಮೀಕ್ಷೆಗಳಾಗಲಿವೆ. ದೊಡ್ಡ ಸಮಾರಂಭಗಳೂ ನಡೆಯಲಿವೆ. ಈ ಸಂದರ್ಭದಲ್ಲಿ ಸಂಸ್ಥೆ ನಿಷ್ಕ್ರಿಯಗೊಂಡು, ಪ್ರಬಲ ರಾಷ್ಟ್ರ ಅಮೆರಿಕದ ಕೈಗೊಂಬೆಯಾಗಿರುವುದೀಗ ಕಳವಳಕಾರಿ. ಇವನ್ನು ನಿವಾರಿಸದಿದ್ದರೆ ಸಂಸ್ಥೆಗೆ ದುರಂತ ತಪ್ಪಿದ್ದಲ್ಲ.

ವಿಶ್ವಸಂಸ್ಥೆಯ ಪುನಾರಚನೆಯ ಅವಶ್ಯಕತೆಯ ವಿಚಾರ ಈಚೆಗೆ ಹೆಚ್ಚಾಗಿ ಕೇಳಿಬರುತ್ತಿದೆ. ನಿರ್ದಿಷ್ಟವಾಗಿ ಏನಾಗಬೇಕೆಂಬ ಸೂಚನೆಗಳೇನೂ ಇಲ್ಲ. ಇದ್ದುದರಲ್ಲೇ ಅಲ್ಪಸ್ವಲ್ಪ ಮೆರುಗು ನೀಡುವ ವಿಚಾರವೇ ಹೆಚ್ಚು. ಭದ್ರತಾ ಮಂಡಳಿಯ ಕಾಯಂ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸುವ ವಿಚಾರ ಮುಂದೆ ಬಂದಿದೆ ಪ್ರಬಲವಾಗಿ. ಈಗಿರುವ ಐದು ದೇಶಗಳ ಜೊತೆಗೆ ಇನ್ನೂ ನಾಲ್ಕು ದೇಶಗಳನ್ನು ಸೇರಿಸಿ ಪ್ರಾತಿನಿಧಿಕವಾಗಿಸಬೇಕೆಂಬ ಅಭಿಪ್ರಾಯವಿದೆ. ಭಾರತ, ಜರ್ಮನಿ, ಜಪಾನ್ ಮತ್ತು ಆಫ್ರಿಕಾ ಖಂಡದ ಒಂದು ರಾಷ್ಟ್ರಕ್ಕೆ ಸ್ಥಾನ ನೀಡುವ ಪ್ರಯತ್ನ ನಡೆದಿದೆ. ಇಷ್ಟೇ ಆದರೆ ಅದರಿಂದ ಪ್ರಯೋಜನವೇ ಆಗದು. ಅದೊಂದು ಆಲಂಕಾರಿಕ ಬದಲಾವಣೆಯಾಗುತ್ತದೆ ಅಷ್ಟೆ. ವೀಟೋ ಚಲಾವಣೆಯ ಹಕ್ಕು ಇರುವವರೆಗೆ ಸಂಸ್ಥೆ ಪಂಚ ಮಹಾರಾಷ್ಟ್ರಗಳ ಹಿಡಿತದಲ್ಲಿ, ಅರ್ಥಾತ್ ಅಮೆರಿಕದ ಕಪಿಮುಷ್ಟಿಯಲ್ಲಿ ಇರುವುದನ್ನು ತಪ್ಪಿಸಲಿಕ್ಕಾಗದು. ಕಳೆದ ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಅಮೆರಿಕ ವಿಶ್ವಸಂಸ್ಥೆಯನ್ನು ಕೂಡ, ತನ್ನ ಕೃಪಾಶ್ರಯ ದಲ್ಲಿರುವ, ಅಧಿನಾಯಕತ್ವದ ಗುರಿಗೆ ಪೂರಕವಾಗಿರುವ ವರ್ಲ್ಡ್ ಬ್ಯಾಂಕ್, ಐ.ಎಂ.ಎಫ್., ವರ್ಲ್ಡ್ ಟ್ರೇಡ್ ಸಂಸ್ಥೆಯಂತೆಯೇ ತನ್ನ ನಿಯಂತ್ರಣಕ್ಕೆ ಒಳಪಡಿಸಿಕೊಂಡಿದೆ. ಅದನ್ನು ತನಗೆ ಬೇಕಾದ ಹಾಗೆ ಬಳಸಿಕೊಳ್ಳುತ್ತಿದೆ, ಬೇಡವೆಂದಾಗ ನಿರ್ಲಕ್ಷಿಸುತ್ತಿದೆ. ಅದರ ಕಾರ್ಯ ನಿರ್ವಾಹಕ ಅಧಿಕಾರಿಯಾದ ಪ್ರಧಾನ ಕಾರ್ಯದರ್ಶಿ ಅಮೆರಿಕ ಸರಕಾರದ ಸಂಬಳ ಪಡೆಯುವ ನೌಕರನಂತಾಗಿದ್ದಾನೆ. ಅಮೆರಿಕ ತನ್ನ ಮನವೊಲಿಕೆ ತಂತ್ರದಿಂದ, ಬೆದರಿಕೆ ಹಾಕುವ ತಂತ್ರದಿಂದ ಭದ್ರತಾ ಮಂಡಲಿಯಲ್ಲಿ ತನಗೆ ಬೇಕಾದ ನಿರ್ಣಯಗಳಿಗೆ ಅಂಗೀಕಾರ ಪಡೆಯುತ್ತದೆ, ಬೇಡವಾದ್ದಕ್ಕೆ ವೀಟೋ ಚಲಾಯಿಸಿ ತಡೆಯುತ್ತದೆ. ಈ ಪರಿಸ್ಥಿತಿ ಬದಲಾಗದೆ, ಬಹುಮತದ ಅಭಿಪ್ರಾಯಗಳಿಗೆ ಮನ್ನಣೆ ದೊರೆಯದೆ ಈ ಸಂಸ್ಥೆ ಪರಿಣಾಮಕಾರಿಯಾಗುವುದು ಅಸಾಧ್ಯ.




ಕಾರವಾರದ ಸುಭಾಷ್ ವೃತ್ತದ ಸಮೀಪದ ತ್ರಿಕೋನ ಗಾರ್ಡನ್‌ನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಆಕ್ಟೋಬರ್ ೧೨ರಂದು ಪ್ರಾರಂಭವಾಯಿತು. ಶಾಸಕ ಶ್ರೀ ಗಂಗಾಧರ ಭಟ್ಟರು ಪ್ರದರ್ಶನ ಉದ್ಘಾಟಿಸಿದರು. ಶ್ರೀ ಅರವಿಂದ ತಂಡೂಲ್ಕರ್ ಅಧ್ಯಕ್ಷತೆ ವಹಿಸಿದ್ದರು. ಕರಾವಳಿ ಮುಂಜಾವು ಸಂಪಾದಕ ಅಶೋಕ ಹಾಸ್ಯಗಾರ, ಶ್ರೀ ಸದಾನಂದ ನಾಯಕ ಮತ್ತು ಶ್ರೀ ಅಶೋಕ ಸೌದಾಗರ ಸಹ ಉಪಸ್ಥಿತರಿದ್ದರು.

ಎರಡನೆಯ ಮಹಾಯುದ್ಧದ ನಂತರ ಈ ಜಾಗತಿಕ ಸಂಸ್ಥೆ ಸ್ಥಾಪನೆಗೊಂಡಾಗ ಇದ್ದ ಪರಿಸ್ಥಿತಿಯೇ ಬೇರೆ. ಆಗ ಸದಸ್ಯ ರಾಷ್ಟ್ರಗಳ ಸಂಖ್ಯೆ ಐವತ್ತು, ಈಗ ಇನ್ನೂರು. ಕಾರ್ಯ ನಿರ್ವಾಹಕ ಭದ್ರತಾ ಮಂಡಲಿಯ ಐದು ಪ್ರಮುಖ ರಾಷ್ಟ್ರಗಳಾದ ಅಮೆರಿಕ, ಸೋವಿಯತ್ ಒಕ್ಕೂಟ, ಬ್ರಿಟನ್, ಫ್ರಾನ್ಸ್, ಚೀಣಾಗಳಿಗೆ 'ವೀಟೋ' ಹಕ್ಕು ನೀಡಿದ್ದು ವಿಶಿಷ್ಟ ಕಾರಣಗಳಿಂದಾಗಿ, ಒಮ್ಮತದ ಸಾಧನೆಗಾಗಿ. ಆಗಲೂ ಯುದ್ಧಾನಂತರ ಎಲ್ಲಾ ರೀತಿಯಲ್ಲಿಯೂ ಅತ್ಯಂತ ಪ್ರಬಲ ರಾಷ್ಟ್ರವಾಗಿದ್ದ, ಪರಮಾಣು ಬಾಂಬು ಹೊಂದಿದ್ದ ಏಕೈಕ ರಾಷ್ಟ್ರ ಅಮೆರಿಕ ಈ ಸಂಸ್ಥೆಯನ್ನು ದುರುಪಯೋಗಪಡಿಸಿಕೊಳ್ಳುವ ಭೀತಿ ಇತ್ತು. ಈಗ ಅದು ನಿಜವಾಗಿದೆ ಅಷ್ಟೆ. ಅಂದು ಅಮೆರಿಕಾವನ್ನು ದಿಟ್ಟವಾಗಿ ವಿರೋಧಿಸುತ್ತಿದ್ದ ರಾಷ್ಟ್ರ ಸೋವಿಯತ್ ಒಕ್ಕೂಟ ಮಾತ್ರ. ಉಳಿದೆಲ್ಲವೂ ಅಮೆರಿಕದ ಹಿಂಬಾಲಕ ದೇಶಗಳೇ ಆಗಿದ್ದವು. 'ವೀಟೋ' ಹಕ್ಕನ್ನು ಅಮೆರಿಕ ದುರುಪಯೋಗಪಡಿಸಿಕೊಂಡಷ್ಟು ಬೇರಾವ ದೇಶವೂ ಮಾಡಿಲ್ಲ. ಚೀಣಾ ಜನತಾ ಗಣರಾಜ್ಯಕ್ಕೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನವನ್ನು ಇಪ್ಪತ್ತು ವರ್ಷಗಳು ಅಮೆರಿಕ ತಡೆಹಿಡಿದಿದ್ದೊಂದು ಉದಾಹರಣೆ ಸಾಕು ಅದಕ್ಕೆ. ಇನ್ನು ಇಸ್ರೇಲಿನ ಉದ್ಧಟತನಕ್ಕೆ ನೀಡುತ್ತಿರುವ ಬೆಂಬಲ, ಇರಾಕಿನ ಮೇಲಿನ ದುರಾಕ್ರಮಣ ಸಮರ್ಥಿಸಿಕೊಂಡಿರುವ ರೀತಿ ಎಲ್ಲ ಇತ್ತೀಚಿನವು. ತೋಳ್ಬಲ ಹಣಬಲದಿಂದ ಏನನ್ನೂ ಹೇಗೆ ಬೇಕಾದರೂ ತಿರುಚಬಲ್ಲ ದುರಹಂಕಾರದಿಂದ ಅಮೆರಿಕ ಮೆರೆಯುತ್ತಿದೆ. ತನ್ನ ಅಧಿನಾಯಕತ್ವವನ್ನು ಪ್ರಪಂಚದ ಎಲ್ಲ ದೇಶಗಳ ಮೇಲೆ ಹೊರಿಸಲು ಹೊರಟಿರುವ ಅಮೆರಿಕ ವಿಶ್ವಸಂಸ್ಥೆಯನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳುವುದರಲ್ಲಿ, ದುರುಪಯೋಗಪಡಿಸಿಕೊಳ್ಳುವುದರಲ್ಲಿ ಸಫಲವಾಗುತ್ತಿದೆ. ಇದು ಹೀಗೇ ಮುಂದುವರಿದರೆ, ಸಂಸ್ಥೆಗೆ ಉಳಿಗಾಲ ಇರುವುದಿಲ್ಲ. ಅಮೆರಿಕದ ಅಧಿನಾಯಕತ್ವವನ್ನು ಧಿಕ್ಕರಿಸಿ, ಪ್ರಪಂಚದ ಎಲ್ಲ ರಾಷ್ಟ್ರಗಳು ಜನತೆಯ ಆಶೋತ್ತರಗಳನ್ನು ಎತ್ತಿಹಿಡಿಯುವಂತೆ ವಿಶ್ವಸಂಸ್ಥೆಯನ್ನು ಪುನರ್ರೂಪಿಸಬೇಕಾದ ಕಾಲ ಸನ್ನಿಹಿತವಾಗಿದೆ. ಸ್ವಾತಂತ್ರ್ಯ, ಸಾರ್ವಭೌಮತ್ವ, ಪ್ರಜಾಪ್ರಭುತ್ವಗಳನ್ನು ಎತ್ತಿಹಿಡಿಯಲು ಆಸಕ್ತವಾಗಿರುವ ಎಲ್ಲ ದೇಶಗಳೂ ಈ ದಿಶೆಯಲ್ಲಿ ಹೆಜ್ಜೆ ಇರಿಸಬೇಕಾಗಿದೆ. ವಿಶ್ವಸಂಸ್ಥೆಯನ್ನು ನಿಜವಾದ ಪ್ರಾತಿನಿಧಿಕ ಸಂಸ್ಥೆಯಾಗಿಸಿ, ಪ್ರಜಾಪ್ರಭುತ್ವಗೊಳಿಸುವುದು, ಅಮೆರಿಕದ ಪ್ರಭಾವದಿಂದ ಅದನ್ನು ಮುಕ್ತಗೊಳಿಸುವುದು ಎಲ್ಲ ರಾಷ್ಟ್ರಗಳ, ಜನತೆಯ ಕರ್ತವ್ಯವಾಗಿದೆ.

**ಅಮೆರಿಕದ ಅಧ್ಯಕ್ಷೀಯ ಚುನಾವಣೆ : ಯಾರೇ ಆರಿಸಿಬಂದರೂ ನೀತಿ ಒಂದೆ**

ನಮ್ಮ ಪತ್ರಿಕೆಗಳು, ಮಾಧ್ಯಮಗಳಲ್ಲಿ ಅಮೆರಿಕದ ಅಧ್ಯಕ್ಷೀಯ ಚುನಾವಣೆಗಳನ್ನು ಕುರಿತು ನೀಡುತ್ತಿರುವ ಪ್ರಚಾರವನ್ನು ನೋಡಿದರೆ ನಮ್ಮ ಭವಿಷ್ಯವೆಲ್ಲ ಅದರ ಆಗು-ಹೋಗುಗಳ ಮೇಲೆ ಅವಲಂಬಿತವಾಗಿದೆಯೇನೋ ಎಂಬ ಭ್ರಮೆ ಉಂಟಾಗುತ್ತದೆ. ಇದು ಯಾವತ್ತೂ ಇದ್ದದ್ದೆ, ಹೊಸದೇನಿಲ್ಲ. ಅಧ್ಯಕ್ಷ ಸ್ಥಾನಕ್ಕೆ ಯಾರೇ ಆರಿಸಿಬಂದರೂ ಅಮೆರಿಕದ ಸಾಮ್ರಾಜ್ಯವಾದಿ ನೀತಿಯಲ್ಲಿ ಬದಲಾವಣೆ ಇಲ್ಲವೆಂಬುದಂತೂ ಖಚಿತ. ಡೆಮಾಕ್ರಟರಾಗಲಿ, ರಿಪಬ್ಲಿಕನ್ನರಾಗಲಿ ಯಾರೇ ಆರಿಸಿಬಂದರೂ ಹೆಚ್ಚು ವ್ಯತ್ಯಾಸವೇ

## ಇದು ಭಾರತ !

ಖ್ಯಾತ ಕೇಡಿಯೊಬ್ಬ
ಚುನಾವಣೆಯಲಿ ಗೆದ್ದು
ಜಯಮಾಲೆಗಳಿಂದ ಭೂಷಿತನಾಗಿ
ಗೀತೆಯ ಮೇಲೆ ಭಾಷಣ ಬಿಗಿವಾಗ
ಜನರೆಲ್ಲ ಮಂತ್ರಮುಗ್ಧರಾಗಿ
ಜಯಜಯಕಾರ ಮಾಡಿದರೆ,
ನಮ್ಮ ಅದ್ಭುತ ಪ್ರಜಾಪ್ರಭುತ್ವವ ನೋಡಿ
ನೀನು ಬೆಚ್ಚಿ ಬೀಳಬೇಡ ಬಂಧು,
ಇದು ಭಾರತ ! ಇದು ಭಾರತ !!

ನೆಲ ನೀರಿಗಾಗಿ ಪರಿತಪಿಸಿ,
ಜೀವ ಕಾಳಿಗಾಗಿ ಪರದಾಡುವಾಗ
ನದಿಗಳ ಮೇಲಿನ ಹಕ್ಕಿಗಾಗಿ
ಅಣ್ಣ ತಮ್ಮಂದಿರು ವೈರಿಗಳಂತೆ
ಕದನಕ್ಕಿಳಿದಾಗ
ಅಮೃತ(ದಂತಹ) ಜಲಧಾರೆ ಧಾವಿಸಿ
ಕಡಲಿನಾಳದಲಿ ತಲೆಮರೆಸಿಕೊಳ್ಳುವುದ ಕಂಡು
ನೀನು ಬೆಚ್ಚಿ ಬೀಳಬೇಡ ಬಂಧು,
ಇದು ಭಾರತ ! ಇದು ಭಾರತ !!

ಸುಂದರ ಸುಶಿಕ್ಷಿತ
ಯುವತಿಯೋರ್ವಳು ಪತಿಯ
ಶವವನ್ನು ತಬ್ಬಿ ಜ್ವಾಲೆಗಳಲಿ
ಬೆಂದುಹೋದಾಗ,
ಇಪ್ಪತ್ತೊಂದನೆಯ ಶತಮಾನ ನಾಚಿ ನೀರಾದೀತು.
ಲಕ್ಷಾಂತರ ಜನರು ನಿಂತಾರು ನೋಡುಗರಾಗಿ !
ಆದರೆ ಅವರಾರಿಗೂ ನಾಚಿಕೆ ಬಾರದು.
ಜೀವಿತಳಾಗಿದ್ದಾಗ ಅವಳಿಗಿರಲು ಮನೆ ಕೊಡದ
ಇವರು ಅವಳು ಬೆಂದುಹೋದಾಗ
ತಾವೇ ಮುಂದಾಗಿ ಮಂದಿರ ಕಟ್ಟಿಸಿದರೆ
ನೀನು ಬೆಚ್ಚಿ ಬೀಳಬೇಡ ಬಂಧು,
ಇದು ಭಾರತ ! ಇದು ಭಾರತ !!

ಚಿನ್ನದಂತಹ ಭೂಮಿ,
ಮುತ್ತಿನಂತಹ ಜಲಧಾರೆಗಳು
ನೀಲಮಣಿಗಳಂತಹ ಸುಂದರ ಗಿರಿವನಗಳು,
ರತ್ನಗಳಂತಹ ತರುಲತೆಗಳ ನೋಡಿದರೆ
ಪ್ರಕೃತಿಯು ತನ್ನ ಐಸಿರಿಯನ್ನೆಲ್ಲ
ಇಲ್ಲಿಯೇ ಸೂರೆಗೈದಂತಿದೆ,
ಆದರೂ ತಿಪ್ಪೆಗುಂಡಿಗಳಲಿ
ರೊಟ್ಟಿಯ ತುಂಡುಗಳ ಹುಡುಕಾಟವ ಕಂಡು
ನೀನು ಬೆಚ್ಚಿ ಬೀಳಬೇಡ ಬಂಧು,
ಇದು ಭಾರತ ! ಇದು ಭಾರತ !!

ಹಿಂದಿ ಮೂಲ - ಆರ್. ಪಿ. ದಲಾಲ
ಕನ್ನಡ ರೂಪಾಂತರ - ಎಂ. ಸಿ. ಅಂಟಿನ
ಪ್ಲಾಟ ನಂ. ೧೮, ರುಕ್ಮಿಣಿ ನಗರ, ಬೆಳಗಾವಿ - ೫೯೦ ೧೬

ನಾಗದು. ಏಕೆಂದರೆ ಎರಡೂ ಪಕ್ಷಗಳ ಬೆಂಬಲಿಗರು ಒಂದೇ ವರ್ಗದವರು – ಬಹುರಾಷ್ಟ್ರೀಯ – ಸಂಸ್ಥೆಯ ಅಧಿಪತಿಗಳು, ಬಂಡವಾಳಶಾಹಿಗಳು. ಈ ಎರಡು ಮುಖಗಳು ಅಷ್ಟೆ. ಎರಡನೆ ಮಹಾಯುದ್ಧದ ನಂತರ ಸೋವಿಯತ್ ಒಕ್ಕೂಟದ ಬಗ್ಗೆ, ಪೂರ್ವ ಯೂರೋಪಿನ ದೇಶಗಳ ಬಗ್ಗೆ, ರಾಷ್ಟ್ರೀಯ ವಿಮೋಚನಾ ಹೋರಾಟಗಳ ಬಗ್ಗೆ ಅಮೆರಿಕ ಅನುಸರಿಸಿದ ನೀತಿಗಳಲ್ಲಿ ಅದನ್ನು ಕಾಣಬಹುದು. ಇಪ್ಪತ್ತು ವರ್ಷಗಳು ವಿಯೆಟ್ನಾಂ ಜನತೆಯ ಮೇಲೆ ಯುದ್ಧ ನಡೆಸಿದಾಗ ರಿಪಬ್ಲಿಕನ್ ಪಕ್ಷದ ಹಾಗೂ ಡೆಮಾಕ್ರಾಟಿಕ್ ಪಕ್ಷದ ಅಧ್ಯಕ್ಷರುಗಳು ತಳೆದ ಧೋರಣೆ ಒಂದೇ ಆಗಿತ್ತು ಎಂಬುದನ್ನು ಮರೆಯುವ ಹಾಗಿಲ್ಲ. ಈಗಲೂ ಅಷ್ಟೆ: ಬುಷ್ಶೋ, ಕೆರ್ರಿಯೋ ಯಾರೇ ಆರಿಸಿ ಬಂದರೂ ಹೆಚ್ಚಿನ ವ್ಯತ್ಯಾಸವೇನಾಗದು. ಒಬ್ಬರು ಹೆಚ್ಚು ಅಬ್ಬರದ ದುರಾಕ್ರಮಣಕಾರಿ ನೀತಿ ಅನುಸರಿಸಿದರೆ, ಇನ್ನೊಬ್ಬರು ಸ್ವಲ್ಪ ನವುರಾಗಿ ಅದೇ ನೀತಿ ಮುಂದುವರಿಸಿಯಾರು ಅಷ್ಟೆ. ಅಮೆರಿಕದ ಸಾಮ್ರಾಜ್ಯ ನಿರ್ಮಾಣದ ಗುರಿ, ಪ್ರಪಂಚದಲ್ಲಿ ತನ್ನ ಅಧಿನಾಯಕತ್ವ ಸ್ಥಾಪಿಸುವ ಗುರಿ ಮುಟ್ಟುವುದರಲ್ಲಿ ರಿಪಬ್ಲಿಕನ್ನರು, ಡೆಮಾಕ್ರಾಟಕರುಗಳ ಮಧ್ಯೆ ವ್ಯತ್ಯಾಸವೇನಿಲ್ಲ, ಅನುಸರಿಸುವ ತಂತ್ರ ಬೇರೆಯಾಗಿರಬಹುದು ಅಷ್ಟೆ.

ಪ್ರಾಯಶಃ ಈ ಕಾರಣದಿಂದಾಗಿಯೇ ಅಮೆರಿಕದ ನಾಗರಿಕರಲ್ಲಿ ಅಧ್ಯಕ್ಷೀಯ ಚುನಾವಣೆಗಳಲ್ಲಿ ಹೆಚ್ಚಿನ ಆಸಕ್ತಿ ಕಂಡುಬಾರದಿರುವುದು. ಹಣದ ಹೊಳೆ ಹರಿದು, ಅಬ್ಬರದ, ಆಡಂಬರದ ಪ್ರಚಾರಗಳೆಲ್ಲ ಇದ್ದರೂ ಮತದಾನದಲ್ಲಿ ಭಾಗವಹಿಸುವವರ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತಿದೆ. ಆಂತರಿಕವಾಗಿ ಯಾರು ಯಾವ ನೀತಿ ಅನುಸರಿಸುತ್ತಾರೆ, ತೆರಿಗೆಗಳಲ್ಲಿ ಯಾವ ರಿಯಾಯಿತಿ ದೊರೆತೀತು ಎನ್ನುವುದಷ್ಟಕ್ಕೇ ಅಮೆರಿಕದ ನಾಗರಿಕರಲ್ಲಿ ಹೆಚ್ಚು ಆಸಕ್ತಿ ಎಂದರೆ ತಪ್ಪಾಗದು. ಅಧ್ಯಕ್ಷೀಯ ಚುನಾವಣೆಗಳಲ್ಲಿ ಮತದಾನ ಶೇ. ೪೦ಕ್ಕೆ ಇಳಿದಿದೆ. ಈ ಸಲವೂ ಹೆಚ್ಚು ಬದಲಾವಣೆಯಾಗದು ಈ ವಿಷಯದಲ್ಲಿ.

ಯಾವತ್ತಿನಂತೆ ಬುಷ್-ಕೆರ್ರಿ ಮಧ್ಯೆ ಮೂರು ಸುತ್ತಿನ ಬೈಯ್ದಾಟ ನಡೆದಿದೆ. ಯಾರು ಮೇಲುಗೈ ಸಾಧಿಸಿದರು, ಎಷ್ಟು ಸಾಧಿಸಿದರು ಎಂಬುದರ ವ್ಯಾಖ್ಯಾನಗಳ ಸುರಿಮಳೆಯೇ ಆಗುತ್ತಿದೆ. ಅಧ್ಯಕ್ಷೀಯ ಅಭ್ಯರ್ಥಿಗಳ ಮುಖಾಮುಖಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ವಾಗ್ಬಾಣಗಳ ಸ್ಪರ್ಧೆ ಅಷ್ಟೆ ಅಲ್ಲದೆ ಬೇರೇನೂ ಅಲ್ಲ. ಇರಾಕಿನ ಮೇಲೆ ಆಕ್ರಮಣ ನಡೆಸಿದ ಜಾರ್ಜ್ ಬುಷ್‌ಅನ್ನು ತರಾಟಗೆ ತೆಗೆದುಕೊಂಡಿರುವ ಜಾನ್ ಕೆರ್ರಿ ಎಲ್ಲಿಯೂ ಅಮೆರಿಕ ಇರಾಕಿನ ಮೇಲೆ ನಡೆಸಿದ್ದು ದುರಾಕ್ರಮಣ, ಅಲ್ಲಿ ಬೀಡುಬಿಟ್ಟಿರುವ ಸೇನೆಯನ್ನು ವಾಪಸು ಕರೆಸಿಕೊಳ್ಳಬೇಕು ಎಂದು ಹೇಳಿಲ್ಲ. ಆತನ ಬೊಬ್ಬೆ ಎಲ್ಲ ಮಿತ್ರರಾಷ್ಟ್ರಗಳನ್ನು ಈ ದುಸ್ಸಾಹದಲ್ಲಿ ಎಳೆದುಕೊಳ್ಳಲಿಲ್ಲ ಎನ್ನುವುದೇ. ಇತರ ವಿಷಯಗಳ ವಿಚಾರದಲ್ಲೂ ಹೀಗೇ. ಬುಷ್ ಒರಟೊರಟಾಗಿ, ಆಕ್ರಮಣಕಾರಿ ರೀತಿಯಲ್ಲಿ ಅಮೆರಿಕನ್ ಸಾಮ್ರಾಜ್ಯಶಾಹೀ ನೀತಿಯನ್ನು ಮುಂದುವರಿಸಿಕೊಂಡು ಹೋಗಬಹುದು ಆರಿಸಿಬಂದರೆ. ಕೆರ್ರಿ ಇದೇ ಕೆಲಸವನ್ನು ಬೇರೆ ರೀತಿಯಲ್ಲಿ ಮುಂದುವರಿಸಿಯಾನು ಅಷ್ಟೆ. ಅದು ಬಿಟ್ಟು ಪ್ರಪಂಚದ ಆಗುಹೋಗುಗಳೆಲ್ಲ ಅಮೆರಿಕದ ಅಧ್ಯಕ್ಷೀಯ ಚುನಾವಣೆ ಫಲಿತಾಂಶಗಳ ಮೇಲೆ ಅವಲಂಬಿತವಾಗಿದೆಯೇನೋ ಎಂದು ಬಣ್ಣಿಸುವುದು ಮೂರ್ಖತನದ ಪರಮಾವಧಿ.

ಸೀಯಾರ್ಕೆ
೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



ದಿನಾಂಕ ೨೪.೦೯.೨೦೦೪ರಂದು ನಿಧನರಾದ ಪ್ರತಿಭಾವಂತ ಭೌತವಿಜ್ಞಾನಿ ಡಾ|| ರಾಜಾ ರಾಮಣ್ಣ ರಾಷ್ಟ್ರದ ಪರಮಾಣು ಸಂಶೋಧನಾ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಪಾರ. ಪದ್ಮಶ್ರೀ, ಪದ್ಮವಿಭೂಷಣ ಪುರಸ್ಕಾರಗಳಿಗೆ ಪಾತ್ರರಾಗಿದ್ದ ಡಾ|| ರಾಜಾ ರಾಮಣ್ಣ ಅವರಿಗೆ ಅನೇಕ ವೈಜ್ಞಾನಿಕ ಸಂಸ್ಥೆಗಳು ಪ್ರತಿಷ್ಠಿತ ಪ್ರಶಸ್ತಿಗಳನ್ನಿತ್ತು ಗೌರವಿಸಿದ್ದವು. ಹುಟ್ಟು ಕನ್ನಡಿಗರಾಗಿದ್ದ ಇವರಿಗೆ ಪಾಶ್ಚಿಮಾತ್ಯ ಸಂಗೀತದ ಬಗ್ಗೆ ಅತೀವ ಒಲವು.

ಮೃತರ ನೆನಪಿಗೆ 'ಹೊಸತು' ಸಂತಾಪ ಸೂಚಿಸುತ್ತದೆ.

# ಕನ್ನಡ ದಲಿತ ಆತ್ಮಕಥನಗಳ ಸಾಂಸ್ಕೃತಿಕ ಅನನ್ಯತೆ

ಎಚ್. ದಂಡಪ್ಪ

'ಆತ್ಮಕಥನ' ಪ್ರಾರಂಭವಾದದ್ದು ಯುರೋಪಿನಲ್ಲಿ ಹದಿನೆಂಟು ಮತ್ತು ಹತ್ತೊಂಭತ್ತನೇ ಶತಮಾನದಲ್ಲಿ. ರೂಸೊ, ನೀಷೇ, ಫ್ರಾಯ್ಡ್, ಸಾರ್ತ್ರೆ ಇವರುಗಳು 'ಆತ್ಮಕಥನ'ವನ್ನು ಬರೆಯಲು ಪ್ರಾರಂಭಿಸಿದರು. 'ಆತ್ಮಕಥನ', 'ಜೀವನಚರಿತ್ರೆ', 'ದಿನಚರಿ', 'ಪಾಪನಿವೇದನೆ' ಎಂಬ ಹೆಸರುಗಳಿಂದ ಪ್ರಚಾರದಲ್ಲಿರುವ 'ಆತ್ಮಚರಿತ್ರೆ'ಯು ತನ್ನ ಬೌದ್ಧಿಕತೆಯಿಂದ ಚರಿತ್ರೆಯನ್ನು ಕಟ್ಟಬೇಕೆಂಬ ಹಠದಿಂದ ಹೊರಟು ಸಮೂಹದಿಂದ ಪ್ರತ್ಯೇಕಗೊಂಡು, ಅಧಿಕಾರವಾಣಿಯಿಂದ ಬದುಕಿಗೆ ಸಿದ್ಧಾಂತವನ್ನು ರೂಪಿಸುತ್ತೇವೆಂದು ಹೊರಡುವ ಮಾದರಿಯವು. ಆದರೆ ಕನ್ನಡದ ಆತ್ಮಕಥನದ ಸ್ವರೂಪವೇ ಬೇರೆ. ಇವು ಒಡೆದುಹೋಗಿರುವ ಛಿದ್ರವಾಗಿರುವ ಸಮುದಾಯಗಳ ದಾರುಣವಾದ ಚರಿತ್ರೆಯನ್ನು ಕಟ್ಟುವ ಸಮುದಾಯದ ಭಾಗವಾಗಿ ವರ್ತಮಾನವನ್ನು ರೂಪಿಸುವ ಆಶಯವುಳ್ಳವು. ಮೇಲು ಕೀಳು ಎಂಬುದನ್ನು ತೂರೆದು ಸಮಷ್ಟಿಯಲ್ಲಿ ಒಂದಾಗಬೇಕೆನ್ನುವ ವಿಶ್ವಾತ್ಮಕ ಪಾತಳಿಯ ಮನೋಧರ್ಮ ಇಲ್ಲಿಯ ಆತ್ಮಕಥಾನಕಗಳದ್ದು.

'ಆತ್ಮಕಥನ'ವೆಂದರೆ ನಿರ್ದಿಷ್ಟ ವ್ಯಕ್ತಿಯ 'ಬದುಕಿನ ಚರಿತ್ರೆ' ಎಂಬುದು ಸತ್ಯವಾದರೂ ಅದು ಸಾಹಿತ್ಯಾತ್ಮಕ ಕಥನವಾಗಿರುತ್ತದೆ. ಇತಿಹಾಸ, ವ್ಯಕ್ತಿ ಮತ್ತು ಸಾಹಿತ್ಯ ಇವು ಪರಸ್ಪರ ಮೇಳೈಸಿ ಸಾಂಸ್ಕೃತಿಕ ಕಥನವೂ ಆಗುತ್ತದೆ. ಆತ್ಮಕಥನ ಬರೆಯುವವನು ತನ್ನ ಬದುಕಿನ ಘಟನೆಗಳನ್ನು ಪೋಣಿಸದೆ ಭೂತ ವರ್ತಮಾನಗಳನ್ನು ಬೆಸೆಯುತ್ತಾ ಬದುಕನ್ನು ವಿವರಿಸುತ್ತಾ ಆ ಮೂಲಕ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಕಲಾಕೃತಿಯಾಗಿಸುತ್ತಾನೆ.

ಇತಿಹಾಸ ಒಂದು ಜನಾಂಗದ, ಸಮಾಜದ ಒಂದು ಕಾಲದ, ಘಟನಾತ್ಮಕ ಮತ್ತು ವ್ಯಕ್ತಿಗಳ ಹೊರವಲಯದ ವಸ್ತುಸತ್ಯದ ವರದಿಯಾದರೆ ಆತ್ಮಕಥನವು ಹೊರ-ಒಳಗೆರಡನ್ನೂ ವಸ್ತುಸತ್ಯ ಮತ್ತು ಮಾನಸಿಕ ಸತ್ಯಗಳ ತಳಹದಿಯ ಮೇಲೆ ಸಾಹಿತ್ಯಾತ್ಮಕವಾಗಿ ಚಿತ್ರಿಸುವಂತಹದ್ದು. ಆತ್ಮಚರಿತ್ರೆ ಬರೆಯುವವನಿಗೆ ಇತಿಹಾಸಕಾರನ ಸತ್ಯತೆ ಇರುತ್ತದೆ. ಸತ್ಯವನ್ನು ತಿಳಿದುಕೊಳ್ಳುವ ಅವಕಾಶ ಅವನಿಗಿರುತ್ತದೆ. ಅವನು ನಿಷ್ಪಕ್ಷಪಾತವಾಗಿ ತನ್ನ ಬದುಕನ್ನು ಹೇಳಲು ಪ್ರಯತ್ನಿಸಬಹುದು. ಅನುಭವನಿಷ್ಠೆ ನಿಷ್ಪಕ್ಷಪಾತ ದೃಷ್ಟಿಕೋನಗಳೆರಡನ್ನೂ ಆತ್ಮಕಥನ ಉಳಿಸಿಕೊಳ್ಳಲು ಸಮರ್ಥವಾದರೆ ಯಶಸ್ಸು ದೊರಕಿದಂತೆ.

ಈ ಕೆಳಕಂಡ ಕಾರಣಗಳಿಂದ ಒಂದು ಆತ್ಮಕಥನ ಸೋಲುತ್ತದೆ :

೧) ಆತ್ಮಕಥನಕಾರ ತನ್ನನ್ನು ಅತಿ ದೊಡ್ಡವನೆಂದು ಭ್ರಮಿಸುವುದು.

೨) ಯಾವುದೋ ಒಂದು ತತ್ವಕ್ಕೆ ಬದ್ಧನಾಗಿ ಅದನ್ನೇ ಹೇಳುತ್ತಾ ಹೋಗುವುದು.

೩) ಅತಿಶಯ ವ್ಯಕ್ತಿನಿಷ್ಠತೆ.

ಸೃಜನಶೀಲ ಮನಸ್ಸೊಂದು ಆತ್ಮಕಥನವನ್ನು ಬರೆಯುತ್ತಿರುವುದರಿಂದ ಸಮಷ್ಟಿ ಕಲ್ಪನೆಯ ಸತ್ಯ ಅಲ್ಲಿರಬೇಕು, ಸಮಗ್ರ ದರ್ಶನವಿರಬೇಕು. ಆತ್ಮಕಥನ ಪ್ರಶಂಸೆಯೂ ಅಲ್ಲ, ಭರ್ತ್ಸನೆಯೂ ಅಲ್ಲ ತನ್ನ ಬದುಕಿನ ಪ್ರಾಮಾಣಿಕ ಚಿತ್ರ ಅದಾಗಿರಬೇಕು. ಭಾವುಕತೆಗೆ ಎಡೆಮಾಡಿಕೊಡದೆ ವಿಚಾರಗಳ ಮೂಲವನ್ನು ಕುರಿತಂತಿರಬೇಕು. ಇದೇ ಮನುಷ್ಯನ ಅಂತರಂಗ-ಬಹಿರಂಗ ಅಭಿವ್ಯಕ್ತಿ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಇಲ್ಲಿಯವರೆಗೂ ಸುಮಾರು ೨೦೦ ಆತ್ಮಕಥನಗಳು ಬಂದಿವೆ. ದಲಿತ ಆತ್ಮಕಥನಗಳು ಬೆರಳೆಣಿಕೆಯಷ್ಟು ಮಾತ್ರ. ಎಪ್ಪತ್ತರ ದಶಕದ ನಂತರ ದಲಿತ ಚಳುವಳಿಯ ಜೊತೆಜೊತೆಯಲ್ಲಿ ಸೃಷ್ಟಿಯಾದ ದಲಿತ ಸಾಹಿತ್ಯದ ಒಂದು ಪ್ರಕಾರವಾಗಿ ಆತ್ಮಕಥನಗಳು ರಚನೆಯಾಗಿವೆ. ದಲಿತ ಬರಹಗಾರರು ತಮ್ಮ ಬದುಕನ್ನು ಹೇಳಿಕೊಳ್ಳುತ್ತಾ ತಮ್ಮ ಜನಾಂಗದ ಯಾತನಾಮಯ ಬದುಕು, ಆಚರಣೆ, ಸಂಪ್ರದಾಯ, ಕುರುಡುನಂಬಿಕೆ, ಆಹಾರಪದ್ಧತಿ, ಅಸ್ಪೃಶ್ಯತೆ, ಅವಮಾನ ಮುಂತಾದುವುಗಳನ್ನು ಅನಾವರಣಗೊಳಿಸುತ್ತಾ ಹೋಗುತ್ತಾರೆ. ಒಂದು ಬಗೆಯ ಆತ್ಮವಿಶ್ವಾಸವನ್ನು ತಂದುಕೊಡುವ ಬರಹಗಳು ಇವು.

ಆಫ್ರಿಕನ್ ಲೇಖಕರಾದ ಚಿನುವಾ ಅಚಿಬೆ, ಗ್ಯೂಗಿ, ಓಲೆ ಸೊಯೆಂಕಾ, ಅಮೇರಿಕನ್ ಕಪ್ಪು ಲೇಖಕರಾದ ಬಾಲ್ಡ್‌ವಿನ್, ಜಾನ್ ವಿಲಿಯಮ್ಸ್, ಜೀನ್ ಟೂನರ್ ತಮ್ಮ ಜನಾಂಗದ ವಿಶಿಷ್ಟ ಸಂಸ್ಕೃತಿ, ಸ್ಮೃತಿಗಳು ಹಾಗೂ ತಮ್ಮ ಚರಿತ್ರೆಯನ್ನು ದಾಖಲಿಸುತ್ತಾರೆ. ಆ ಮೂಲಕ ತಮ್ಮ ಜನಾಂಗದ ಸ್ವಾತಂತ್ರ್ಯ, ಸಮಾನತೆ, ಮಾನವೀಯತೆಗಳ ಅನುಷ್ಠಾನದ ಆಶಯಗಳನ್ನು ವ್ಯಕ್ತಪಡಿಸುತ್ತಾರೆ. ಆದುದರಿಂದ ಮೇಲೆ ತಿಳಿಸಿದವರ ಆತ್ಮಕಥನಗಳು ಸಾಂಸ್ಕೃತಿಕ ಸಂಕಥನಗಳಾಗಿದ್ದು ಜಾಗತಿಕ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನವನ್ನು ಗಳಿಸಿಕೊಂಡಿವೆ.

ಬಡತನವನ್ನು ನಮ್ಮ ಜನ ಮಿಕ್ಕೆಲ್ಲ ಕಾರ್ಪಣ್ಯಗಳಂತೆ ತಮ್ಮ ಬದುಕಿನ ಭಾಗವಾಗಿಯೇ ಸ್ವೀಕರಿಸಿದ್ದಾರೆ. ಅವರಿಗದು ಅವಮಾನದ ವಿಷಯವಲ್ಲ, ಆದರೆ ಅಸ್ಪೃಶ್ಯತೆ ಹಾಗಲ್ಲ. ಬ್ರೆಕ್ಟ್ ಹೇಳುವಂತೆ ಬಡವರ ಬದುಕಿನ ಕ್ರಿಯಾಶೀಲತೆ ಇರುವುದು ಅವರು ಬಡತನವನ್ನು ಎದುರಿಸುವ ಕ್ರಿಯೆಯಲ್ಲಿ, ಆದರೆ ಬಡತನವನ್ನು ಏನೇನೋ ಹೆಸರಿನಲ್ಲಿ ಅವರ ಮೇಲೆ ಹೇರಲಾಗುತ್ತಿದೆ. ಈ 'ಏನೇನೋ ಹೆಸರಿನಲ್ಲಿ' ಎಂಬ ಮಾತಿದೆಯೆಲ್ಲಾ ಅದು ಬಹಳ ಮುಖ್ಯವಾದದ್ದು. ಇದನ್ನು ಆತ್ಮಕಥನಕಾರರು ಬಯಲುಗೊಳಿಸಬೇಕಾಗಿದೆ. ಆ ಮೂಲಕ ದಲಿತರ ಚರಿತ್ರೆಯನ್ನು ಕಟ್ಟಿಕೊಡಬೇಕಾಗಿದೆ. ಆತ್ಮಕಥನಕಾರನು ಬದುಕಿದ ದೇಶ, ಕಾಲದ ಪರಿಧಿಯೊಳಗೆ ಎಲ್ಲವನ್ನೂ ಒಳಗೊಳ್ಳುವ ಚರಿತ್ರೆಯನ್ನು ನಿರ್ಮಿಸಬೇಕಾಗಿದೆ. ಇದು ಸಮರ್ಥ ದಲಿತ ಆತ್ಮಕಥನ ಕಾರನಿಗೆ ಮಾತ್ರ ಸಾಧ್ಯವಾಗುವಂತಹದ್ದು.

ವಿಶ್ವದಾದ್ಯಂತ ಪರಿಸರ ರಕ್ಷಣೆ, ಮಾನವ ಹಕ್ಕುಗಳಿಗಾಗಿ, ಸ್ವಾಭಿಮಾನಿ ಬದುಕಿಗಾಗಿ, ಹೋರಾಡುತ್ತಿರುವ ಎಲ್ಲಾ ಬುದ್ಧಿಜೀವಿಗಳೂ ಹೊಸ ಬದುಕಿಗಾಗಿ ಹಾತೊರೆಯುತ್ತಿದ್ದಾರೆ.

ಆಧುನೀಕರಣ, ಜಾಗತೀಕರಣ, ಖಾಸಗೀಕರಣಗಳಿಂದಾಗಿ ದಲಿತ ಲೇಖಕರು ಅಷ್ಟೇ ಏಕೆ, ಎಲ್ಲ ಲೇಖಕರೂ ಗೊಂದಲಕ್ಕೊಳಗಾಗಿದ್ದಾರೆ. ಪ್ರಸಕ್ತ ಸನ್ನಿವೇಶದಲ್ಲಿ ಸಾಮೂಹಿಕ ಕ್ರಿಯೆಯೊಂದರಲ್ಲಿ ಸಂಘಟಿಸಿಕೊಳ್ಳುವುದಕ್ಕೆ ಸಾಧ್ಯವಾಗದಿರುವ ಈ ಸಂಕ್ರಮಣ ಸ್ಥಿತಿಯಲ್ಲಾದರೂ ಸಮಾನತೆ ಮತ್ತು ಮಾನವನ ಘನತೆಯನ್ನು ಕೇಂದ್ರವಾಗುಳ್ಳ ಆತ್ಮಕಥನಗಳನ್ನು ರಚಿಸುವಲ್ಲಿ ದಲಿತ ಲೇಖಕರು ಮುಂದಾಗಬೇಕಿದೆ.

ಬ್ರಾಹ್ಮಣ-ದಲಿತ, ಈ ದ್ವಂದ್ವಾತ್ಮಕ ಪರಿಕಲ್ಪನೆ ಭಾರತದ ಸಂಸ್ಕೃತಿಯಲ್ಲಿ ಸಂಘರ್ಷದ ಸ್ವರೂಪದಲ್ಲಿಯೇ ಮೊದಲಿನಿಂದಲೂ ಬೆಳೆದುಬಂದಿದೆ. ಇದಕ್ಕೊಂದು ದೀರ್ಘ ಇತಿಹಾಸವಿದೆ. ವರ್ಣ, ಜಾತಿ, ಧರ್ಮ ಸಿದ್ಧಾಂತಗಳ ಸಂಘರ್ಷದ ಇತಿಹಾಸ ಇದು. ಆದುದರಿಂದ ದಲಿತರಿಗೆ ಸಂಸ್ಕೃತಿ ಎಂಬುದೊಂದಿದೆ. ಭಾರತದ ತೊಂಬತ್ತಕ್ಕೂ ಹೆಚ್ಚು ತತ್ವಶಾಸ್ತ್ರೀಯ ಶಾಖೆಗಳು ನಾಸ್ತಿಕವಾದವಾಗಿದ್ದು, ಅವೆಲ್ಲವೂ ಅವೈದಿಕ ಎಂದು ದೇವಿಪ್ರಸಾದ ಚಟ್ಟೋಪಾಧ್ಯಾಯ ಹೇಳುತ್ತಾರೆ. ಲೋಕಾಯತ, ಚಾರ್ವಾಕ, ಪಾಶುಪತ, ಭೈರವನಾಥ, ಸಿದ್ಧ, ನ್ಯಾಯ, ವೈಶೇಷಿಕ, ತಾಂತ್ರಿಕಪೂರ್ವ ಮೀಮಾಂಸೆ, ಇವೆಲ್ಲವೂ ದ್ರಾವಿಡಾದಿ ಆರ್ಯೇತರರ ತತ್ವಗಳು. ಇವುಗಳಿಗೆ ದಲಿತರ ಕೊಡುಗೆ ಅಪಾರ. ಖಗೋಲಶಾಸ್ತ್ರ, ರಸಾಯನಶಾಸ್ತ್ರ, ವೈದ್ಯಕೀಯ, ತಾಂತ್ರಿಕ ಕುಶಲತೆ, ಶಿಲ್ಪಶಾಸ್ತ್ರ, ನಾಟ್ಯ ಇವುಗಳೆಲ್ಲದರ ಹುಟ್ಟು ಬೆಳವಣಿಗೆಯ ಇತಿಹಾಸ ಗಮನಿಸಿದರೆ ದಲಿತರ ಕೊಡುಗೆ ಏನು ಎಂಬುದು ಸ್ಪಷ್ಟವಾಗುತ್ತದೆ. ಆದರೆ ವಿಸ್ಮೃತಿಯಿಂದಾಗಿ ಹಾಗೂ ಸವರ್ಣೀಯರ ಹುನ್ನಾರಗಳಿಂದಾಗಿ ಇವೆಲ್ಲವೂ ದಲಿತರ ಕೊಡುಗೆಗಳಲ್ಲ ಎಂಬಂತಾಗಿ ಹೋಗಿದೆ. ಆದ್ದರಿಂದ ಗತಕಾಲದ ನೆನಪು ಬಹಳ ಮುಖ್ಯವಾದದ್ದು. ಆ ಮೂಲಕ ದಲಿತ ಆತ್ಮಕಥನಕಾರರು ದಲಿತರ ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡಲು ಪ್ರಯತ್ನಿಸಬೇಕು. ಡಾ|| ಸಿದ್ಧಲಿಂಗಯ್ಯನವರು 'ಪಂಚಮ' ನಾಟಕದಲ್ಲಿ ಅವರದೇ ಆದ ವಿಶಿಷ್ಟ ಹಾಸ್ಯ, ವ್ಯಂಗ್ಯ, ಜಾಣತನದ ಶೈಲಿಯಲ್ಲಿ ಈ ಕುರಿತು ಹೇಳುತ್ತಾರೆ. ಈ ಪ್ರಬಂಧದಲ್ಲಿ ಈ ಅಂಶವನ್ನು ರೂಪಕಾತ್ಮಕವಾಗಿ ಸಾಂದರ್ಭಿಕವಾಗಿ ಪ್ರಸ್ತಾಪಿಸುತ್ತಿದ್ದೇನೆ. 'ಪಂಚಮ' ನಾಟಕದ ನಾಟಕೀಯ ಸನ್ನಿವೇಶವು ಹಯವದನರಾವ್ ಎನ್ನುವ ಐಎಎಸ್ ಅಧಿಕಾರಿ ನಡೆಸುವ ಸಂದರ್ಶನದ ಸುತ್ತ ಹೆಣೆದುಕೊಂಡಿದೆ. ಆ ಅಧಿಕಾರಿಯ ಬ್ರಾಹ್ಮಣ ಪ್ರತಿಷ್ಠೆ ಮತ್ತು ದುರಹಂಕಾರದಿಂದಾಗಿ ಸಂದರ್ಶನಕ್ಕೆ ಬರುವ ಎಲ್ಲ ದಲಿತ ಅಭ್ಯರ್ಥಿಗಳನ್ನು ಅನರ್ಹರೆನಿಸುತ್ತಾನೆ. ಮೊದಲ ನಾಲ್ಕು ದಲಿತ ಅಭ್ಯರ್ಥಿಗಳು ಆಧುನಿಕ ದಲಿತ ವ್ಯಕ್ತಿತ್ವ ನಿರ್ಮಾಣದ ಭಿನ್ನ ಹಂತಗಳನ್ನು ಪ್ರತಿನಿಧಿಸುತ್ತಾರೆ. ಆತ್ಮವಿಶ್ವಾಸವಿಲ್ಲದ ವ್ಯಕ್ತಿತ್ವಗಳು ಅವು. ಅವರು ವಿಕಾರಿಗಳು ಮತ್ತು ಅಸ್ವಸ್ಥರಾಗಿದ್ದಾರೆ. ಸುಳ್ಳು

**ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಇಲ್ಲಿಯವರೆಗೂ ಸುಮಾರು ೨೧೦ ಆತ್ಮಕಥನಗಳು ಬಂದಿವೆ. ದಲಿತ ಆತ್ಮಕಥನಗಳು ಬೆರಳೆಣಿಕೆಯಷ್ಟು ಮಾತ್ರ. ಎಪ್ಪತ್ತರ ದಶಕದ ನಂತರ ದಲಿತ ಚಳುವಳಿಯ ಜೊತೆಜೊತೆಯಲ್ಲಿ ಸೃಷ್ಟಿಯಾದ ದಲಿತ ಸಾಹಿತ್ಯದ ಒಂದು ಪ್ರಕಾರವಾಗಿ ಆತ್ಮಕಥನಗಳು ರಚನೆಯಾಗಿವೆ. ದಲಿತ ಬರಹಗಾರರು ತಮ್ಮ ಬದುಕನ್ನು ಹೇಳಿಕೊಳ್ಳುತ್ತಾ ತಮ್ಮ ಜನಾಂಗದ ಯಾತನಾಮಯ ಬದುಕು, ಆಚರಣೆ, ಸಂಪ್ರದಾಯ, ಕುರುಡುನಂಬಿಕೆ, ಆಹಾರಪದ್ಧತಿ, ಅಸ್ಪೃಶ್ಯತೆ, ಅವಮಾನ ಮುಂತಾದುವುಗಳನ್ನು ಅನಾವರಣಗೊಳಿಸುತ್ತಾ ಹೋಗುತ್ತಾರೆ.**

ಹೇಳಿ ಸಿಕ್ಕಿಹಾಕಿಕೊಳ್ಳುತ್ತಾರೆ. ಆದರೆ ಅವರೆಲ್ಲರಲ್ಲೂ ಸಮಾನವಾಗಿರುವ ಒಂದು ಅಂಶವೆಂದರೆ ತಮ್ಮ ಭೂತದ ಬಗ್ಗೆ ಅವರಿಗಿರುವ ತಿರಸ್ಕಾರ, ಐಚ್ಛಿಕ ಸ್ಮೃತಿನಾಶ. ಪಂಚಮ ಐದನೆಯವನು ಬರುತ್ತಾನೆ. ಬಂದಕೂಡಲೇ ಎಲ್ಲವೂ ಬದಲಾಗುತ್ತದೆ. ಒಂದು ವಿಲಕ್ಷಣ ಸೌಂದರ್ಯ ಅಲ್ಲಿ ಉದ್ಭವವಾಗುತ್ತದೆ. ಹಯವದನರಾವ್ ತನ್ನ ಇಡೀ ಜೀವನದಲ್ಲಿ ಈ ಪಂಚಮನ ತರಹದವರನ್ನು ನೋಡಿರುವುದಿಲ್ಲ. ಪಂಚಮ ತನ್ನ ಗತಕಾಲವನ್ನು ಮರೆಯಲು ನಿರಾಕರಿಸುತ್ತಾನೆ, ಮಾತ್ರವಲ್ಲ ಅದನ್ನು ಉದ್ದೇಶ ಪೂರ್ವಕವಾಗಿ ನೆನಪಿಸಿಕೊಳ್ಳುತ್ತಾನೆ. ಒಂದು ಉದಾತ್ತ ಘನಕೋಪದ ಪ್ರಭಾವಳಿ ಅವನ ಸುತ್ತಲೂ ಸೃಷ್ಟಿಯಾಗುತ್ತದೆ. 'ಆತ್ಮಗೌರವದ ಬದುಕನ್ನು ನಡೆಸಿ' ಎಂದು ತನ್ನ ವರ್ಗಕ್ಕೆ ಆ ಪಂಚಮ ಕರೆ ಕೊಡುವುದರೊಂದಿಗೆ ನಾಟಕ ಮುಗಿಯುತ್ತದೆ. ಇದನ್ನೇ ರೂಪಕವಾಗಿ ಹೇಳುವುದಾದರೆ ಪಂಚಮ ಇಲ್ಲಿ ಶಕ್ತಿ ಮತ್ತು ವೈಭವ. ದಲಿತ ಆತ್ಮಕಥನಗಳು ಈ 'ಪಂಚಮ'ದ ಧಾಟಿಯಲ್ಲಿ ಸೃಷ್ಟಿಯಾಗಬೇಕಾಗಿದೆ.

ದಲಿತ ಜೀವನದ ಸ್ಥಿತಿ ಮತ್ತು ಸಾಧ್ಯತೆಗಳನ್ನು ಒಟ್ಟಾಗಿ ಹಿಡಿದು ದಲಿತ ಜೀವನದ ಚಿತ್ರಣವನ್ನು ಚೈತನ್ಯಪೂರ್ಣವಾಗಿಸುವ ದಲಿತ ಆತ್ಮಕಥನಗಳಲ್ಲಿ ಎರಡು ಬಗೆಯನ್ನು ಗಮನಿಸಬಹುದು :

ಮೊದಲನೆಯದು, ಡಾ|| ಸಿದ್ಧಲಿಂಗಯ್ಯನವರ 'ಊರುಕೇರಿ'ಯ ಅಸ್ಪೃಶ್ಯತೆ ಮತ್ತು ಬಡತನದೊಂದಿಗೆ ಸಾಂಸ್ಕೃತಿಕ ಸಂಕಥನದ ಸಾಧ್ಯತೆಗಳನ್ನು ಅಳವಡಿಸಿಕೊಂಡ 'ಕಾಮಿಕ್ ಐರನಿ' ಎನ್ನಬಹುದಾದ ಬರವಣಿಗೆ.

ಎರಡನೆಯದು, ಅಸ್ಪೃಶ್ಯತೆ ಮತ್ತು ಬಡತನದಿಂದ ಜರ್ಝರಿತರಾದ ದಲಿತರ ನೋವುಗಳನ್ನು ಚಿತ್ರಿಸಬಹುದಾದ ಅರವಿಂದ ಮಾಲಗತ್ತಿ, ಲಕ್ಷ್ಮಣ್, ಕೆ. ಗೋವಿಂದರಾಜು ಅಂತಹವರ ಬರವಣಿಗೆ.

ಸಿದ್ಧಲಿಂಗಯ್ಯನವರದು Low momentumನವು ಎನ್ನಬಹುದಾದ ಬರವಣಿಗೆ. ದೇವನೂರ ಮಹಾದೇವ ಅವರ 'ಕುಸುಮ ಬಾಲೆ' ಮತ್ತು 'ಒಡಲಾಳ' ಕೂಡ Low momentum ಎನ್ನಬಹುದಾದವು. ಇಲ್ಲಿ ಬಳಸುವ ತಂತ್ರವೆಂದರೆ ಗಂಭೀರವಾದದ್ದನ್ನು ಲಘುವಾಗಿ, ಶೀಲವನ್ನು ಅಶ್ಲೀಲವಾಗಿ, ಶಿಷ್ಟವನ್ನು ಪರಿಶಿಷ್ಟವಾಗಿ ಹೀಗೆ ಒಂದು ಸಾಮಾಜಿಕ ಭಾಷೆಯಿಂದ ಇನ್ನೊಂದು ಸಾಮಾಜಿಕ ಭಾಷೆಗೆ ರೂಪಾಂತರ ಮಾಡಿಕೊಳ್ಳುವುದಾಗಿದೆ. ಪ್ರತಿಭಟನಾತ್ಮಕ ಲೇವಡಿಯು ಊರುಕೇರಿಯ ಪ್ರಧಾನ ಧ್ವನಿಯಾಗಿ ಮೂಡಿಬರುತ್ತದೆ. ಇಲ್ಲಿಯ ಘಟನೆಗಳನ್ನು ಕಂಡು ನಗುವುದಕ್ಕೆ ಸಾಧ್ಯವಾಗುವುದು ಬರವಣಿಗೆಯ ವಿಶಿಷ್ಟತೆಯಿಂದಲೇ. ಈ ಬಗೆಯ 'ಕಾಮಿಕ್ ಐರನಿ' ದಲಿತರು ಆತ್ಮವಿಶ್ವಾಸದಿಂದ ಬಾಳುವ ಉಪಾಯಗಳನ್ನು ತಿಳಿಸುತ್ತಲೇ ನಗಿಸುತ್ತಲೇ ದಲಿತರ ಆಳವಾದ, ಪ್ರಕೃತಿದತ್ತ ಚೈತನ್ಯವು ಬೆಳಗುವಂತೆ ಮಾಡುತ್ತದೆ. ಇಲ್ಲಿ ಅಬ್ಬರದ ಮಾತಿಲ್ಲ, ಪಿಸುಮಾತಿದೆ. ನಿಲುವಲ್ಲಲ್ಲ – ಚಲನಶೀಲತೆಯಲ್ಲಿ, ನಗಿಸುತ್ತಲೇ ನಮ್ಮನ್ನು ದೃಢಗೊಳಿಸುವ ಬರವಣಿಗೆ ಇದು. ದಲಿತರು ಹಾಡುವಾಗ ಕತೆ ಕಟ್ಟುವಾಗ ನಗುವಾಗ ಕುಣಿಯುವಾಗ ವ್ಯಕ್ತವಾಗುವ ಕಲೆ ಚೈತನ್ಯಯುಕ್ತವಾದದ್ದು. ಸಮಾಜದ ನೈಜ ಬದಲಾವಣೆಯ ಕ್ರಾಂತಿಕಾರಕ ಸಾಧ್ಯತೆಯನ್ನು ಇಲ್ಲೇ ಈ ಸೋಲಿನ ನಿರಾಶೆಯಲ್ಲೇ ಸಾಧ್ಯವೆಂದೂ ಸಾಧುವೆಂದೂ ತರ್ಕಾತೀತವೆಂದೂ ಒಪ್ಪಿಸುವಂತೆ ಮಾಡುವುದು ಹಲವು ಉಪಾಯಗಳನ್ನೊಳಗೊಂಡ ತಂತ್ರಗಾರಿಕೆ ಇದು. ಸಿದ್ಧಲಿಂಗಯ್ಯ ನವರ ಬರವಣಿಗೆ ಚಾರ್ಲಿ ಚಾಪ್ಲಿನ್ ಚಿತ್ರಗಳನ್ನು ನೆನಪಿಸುತ್ತದೆ. ಸರ್ವಾಧಿಕಾರಿ ಹಿಟ್ಲರ್‌ನನ್ನೇ ಲೇವಡಿ ಮಾಡಿ ಭವ್ಯವಾದ ಅನುಭವವನ್ನು ಚಾಪ್ಲಿನ್ ತನ್ನ 'ದಿ ಗ್ರೇಟ್ ಡಿಕ್ಟೇಟರ್' ಚಿತ್ರದಲ್ಲಿ ಕಟ್ಟಿಕೊಡುತ್ತಾನೆ. ಆ ಮೂಲಕ ನೋಡುಗರನ್ನು ಹೊಸ ಸಮಾಜದ ಸಂಸ್ಕೃತಿಯ ನಿರ್ಮಾಣದ ಚಿಂತನೆಗೆ ಹಚ್ಚುತ್ತಾನೆ. ಸಿದ್ಧಲಿಂಗಯ್ಯನವರ 'ಊರುಕೇರಿ'ಯಲ್ಲಿನ ಹಲವಾರು ಪ್ರಸಂಗಗಳು ನಮ್ಮನ್ನು ನಗಿಸುತ್ತಲೇ ಅಸ್ಪೃಶ್ಯತೆ, ಬಡತನ, ಹಸಿವು ಇವುಗಳಿಂದ ಮುಕ್ತವಾಗುವುದರ ಬಗ್ಗೆ ಚಿಂತಿಸುವಂತೆ ಮಾಡುತ್ತವೆ.

ಎರಡನೆಯ ಬಗೆಯ ಬರವಣಿಗೆ ಅರವಿಂದ ಮಾಲಗತ್ತಿ ಮುಂತಾದವರ ಬರವಣಿಗೆಯ ಕ್ರಮ. ಈ ಲೇಖಕರ ಬರವಣಿಗೆಗಳಲ್ಲಿ, ಬಡತನ ಅಸ್ಪೃಶ್ಯತೆಗಳಿಂದ ಉಂಟಾಗುವ ಅವಮಾನಕರ ಪರಿಸ್ಥಿತಿಯನ್ನು ಚಿತ್ರಿಸುತ್ತಲೇ ಆತ್ಮವಿಶ್ವಾಸದಿಂದ ಬದುಕುವ ಛಲದ ಮನೋಭಾವ ವ್ಯಕ್ತಪಡಿಸುವುದನ್ನು ಗಮನಿಸಬಹುದು. ಅರವಿಂದ ಮಾಲಗತ್ತಿಯವರ 'ಗೌರ್ನಮೆಂಟ್ ಬ್ರಾಹ್ಮಣ' ಕೃತಿಯ ಈ ಸಾಲುಗಳು ಈ ನಿಟ್ಟಿನಲ್ಲಿ ಒಂದು ಉದಾಹರಣೆ :

ಹೆಣದ ಮೇಲೆ ಅವರು ತೂರಿರುವ ಹಣ ನೆಲಕ್ಕೆ ಬಿದ್ದಮೇಲೆ ಕಚ್ಚಾಡಿ ಎತ್ತಿಕೊಳ್ಳುವುದು ದಲಿತರ ಕೆಲಸ. ದಲಿತರು ಇರದೆ ಹೋದರೆ ಅವರು ತೂರುವ ಹಣಕ್ಕೆ ಬೆಲೆಯಾದರೂ ಏನು ? ಅವರು ಹಣ ತೂರಬೇಕು. ತೂರಿದ ಹಣ ಉರುಳುತ್ತಾ ಹೆಣ ಹೊತ್ತವರ ಕಾಲಲ್ಲಿ, ಹಿಂದೆ ಅಳುತ್ತಾ ಬರುವವರ ಕಾಲಲ್ಲಿ ಹೋಗಬೇಕು. ಅದನ್ನು ಅವರು ದಾಟಿ ಪಾಪ ಕಳೆದುಕೊಳ್ಳಬೇಕು. ಅವರೆಲ್ಲ ತುಳಿದು ಹೋದ ಮೇಲೆ ನಾವು ಅದನ್ನು ಎತ್ತಿಕೊಳ್ಳಬೇಕು.

ಸಾಮಾನ್ಯವಾಗಿ ಉನ್ನತ ಜಾತಿಯವರ ಮದುವೆಗಳಿಗೆ ದಲಿತರು ಒಳ್ಳೆಯ ಊಟ ಸಿಗುತ್ತದೆಂದು ಹೋಗುತ್ತಾರೆ. ಒಂದು ಸಲ ಶೇಠ್‌ಜೀ ಮಗಳ ಮದುವೆಗೆ ಅವರು ಊಟಕ್ಕೆ ಹೋಗುವ ಪ್ರಸಂಗವನ್ನು ಕೇಳಿ :

''ಅವರ ಮನೆಯಲ್ಲಿ (ಶೇಠ್‌ಜೀ ಮನೆಯಲ್ಲಿ) ದುಡಿಯುವ ಈರ್ವರು ಕೈಯಲ್ಲಿ ಕೋಲುಹಿಡಿದು ನಿಂತಿರುತ್ತಿದ್ದರು. ನಾಯಿ ಹಂದಿಗಳಿಗೆ ಹೊಡೆಯಲು ಬಳಸುವುದು ಅದೇ ಕೋಲು. ನಮಗೆ ಹೊಡೆಯಲು ಬಳಸುವುದೂ ಅದೇ ಕೋಲು. ಊರ ಜನರೆಲ್ಲರ ಊಟ ಮುಗಿದ ಕೊನೆಯಲ್ಲಿ ದಲಿತರನ್ನು ಬಿಡಲಾಗುತ್ತಿತ್ತು. ಎಷ್ಟು ದಲಿತರು ಅಲ್ಲಿ ಸೇರಿದ್ದರೆಂದರೆ ಅಜ್ಜಿ ಹೇಳುತ್ತಿದ್ದಳು:

''ಇವತ್ತು ಕಂಡಾಪಟ್ಟೆ ಮಂದಿ ಏನಿಲ್ಲಾಂದ್ರ ಮೂರ ಪಂಕ್ತೇರ ಆಕ್ತದ – ಎನ್ನುತ್ತಿದ್ದಳು. ನಮಗಿಂತಲೂ ಕೀಳಾದ ಇನ್ನೊಂದು ತಂಡವೂ ಅಲ್ಲಿತ್ತು. ಅವರು ಈ ಮೂರೂ ಪಂಕ್ತಿಗೆ ಸಂಬಂಧಪಡದವರು. ಹೀಗಾಗಿ ಅವರಿಗೆ ನಮಗಿಂತಲೂ ಕೊನೆಗೆ ಊಟ. ಅವರಲ್ಲಿ ಅಡ್ವಿಚೊಂಚರು, ಲೋಲ್ಯಾರು, ಕುಂಚಿಕೊರಮರು ಇರುತ್ತಿದ್ದರು. ಇವರನ್ನು ಕಂಡು ನಾವು ಹೇಸುತ್ತಿದ್ದೆವು.''

ಈ ಮೇಲಿನ ಭಾಗಗಳು ಪ್ರೇಮಚಂದರ ಬರವಣಿಗೆಯನ್ನು ಜ್ಞಾಪಿಸುತ್ತವೆ. ಅವರ 'ಕಫನ್' ಕತೆಯಲ್ಲಿ ಸತ್ತ ಹೆಣ್ಣಿನ ದೇಹದ ಮೇಲೆ ಹೊದಿಸಿದ್ದ ಬಟ್ಟೆಯನ್ನು ಮಾರಿ ಕುಡಿದು ತಿಂದು ಒಬ್ಬ ಮೈಮರೆಯುತ್ತಾನೆ. ಮನುಷ್ಯರಾದ ಇವರು ಬಡತನದ ವ್ಯವಸ್ಥೆಯಲ್ಲಿ ಮಾನವೀಯತೆಯನ್ನೇ ಮರೆಯುತ್ತಾರೆ. ಇಲ್ಲಿ ಅಡ್ವಿಚೊಂಚರು ಮೊದಲಾದವರನ್ನು ಕಂಡು ಹೇಸಿಕೊಳ್ಳುವ ಪ್ರಸಂಗ ಇದೇ ಆಗಿದೆ. ಆದ್ದರಿಂದ ನಮ್ಮ ಬಗ್ಗೆ ನಾವೇ ಹೇಸುವಂತೆ ಮಾಡಿ ನಮ್ಮಲ್ಲಿ ಮೌಲ್ಯಪ್ರಜ್ಞೆ ಹುಟ್ಟುವಂತೆ ಪ್ರೇಮಚಂದರು ಮಾಡುತ್ತಾರೆ. 'ಗೌರ್ನಮೆಂಟ್ ಬ್ರಾಹ್ಮಣ', 'ಕಾರ್ಯ' ಕಾದಂಬರಿಯಲ್ಲಿ ಅರವಿಂದ ಮಾಲಗತ್ತಿಯವರು ಪ್ರೇಮಚಂದರ ಬರವಣಿಗೆಯ ಕ್ರಮವನ್ನು ಅನುಸರಿಸುವುದರಿಂದ ದಲಿತರ ಬದುಕಿನ ಎಲ್ಲಾ ಆಯಾಮಗಳನ್ನು ಶೋಧಿಸಲು ಸಾಧ್ಯವಾಗಿದೆ.

ಬಡತನ, ಅಸ್ಪೃಶ್ಯತೆ, ಹಸಿವು, ಅಸಮಾನತೆಯ ಚಿತ್ರಣಗಳನ್ನು ದಟ್ಟವಾಗಿ ಕೊಡುತ್ತಲೇ ನಮ್ಮನ್ನು ಚಿಂತನೆಗೆ ಹಚ್ಚಿಸುವ ಹುನ್ನಾರದ ಬರವಣಿಗೆಯ ಕ್ರಮವಿದು. ಈ ಬರವಣಿಗೆಯ ಕ್ರಮವನ್ನೇ ಲಕ್ಷ್ಮಣ್, ಕೆ. ಗೋವಿಂದರಾಜು ಮುಂತಾದವರು ಮುಂದುವರಿಸಿದ್ದಾರೆ.

ಎಚ್. ದಂಡಪ್ಪ
೫೬೧, 'ಶ್ರೇಯಸ್', ೨ನೇ ಕ್ರಾಸ್, ಸಬ್‌ರಿಜಿಸ್ಟ್ರಾರ್ ಕಛೇರಿ ಹತ್ತಿರ, ಯುವಿಸಿಇ ಲೇಔಟ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



**ಕಣಜ** (ಜಗತ್ತಿನ ಶ್ರೇಷ್ಠ ಕತೆಗಳು)
ಅನು : ಪ್ರಮೋದ ಮುತಾಲಿಕ
**ಪುಟ : ೧೨೮** **ಬೆಲೆ : ರೂ. ೬೦**
**ಕುಸುಮ ಪ್ರಕಾಶನ,** ನಂ. ೬೨೯, ಮಂದಾರ, ೬೮ನೇ ಅಡ್ಡರಸ್ತೆ, ಕುಮಾರಸ್ವಾಮಿ ಬಡಾವಣೆ, ಬೆಂಗಳೂರು-೭೮

''ಲೋಕಸಾಹಿತ್ಯೋದ್ಯಾನದ ಸವಿಜೇನು'' ಎಂಬ ಅರ್ಥಪೂರ್ಣ ಫಲಕವೊಂದು ಹಿಂದೆ ನವಕರ್ನಾಟಕ ಪ್ರಕಾಶನದ ವಿಶ್ವಕಥಾಕೋಶದ ಬಿಡುಗಡೆಯ ಎಲ್ಲ ಸಮಾರಂಭಗಳಲ್ಲೂ ರಾರಾಜಿಸುತ್ತಿತ್ತು. ವಿವಿಧ ಹೂಗಳಿಂದ ಮಧು ಸಂಗ್ರಹಿಸಿದಂತೆ ವಿಶ್ವದೆಲ್ಲೆಡೆಯಿಂದ ಶ್ರೇಷ್ಠ ಸಾಹಿತಿಗಳ ಕಥೆಗಳನ್ನು ಕನ್ನಡಕ್ಕೆ ತಂದಿರುವ ಈ ಸಂಕಲನದಲ್ಲೂ ಸಿಹಿ ಜೇನ ಹನಿಗಳಂಥ ಕಥೆಗಳೇ ಇವೆ. ವಿಶ್ವದ ನಾನಾ ಭಾಗದ ಜನರು ಬದುಕನ್ನು ಸ್ವೀಕರಿಸಿದ ಪರಿಯನ್ನು ಶ್ರೇಷ್ಠ ಸಾಹಿತಿಗಳು ದಾಖಲಿಸಿದ್ದು, ನೋವಿಗೂ ನಲಿವಿಗೂ ಸಮಾನಾಂತರವಾಗಿ ಸ್ಪಂದಿಸಿದ್ದಾರೆ. ಕಥೆ ಬರೆಯುವುದೆಂದರೆ ಮನುಷ್ಯ ಮನುಷ್ಯನನ್ನು ಆತ್ಮೀಯ ಭಾವದೊಂದಿಗೆ ಪರಸ್ಪರ ಸ್ವಾಗತಿಸುವುದು ಎಂದರೆ ಸರಿಯಾದೀತೇನೋ ಎಂಬಷ್ಟು ಮಾರ್ದವತೆ ತುಂಬಿದ ಕಥೆಗಳು. ಕಳೆದ ಎರಡು ಶತಮಾನಗಳಿಂದೀಚೆಗೆ ಇವೆಲ್ಲ ಬರೆಯಲ್ಪಟ್ಟಿವೆ.



**ಎಡ್ವರ್ಡ್ ಸೈದ್** (ಚಿಂತನೆಗಳು, ಬರಹಗಳು)
ಶೆಲ್ಲಿ ವಾಲಿಯಾ ಅನು : ರಾಮಲಿಂಗಪ್ಪ ಟಿ. ಬೇಗೂರು
**ಪುಟ : ೯೩** **ಬೆಲೆ : ರೂ . ೫೦**
**ಅಧ್ಯಯನ ಮಂಡಲ (ಕೆ. ಆರ್. ನಾಗರಾಜ),** ೧೩/೮೫, ಆರ್.ವಿ.ರಸ್ತೆ, ಬಸವನಗುಡಿ, ಬೆಂಗಳೂರು - ೪

ಸಾಹಿತ್ಯ-ಇತಿಹಾಸ-ಸಾಂಸ್ಕೃತಿಕ ಮತ್ತು ರಾಜಕೀಯಗಳೆಂಬ ವರ್ತುಲದ ಸುತ್ತ ತಮ್ಮ ವಿಶ್ಲೇಷಣಾತ್ಮಕ ಬರಹ-ಭಾಷಣಗಳಿಂದ ಜಾಗತಿಕ ಮಟ್ಟದಲ್ಲಿ ಇಂದು ಗುರುತಿಸಲ್ಪಟ್ಟ ಎಡ್ವರ್ಡ್ ಸೈದ್ ಅವರ ಚಿಂತನೆಗಳನ್ನು ಗ್ರಹಿಸಲು ಈ ಪುಸ್ತಕ ತುಂಬ ಸಹಕಾರಿ. ಶ್ರೀಮಂತ ರಾಷ್ಟ್ರಗಳು ಸುಧಾರಣೆಯ ನೆಪದಲ್ಲಿ ಬಡರಾಷ್ಟ್ರಗಳಲ್ಲಿ ತಮ್ಮ ವಸಾಹತು ಸ್ಥಾಪಿಸಿ ಯಜಮಾನ ಸಂಸ್ಕೃತಿ ಬೆಳೆಸುವುದನ್ನು ವಿರೋಧಿಸುವ ಸೈದ್ ಹಿಂದೆ ಪ್ಯಾಲೆಸ್ತೀನ್ ನಿರಾಶ್ರಿತರಾಗಿದ್ದರು. ಅಮೆರಿಕಾದ ವಿಶ್ವವಿದ್ಯಾನಿಲಯದಲ್ಲಿ ತೌಲನಿಕ ಸಾಹಿತ್ಯ ವಿಭಾಗದ ಪ್ರಾಧ್ಯಾಪಕರಾಗಿದ್ದರು. ಪ್ರಮುಖ ರಾಜಕೀಯ ಚಿಂತಕರಲ್ಲೊಬ್ಬರಾಗಿದ್ದರು. ವಿಶೇಷವಾಗಿ ಈ ಪುಸ್ತಕದಲ್ಲಿ ಸೈದ್ ಅವರನ್ನೂ ಅವರ ಇತಿಹಾಸದ ಬರವಣಿಗೆಯನ್ನೂ ಹೊಸ ಜಾಗತಿಕ ದೃಷ್ಟಿಕೋನವೊಂದನ್ನೂ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ.



**ನಡುಹಗಲಿನಲ್ಲಿ ಕಂದೀಲುಗಳು** (ಲೇಖನಗಳು)
ರಾಜೇಂದ್ರ ಚೆನ್ನಿ
**ಪುಟ : ೨೭೬** **ಬೆಲೆ : ರೂ. ೧೨೫**
**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ನವೋದಯ-ನವ್ಯ ಕಾಲದಲ್ಲಿ ಬಂದಿರುವ ಸಾಹಿತ್ಯ ಕೃತಿಗಳನ್ನು ಇಲ್ಲಿನ ತಮ್ಮ ವಿಮರ್ಶಾ ಲೇಖನಗಳ ವಸ್ತುವನ್ನಾಗಿ ರಾಜೇಂದ್ರ ಚೆನ್ನಿಯವರು ಆಯ್ಕೆ ಮಾಡಿಕೊಂಡಿದ್ದಾರೆ. ವಿಮರ್ಶೆಯೆಂದರೆ ಟೀಕೆಯಲ್ಲದ ಒಂದು ಸಾಂಸ್ಕೃತಿಕ ಮುನ್ನೋಟದ ಜೊತೆಗೆ ಪ್ರಪಂಚದ ಬದುಕು ಮತ್ತು ಅದರೊಂದಿಗಿನ ಸಂಬಂಧಗಳನ್ನು ಕೃತಿಯ ಪಾತ್ರಗಳ ಆಧಾರದ ಮೂಲಕ ಚರ್ಚೆಗೊಳಪಡಿಸುತ್ತ ಓದುಗನಿಗೊಂದು ಒಳಹರಿವನ್ನು ಒದಗಿಸುವ ಪ್ರಯತ್ನ ಮಾಡಿದ್ದಾರೆ. ಸಾಹಿತ್ಯ ರಚನೆಯ ಕಾಲಕ್ಕೆ ಯಾವ ತಾತ್ವಿಕ ಆಧಾರದಿಂದ ಬದುಕು ಕೃತಿಕಾರನನ್ನು ಬಂಧಿಸಲ್ಪಟ್ಟಿತ್ತು ಮತ್ತು ಪರಂಪರೆಯನ್ನು ಮೀರುವ ಇಲ್ಲವೇ ಮೀರದಂಥ ಇಕ್ಕಟ್ಟು ಎಲ್ಲೆಲ್ಲಿ ಪ್ರಾಪ್ತವಾಗಿತ್ತು ಎಂಬುದರ ವಿಶ್ಲೇಷಣೆಯಿದೆ. ಇಲ್ಲಿ ಕಾರಂತ-ಕುವೆಂಪು-ತೇಜಸ್ವಿಯವರಂತೆ ನೋಮ್ ಚೋಮ್‌ಸ್ಕಿ – ಶೇಕ್ಸ್‌ಪಿಯರ್ ಕೂಡ ಅಷ್ಟೇ ಮುಖ್ಯರಾಗುತ್ತಾರೆ.





**ನಾವು ಮತ್ತು ನಮ್ಮ ಪರಿಸರ**
ಸಂ. ಡಾ|| ಸಬಿಹಾ ಭೂಮಿಗೌಡ
**ಪುಟ : ೧೮೪** **ಬೆಲೆ : ರೂ. ೫೦**
**ಡಾ|| ಕೆ. ಶಿವರಾಮ ಕಾರಂತ ಪೀಠ,** ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ - ೫೭೪ ೧೯೯

ತಾನು ನಾಗರಿಕ ಬುದ್ಧಿವಂತನೆಂದು ಬೀಗುತ್ತಿರುವ ಇಂದಿನ ಮಾನವ ತಾನು ವಾಸಿಸುವ ಭೂಮಿ ಮತ್ತು ಪರಿಸರವನ್ನು ತನ್ನೊಬ್ಬನ ಸ್ವಾರ್ಥಕ್ಕೋಸ್ಕರ ಹೇಗೆ ಕಲುಷಿತಗೊಳಿಸಿದ್ದಾನೆಂದು ವಿವರಣೆ ನೀಡುತ್ತಲೇ ಪರಿಸರ ಜಾಗೃತಿಯನ್ನು ಮೂಡಿಸುವ ಲೇಖನಗಳು. ಪರಸ್ಪರ ಬದುಕಿಗಾಗಿ ಎಲ್ಲ ಜೀವಿಗಳೂ ಒಂದನ್ನೊಂದು ಅವಲಂಬಿಸಿರುವ ಹಿನ್ನೆಲೆಯಲ್ಲಿ ಪರಿಸರವಿಲ್ಲದೆ ಮನುಷ್ಯನೂ ಇಲ್ಲವೆಂಬ ಸತ್ಯವನ್ನು ತಿಳಿದೂ ತಿಳಿಯದಂತಹ ಹೊಣೆಗೇಡಿಯಾಗಿ ವರ್ತಿಸುತ್ತಿದ್ದಾನೆ. ನಿಸರ್ಗದತ್ತ ಸಂಪತ್ತನ್ನು ಮಿತಿಯಲ್ಲಿ ಬಳಸದೆ ಮೇರೆ ಮೀರಿ ಅನುಭವಿಸುತ್ತ ಹಸನಾಗಿಸಬಹುದಾದ ಬಾಳ್ವೆಯನ್ನು ಕೈಯಾರೆ ಕೆಡಿಸಿಕೊಂಡಿದ್ದಾನೆ. ನೆಲ-ಜಲ-ವಾಯುಗಳಂಥ ಪ್ರಾಕೃತಿಕ ಸಂಪತ್ತನ್ನು ಕಲುಷಿತಗೊಳಿಸುವ ಇಲ್ಲಿ ಪ್ರಸ್ತಾಪಿಸಿದ ಮಾನವ ನಿರ್ಮಿತ ಉದ್ಯಮ ಕಾರ್ಖಾನೆಗಳ ಕಾರ್ಯವೈಖರಿ ಕಂಡಾಗ ನಾವು ಮುಂದುವರೆದದ್ದು ನಮ್ಮನ್ನು ರಕ್ಷಿಸಿಕೊಳ್ಳಲಾರದಷ್ಟು ಎಂಬುದು ಅಷ್ಟೇ ಸತ್ಯ !



**ರಸೀದಿ ತಿಕೀಟು** (ಆತ್ಮಕತೆ)
ಅಮೃತಾ ಪ್ರೀತಂ ಅನು : ಹಸನ್ ನಯೀಂ ಸುರಕೋಡ
**ಪುಟ : ೨೨೦** **ಬೆಲೆ : ರೂ. ೧೦೦**
**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಕೋಮುಗಲಭೆಗಳ ಕಾಲದಲ್ಲಿ ಲೇಖನಿಯನ್ನು ಕೈಗೆತ್ತಿಕೊಂಡು ತನ್ನ ಸುತ್ತಲೂ ಮಾನವೀಯ ಕಕ್ಷೆ ನಿರ್ಮಿಸಿ ಕ್ರೌರ್ಯ ಹಿಂಸೆಯ ವಿರುದ್ಧ ದನಿಯೆತ್ತಿ ಕವನಗಳನ್ನು ಬರೆದು ಶಾಂತಿಗಾಗಿ ಹಂಬಲಿಸಿದ ಅಮೃತಾ ಪ್ರೀತಂ ಲೋಕಪ್ರಿಯ ಹೆಸರು. ಈ ಜ್ಞಾನಪೀಠ ಪುರಸ್ಕೃತ ಕವಯಿತ್ರಿಯ ಸಾಹಿತ್ಯ ದೇಶ-ವಿದೇಶಗಳಲ್ಲಿ ಬಹುಭಾಷೆಗಳಿಗೆ ಅನುವಾದಗೊಂಡಿದೆ. ಸ್ವಂತ ಬದುಕಿಗಿಂತ ಸಾಹಿತ್ಯದ ನಿರ್ಮಾಣಕ್ಕೆ ಹೆಚ್ಚಿನ ವೇಳೆ ವ್ಯಯಿಸಿದ ಅಮೃತಾ ಒಮ್ಮೆ ತಾನು ಆತ್ಮಚರಿತ್ರೆ ಬರೆಯುವೆ ಎಂದು ಕುಶ್‌ವಂತ್ ಸಿಂಗ್‌ರೊಡನೆ ಅಂದರಂತೆ! ತಕ್ಷಣ ಸರ್ದಾರ್ಜೀ ''ನಿನ್ನಲ್ಲೇನಿದೆ? ಆತ್ಮಚರಿತ್ರೆಗಾಗುವಷ್ಟು? ಚಿಕ್ಕ ರಸೀದಿ ತಿಕೀಟು ಹಿಂಭಾಗ ಬರೆದರೂ ಮುಗಿಯುತ್ತೆ'' ಎಂದರಂತೆ! ಹೌದು; ಸಾಹಿತ್ಯ ಲೋಕಕ್ಕೆ ಪೂರ್ಣ ಅರ್ಪಿಸಿಕೊಂಡವರ ಖಾಸಗಿ ಬದುಕು ಚಿಕ್ಕದು. ಸ್ವಲ್ಪ ಉದ್ದ - ಅಗಲ -ವಿಸ್ತಾರ ಇರುವ ಈ ರಸೀದಿ ತಿಕೀಟು ಅಮೃತಾ ಆತ್ಮಚರಿತ್ರೆಯನ್ನು ತುಂಬಿಕೊಂಡಿದೆ.



**ಮಂಜು ಕವಿದ ಸಂಜೆ ಮತ್ತು ಇತರ ಕಥೆಗಳು**
ಪಿ. ಲಂಕೇಶ್
**ಪುಟ : ೮೪** **ಬೆಲೆ : ರೂ. ೮೫**
**ಪತ್ರಿಕೆ ಪ್ರಕಾಶನ,** ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು - ೪

ಕಥೆಗಾರ ಕಥಾ ಪಾತ್ರಗಳನ್ನು ಕೇವಲ ಮನರಂಜನೆಗಾಗಿ ಮಾತ್ರ ಸೃಷ್ಟಿಸದೆ ಕಥೆಯೊಳಗಿನ ಮನುಷ್ಯನ ಸೂಕ್ಷ್ಮ ಸಂವೇದನೆಯನ್ನು ನಿಚ್ಚಳವಾಗಿ ಬಿಂಬಿಸುತ್ತಿರಬೇಕೆಂಬುದು ಲಂಕೇಶ್ ಅನಿಸಿಕೆ. ಕಲ್ಪನಾಲೋಕದ ತಾತ್ಕಾಲಿಕ ಭ್ರಮೆಗೊಳಿಸುವ ಯಾವ ಅಂಶಗಳನ್ನೂ ತಮ್ಮ ಕಥೆಗಳಲ್ಲಿ ಬಳಸದೆ ಬದುಕಿನಲ್ಲಿ ಸಹಜವಾಗಿ ಬರಬಹುದಾದ ಎಲ್ಲವನ್ನೂ ಯಾವುದೇ ಎಗ್ಗಿಲ್ಲದೆ ತೆರೆದಿಟ್ಟು ಖಡಾಖಂಡಿತವಾದಿಯಾಗಿ ತಮ್ಮಲ್ಲೊಬ್ಬ ಕಥೆಗಾರನನ್ನು ಅವರು ಕೊನೆಯವರೆಗೂ ಉಳಿಸಿಕೊಂಡಿದ್ದರು. ಜಾತಿವಾದಿಗಳಿಗೆ ಭಂಡರಿಗೆ ದುಃಸ್ವಪ್ನದಂತಿದ್ದ ಪತ್ರಕರ್ತ ಲಂಕೇಶ್ ಈ ಕಥೆಗಳನ್ನು ತಮ್ಮ ಕೊನೆಯ ಎರಡು ವರ್ಷಗಳಲ್ಲಿ ಬರೆದಿದ್ದು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಸಂಕಲನದಲ್ಲಿ ಹನ್ನೆರಡು ಕಥೆಗಳಿದ್ದು ಪಾಶ್ಚಾತ್ಯ ಕಥಾಪಾತ್ರಗಳ ಪ್ರಭಾವ ಸ್ವಲ್ಪಮಟ್ಟಿಗೆ ಇಲ್ಲಿಯೂ ಇಣುಕಿಹಾಕಿದ್ದು ಗೋಚರಿಸುತ್ತದೆ.

– ಇಂದಿರಾಕುಮಾರಿ



# ವೈದ್ಯಾಧಿಕಾರಿಯ ಬದುಕು - ಬವಣೆ

– ಒಂದು ಅವಲೋಕನ

**ಡಾ||** ಎಚ್. ಡಿ. ಚಂದ್ರಪ್ಪಗೌಡರು ವೈದ್ಯಕೀಯ ಸಾಹಿತ್ಯ ರಚನೆಯಿಂದ ಕರ್ನಾಟಕದ ತುಂಬೆಲ್ಲ ಗೌರವ ಸಂಪಾದಿಸಿರುವ ವ್ಯಕ್ತಿ. ಸರಕಾರಿ ವೈದ್ಯ ವೃತ್ತಿಯೊಂದಿಗೆ, ವೈದ್ಯ ಸಾಹಿತ್ಯ ರಚನೆಯನ್ನು ಸಮರ್ಥವಾಗಿ ಮಾಡಿ ಹಲವಾರು ಅತ್ಯುತ್ತಮ ಕೃತಿಗಳನ್ನು ಹೊರತಂದಿದ್ದಾರೆ. ಪ್ರಕಟವಾದ ಪ್ರತಿ ಕೃತಿಗೆ ಬಹುಮಾನ - ಪ್ರಶಸ್ತಿ ಪಡೆದಿದ್ದಾರೆ.

ಈಗ ಅಂದರೆ ೨೦೦೨ರಲ್ಲಿ ಹೊರಬಂದಿರುವ ಅವರ 'ವೈದ್ಯಾಧಿಕಾರಿಯ ಬದುಕು - ಬವಣೆ' ಹಲವಾರು ಕಾರಣಗಳಿಂದ ಗಮನಾರ್ಹವಾಗಿದೆ. ೨೦೦೨ರಲ್ಲಿ ಪ್ರಕಟವಾದ ಈ ಕೃತಿಯನ್ನು 'ಈಗ' ಎನ್ನಬೇಕಾದ ಅನಿವಾರ್ಯತೆ ಇದೆ. ಕಾರಣ ಸುಸ್ಪಷ್ಟ! ಕನ್ನಡ ಪುಸ್ತಕಗಳನ್ನು ಓದುವವರು ಕಡಿಮೆಯಾಗುತ್ತಿದ್ದಾರೆ. ಪ್ರಸಿದ್ಧರಾದ ಕೆಲವರ ಕಾದಂಬರಿ, ಕವನಸಂಕಲನಗಳಷ್ಟೇ ವಿಮರ್ಶಕರ ಕಣ್ಣಿಗೆ ಬೀಳುತ್ತವೆ. ವೈದ್ಯ ಸಾಹಿತ್ಯ ಪತ್ರಿಕೆಗಳಲ್ಲಿ ಹೆಚ್ಚಿನ ಜನಪ್ರಿಯತೆ ಗಳಿಸಿದ್ದರೂ, ವೈದ್ಯರೊಬ್ಬರ ಆತ್ಮಕತೆಯಾಗಲಿ, ಅವರ ವೃತ್ತಿಯ ಅನುಭವ ಕಥನವಾಗಲಿ ಜನರ ಕಣ್ಣಿಗೆ ಬೀಳುವುದು ಅಪರೂಪ. ಹಾಗಾಗಿಯೇ ಡಾ|| ಎಚ್. ಡಿ. ಚಂದ್ರಪ್ಪಗೌಡರ ಈ ಮಹತ್ವದ ಕೃತಿ ಅಷ್ಟಾಗಿ ಜನರ ಕಣ್ಣಿಗೆ ಬಿದ್ದಿಲ್ಲ.

೩೫೦ ಪುಟಗಳ ಈ ಸ್ವಾನುಭವದ ಕೃತಿಯನ್ನು ಅಕಸ್ಮಾತ್ತಾಗಿ ಯಾರಾದರೂ ಕೈಗೆತ್ತಿಕೊಂಡು ಓದಲು ಪ್ರಾರಂಭಿಸಿದರೆ ಅದು ಖಂಡಿತವಾಗಿ ಕಾದಂಬರಿಯಂತೆಯೇ ಮನಸ್ಸನ್ನು ಹಿಡಿದಿಡುತ್ತದೆ. ಸಾಮಾನ್ಯ ಕೃಷಿ ಮನೆತನದ ಹಳ್ಳಿಯ ಬಾಲಕ, ಒಬ್ಬ ನಿಪುಣ ವೈದ್ಯನಾಗಿ ಸಾರ್ಥಕ ಬಾಳುವೆ ಮಾಡಿರುವ ಹೃದಯಂಗಮ ಚಿತ್ರಣ ಇಲ್ಲಿದೆ.

ಮನೋವೈದ್ಯಕೀಯ ಕ್ಷೇತ್ರದಲ್ಲಿ ದೊಡ್ಡ ಹೆಸರಾದ ಡಾ|| ಸಿ. ಆರ್. ಚಂದ್ರಶೇಖರ್ ಅವರು ಮುನ್ನುಡಿಯಲ್ಲಿ ಬರೆದಿರುವಂತೆ ವೈದ್ಯರ ಬಗ್ಗೆ, ಅವರ ಕುಟುಂಬದ ಬಗ್ಗೆ ಜನರಿಗೆ ಇರುವ ಕಲ್ಪನೆ, ನಿರೀಕ್ಷೆ, ನಕಾರಾತ್ಮಕ ಭಾವನೆ, ತಿರಸ್ಕಾರ, ಹೀನಾಯ ಧೋರಣೆಗಳನ್ನೆಲ್ಲಾ ಸರಿಪಡಿಸಿಕೊಳ್ಳಲಾದರೂ ಜನಸಾಮಾನ್ಯರು ಈ ಕೃತಿ ಓದಬೇಕು. ಅದರಂತೆ ವೈದ್ಯ ವೃತ್ತಿ ನಿರತರು ಈ ಕೃತಿ ಓದಿ ಮನಸ್ಥೈರ್ಯ ಗಳಿಸಿಕೊಳ್ಳಲು, ವೈದ್ಯ ವಿದ್ಯಾರ್ಥಿಗಳು ಮಾರ್ಗದರ್ಶನಕ್ಕಾಗಿಯೂ ಇದನ್ನು ಓದಬೇಕು.

ಪುಸ್ತಕದ ಹೆಸರೇ ಸೂಚಿಸುವಂತೆ ಇದೊಂದು ''ವೈದ್ಯಾಧಿಕಾರಿಯ ಬದುಕು - ಬವಣೆ'' ಕುರಿತಾದದ್ದು. ಡಾ|| ಚಂದ್ರಪ್ಪಗೌಡರು ವೈದ್ಯಾಧಿಕಾರಿಯಾಗಿ ತಮ್ಮ ವೃತ್ತಿಯನ್ನು ಕೈಗೊಂಡವರು. ಪ್ರಾಸಂಗಿಕವಾಗಿ ಅವರೊಬ್ಬ ವೈದ್ಯ ವಿದ್ಯಾರ್ಥಿಯಾಗುವ ಹಿನ್ನೆಲೆಯನ್ನು ವಿವರಿಸಿದ್ದಾರೆ.

ಪುಟ : ೩೫೨ ಬೆಲೆ : ರೂ. ೧೫೦
ಮಲೆನಾಡು ಸಾಹಿತ್ಯ ಪ್ರಕಾಶನ, ಶಿವಮೊಗ್ಗ

ವ್ಯಕ್ತಿಯೊಬ್ಬ ಜೀವನದಲ್ಲಿ ಏನನ್ನಾದರೂ ಸಾಧಿಸಿದಾಗ, ತನ್ನ ಆವರೆಗಿನ ಬಾಳನ್ನು ಪ್ರಾಮಾಣಿಕವಾಗಿ ದಾಖಲಿಸಿದಾಗ ಅದು ಅವನ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವಂತೆ, ಸಮಕಾಲೀನ ಬದುಕಿನ ದಾಖಲೆಯೂ ಆಗುತ್ತದೆ. ಆದ್ದರಿಂದಲೇ ಡಾ|| ಚಂದ್ರಪ್ಪಗೌಡರ ಬಾಲ್ಯ ಆ ಕಾಲದ ಶಿವಮೊಗ್ಗ ಜಿಲ್ಲೆಯ ವಾರಾಹಿ ಯೋಜನೆಯಲ್ಲಿ ಮುಳುಗಿಹೋಗಿರುವ ಪುಟ್ಟಹಳ್ಳಿ ಹೊಳೆಗದ್ದೆಯ ಸುತ್ತುಮುತ್ತಲಿನ ವಾತಾವರಣದ ಚಿತ್ರಣವನ್ನೊಳಗೊಂಡಿದೆ.

ಅವಿಭಕ್ತ ಕುಟುಂಬದ ಸುಖ-ದುಃಖಗಳ ಮಧ್ಯೆಯೇ, ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡು, ತಾಯಿಯ ಅತಿಯಾದ ಪ್ರೀತಿ ಮತ್ತು ಮಗನ ವಿದ್ಯಾಭ್ಯಾಸಕ್ಕಾಗಿ ಆಕೆ ಪಡುವ ಕಷ್ಟ ಮನಸ್ಸನ್ನು ತಟ್ಟುತ್ತದೆ. ಕ್ರಿ.ಶ. ೧೯೨೯ರಲ್ಲಿ ಜನಿಸಿದ ಚಂದ್ರಪ್ಪಗೌಡರನ್ನು ವಿದ್ಯಾವಂತರನ್ನಾಗಿ ಮಾಡಲು ಅವರ ತಾಯಿ ಪಡುವ ಶ್ರಮ, ಉಪಾಯಗಳು, ಆ ಕಾಲದ ಹಲವು ಅವಿದ್ಯಾವಂತ ತಾಯಿಯರು ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಕಷ್ಟಪಟ್ಟಿದ್ದರ ಪ್ರಾತಿನಿಧಿಕ ಸಂಕೇತವಾಗಿ ನನಗೆ ತೋರುತ್ತದೆ.

ಬಾಲ್ಯದಲ್ಲಿ ಬಾಲಕ ಚಂದ್ರಶೇಖರನಿಗೆ ಒದಗಿದ ಸಂಕಟಪ್ರಸಂಗಗಳು ಓದುಗರಿಗೆ ರಸಮಯ ಪ್ರಸಂಗವಾಗಿ ಆಕರ್ಷಕವಾಗಿದೆ. ಬಾಲ್ಯದಲ್ಲಿ ಅತ್ಯಂತ ದೈವಭಕ್ತರಾಗಿದ್ದರೂ, ನಂತರದ ದಿನಗಳಲ್ಲಿ ಚಂದ್ರಪ್ಪಗೌಡರು ಅತ್ಯಂತ ವೈಚಾರಿಕ ಮನೋಭಾವದ ನಾಸ್ತಿಕರಾಗಿದ್ದರೂ, ಅವರ ವಿದ್ಯಾಭ್ಯಾಸಕಾಲದ ಹಲವು ತಿರುವುಗಳನ್ನು ಗಮನಿಸಿದಾಗ, ವೈದ್ಯಕೀಯ ಶಿಕ್ಷಣಕ್ಕೆ ಆಯ್ಕೆಯಾದ ಸಂದರ್ಭಗಳನ್ನು ಓದಿದಾಗ ''ವಿಧಿಸಂಕಲ್ಪವೋ'' ಅಥವಾ ಅವರಮ್ಮ ಹಾಲಮ್ಮನ ಪ್ರಬಲ ಇಚ್ಛಾಶಕ್ತಿಯೋ ಕೆಲಸ ಮಾಡಿದ ಅನುಭವವಾಗುತ್ತದೆ.

ಬಾಲ್ಯದ ವಿದ್ಯಾಭ್ಯಾಸ ಕಾಲದಲ್ಲಿ ಅವರಿಗೆ ಒಳ್ಳೆಯ ಗುರುಗಳು ಸಿಕ್ಕಿದ್ದು ಒಂದು ಅದೃಷ್ಟವೆಂದೇ ಹೇಳಬೇಕು. ಅತ್ಯಂತ ಅನಾಸಕ್ತ ಮಗುವೊಂದು ತಾಯಿ, ಚಿಕ್ಕಪ್ಪ ಮತ್ತು ಒಳ್ಳೆಯ ಗುರುಗಳಿಂದ ವಿದ್ಯೆಯ ಬಗ್ಗೆ ಪ್ರೇರಿತವಾಗಿ, ಚೆನ್ನಾಗಿ ಓದಿ, ವೈದ್ಯಕೀಯ ಶಿಕ್ಷಣ ಪಡೆಯುವುದು, ಸರ್ಕಾರೀ ವೈದ್ಯರಾಗಿ ಪ್ರಾಮಾಣಿಕವಾಗಿ ಸೇವೆ ಸಲ್ಲಿಸುವುದು ಅರ್ಥಪೂರ್ಣವಾಗಿದೆ; ಹಲವಾರು ಜನ ತಂದೆ-ತಾಯಿಯರು, ಗುರುಗಳಿಗೆ ದಾರಿದೀಪವೂ ಆಗುವಂತಹ ಘಟನೆಯಾಗಿದೆ.

ವೈದ್ಯಕೀಯ ಶಿಕ್ಷಣದ ರೀತಿ-ನೀತಿಗಳನ್ನು ಸರಳವಾಗಿ ತಿಳಿಸಿರುವ ಈ ಕೃತಿ ಸರ್ಕಾರಿ ಕೆಲಸದ (ಸುಖ)-ದುಃಖಗಳನ್ನು ಚೆನ್ನಾಗಿ ವಿವರಿಸಿದೆ. ಹಣ-ಪ್ರಭಾವ-ವಶೀಲಿ-ರಾಜಕೀಯ ಶಕ್ತಿಯ ಕೈವಾಡಗಳನ್ನು ಸೂಕ್ಷ್ಮವಾಗಿ ತೆರೆದಿಟ್ಟಿದೆ.

ವೈದ್ಯ ಬದುಕನ್ನು ಅತ್ಯಂತ ಹತ್ತಿರದಿಂದ ನೋಡುತ್ತಾನೆ. ಹುಟ್ಟು-ಸಾವುಗಳ ಮಧ್ಯೆಯೇ ದಿನ ಕಳೆಯುತ್ತಾನೆ. ಜೀವವೊಂದನ್ನು ಉಳಿಸಿದಾಗ ಆಗುವ ಧನ್ಯತೆ, ಪ್ರಾಣ ಉಳಿಸಲು ಆಗದ ಅಸಹಾಯಕತೆ ತರುವ ನೋವು ಮನಮುಟ್ಟುವಂತೆ ಚಿತ್ರಿತವಾಗಿದೆ. ಜನಸಾಮಾನ್ಯರು ಈ ಕೃತಿಯನ್ನು ಓದುವುದರಿಂದ ವೈದ್ಯಕೀಯ ಜಗತ್ತಿನ ಬಗ್ಗೆ ಇರುವ ಅಸಹನೆ ಕಡಿಮೆಯಾಗಬಹುದೇನೋ ?

ಡಾ|| ಚಂದ್ರಪ್ಪಗೌಡರನ್ನು ಈ ಎತ್ತರಕ್ಕೆ ತಂದು ನಿಲ್ಲಿಸಿದ ತಾಯಿ ಹಾಲಮ್ಮನ ಕುರಿತು ಮುಕ್ತಕಂಠದಿಂದ, ಕಣ್ಣಲ್ಲಿ ನೀರು ತುಂಬಿಕೊಂಡೇ, ಅವರು ಪ್ರಶಂಸಿಸಿದ್ದಾರೆ. ಜೊತೆಗೆ ತಾಯಿಯ ಕೊನೆಗಾಲದಲ್ಲಿ ಅವಳ ಬಳಿ ಇರಲಾಗದ ಇಕ್ಕಟ್ಟು ಪರಿಸ್ಥಿತಿ (ಸರ್ಕಾರಿ ನೌಕರರಿಗೆ, ಹೆಚ್ಚಾಗಿ ವೈದ್ಯರಿಗೆ ಒದಗಬಹುದಾದದ್ದು!) ಅವರಿಗೆ ನೋವನ್ನುಂಟುಮಾಡಿದೆ.

ಪ್ರಾಮಾಣಿಕ ಸರ್ಕಾರಿ ವೈದ್ಯರು ಎದುರಿಸಬೇಕಾದ ದ್ವಂದ್ವಗಳು, ಅದನ್ನು ಎದುರಿಸಿದ ಬಗೆ ಸ್ವಾರಸ್ಯಕರವಾಗಿದೆ. ಸಹೋದ್ಯೋಗಿಗಳ ವ್ಯಕ್ತಿತ್ವ-ವರ್ತನೆಗಳನ್ನು ವಿಶ್ಲೇಷಿಸುತ್ತಲೇ ತಮ್ಮ ವ್ಯಕ್ತಿತ್ವವನ್ನು ಡಾ|| ಚಂದ್ರಪ್ಪಗೌಡರು ಪ್ರಾಮಾಣಿಕವಾಗಿ ಬಿಚ್ಚಿಟ್ಟಿದ್ದಾರೆ.

ಅತ್ಯಂತ ವೈಚಾರಿಕ ಮನೋಭಾವವನ್ನು ಬೆಳೆಸಿಕೊಂಡಿದ್ದರೂ ತಾಯಿಯ ಮನಸ್ಸಿನ ನೆಮ್ಮದಿಗಾಗಿ ಹರಕೆಗಳನ್ನು ತೀರಿಸಿದ್ದು, ಆಕೆಯ ಸಾವಿನ ನಂತರ ತಾವು ೩ನೇ ದಿನ ತಲೆ ಮುಂಡನ ಮಾಡಿಸಿಕೊಂಡಿದ್ದು, ಆಕೆಯ ಕೊನೆಯಾಸೆಯಂತೆ ಗೋಕರ್ಣದಲ್ಲಿ ಅಸ್ಥಿ ವಿಸರ್ಜನೆ ಮಾಡಿದ್ದನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾರೆ. ಶುಷ್ಕ ವೇದಾಂತಕ್ಕಿಂತ, ಮಾನವೀಯ ಸಂಬಂಧಕ್ಕೆ ಬೆಲೆ ಕೊಡುವ ಮುಗ್ಧ ನಂಬಿಕೆಗಳೇ ಮನಸ್ಸನ್ನು ತಟ್ಟುತ್ತವೆ.

ಪುಸ್ತಕದ ಕೊನೆಯವರೆಗೆ ಅವರ ಪತ್ನಿಯ ಬಗ್ಗೆ ಉಲ್ಲೇಖ ಅಷ್ಟಿಲ್ಲವೆಂದು ಓದುಗರಿಗೆ ಅನಿಸಬಹುದು. ಆದರ್ಶ ಪುರುಷರು ಹೆಂಡತಿ - ಮಕ್ಕಳು - ಸ್ವಂತದ ಬಗ್ಗೆ ಅದಷ್ಟು ಕಡಿಮೆ ಮಾತನಾಡುತ್ತಾರೆ, ಬರೆಯುತ್ತಾರೆ. ಆದರೂ ಉಪಸಂಹಾರವೆಂಬ ಕೊನೇಭಾಗದಲ್ಲಿ ''ಸಹಧರ್ಮಿಣಿಯ ಸಹಕಾರ'' ಎಂಬ ಭಾಗ ಸೇರಿಸಿ ದಿವಂಗತ ರುಕ್ಮಿಣಿಯವರಿಗೆ ಗೌರವ ತೋರಿದ್ದಾರೆ. ವೈದ್ಯರನ್ನು ಮದುವೆಯಾಗುವ ಸಹೋದರಿಯರಿಗೆ ರುಕ್ಮಿಣಿಯವರ ಜೀವನ ಒಂದು ಮಾದರಿ ಎನ್ನಬಹುದಾಗಿದೆ.

ತಾಯಿ ಹಾಲಮ್ಮನ ಸಂಕಲ್ಪದಂತೆ ವೈದ್ಯರಾಗಿ, ಮಡದಿ ರಾಜಮ್ಮ (ರುಕ್ಮಿಣಿ)ನವರ ಸಹಕಾರದಿಂದ ಪ್ರಾಮಾಣಿಕವಾಗಿ ತಮ್ಮ ವೃತ್ತಿಧರ್ಮಕ್ಕೆ ಗೌರವ ತಂದುಕೊಟ್ಟ ಡಾ|| ಚಂದ್ರಪ್ಪಗೌಡರ ಬದುಕಿನ ಚಿತ್ರಣ ಮನನಯೋಗ್ಯವಾಗಿದೆ.

ಕೊನೆಯ ಭಾಗಗಳಲ್ಲಿ ತಮ್ಮ ಸಾಹಿತ್ಯ-ಸಮಾಜ ಸೇವೆಗಳ ವಿವರ ನೀಡಿರುವುದು, ಪುಸ್ತಕಗಳ ಪರಿಚಯ, ಪ್ರಕಟಣೆಗಳ ಕಷ್ಟ ವಿವರಿಸಿರುವುದು ಪುಸ್ತಕಕ್ಕೆ ಪೂರ್ಣತೆಯನ್ನು ತಂದುಕೊಟ್ಟಿದೆ.

'ವೈದ್ಯಾಧಿಕಾರಿಯ ಬದುಕು - ಬವಣೆ' ಓದಿ ಮುಗಿಸಿದಾಗ ಇದು, ಪ್ರಾಮಾಣಿಕವಾಗಿ ಬದುಕಲು ಪ್ರಯತ್ನಪಟ್ಟು, ಅದರಲ್ಲಿ ಬಹುಮಟ್ಟಿಗೆ ಸಫಲವಾದ ವೈದ್ಯಾಧಿಕಾರಿಯೊಬ್ಬರ ಸಾರ್ಥಕ ಪ್ರಯತ್ನದ ಕಥೆ, ಸತ್ಯಕಥೆ, ಆತ್ಮಕಥೆ ಎಂಬ ತೃಪ್ತಿ ಉಂಟಾಗುತ್ತದೆ.

ವಿಜಯಾ ಶ್ರೀಧರ್
w/o ಡಾ|| ಕೆ.ಆರ್. ಶ್ರೀಧರ್, ೧ನೇ ಮುಖ್ಯರಸ್ತೆ, ರಾಜೇಂದ್ರ ನಗರ. ಶಿವಮೊಗ್ಗ - ೫೭೭೨೦೪

# ಬ್ಯಾರಿ ಮುಸ್ಲಿಮರು

## ಒಂದು ಪರಿಚಯ

ಬ್ಯಾರಿ ಎಂಬ ಪದ ಯಾವಾಗ, ಎಲ್ಲಿ ಹೇಗೆ ಉತ್ಪತ್ತಿಯಾಯಿತು ಎಂಬ ಪ್ರಶ್ನೆ ಇದೀಗ ಬಹುತೇಕ ಬ್ಯಾರಿಗಳಿಗೆ ಸಹಜವಾಗಿ ಕಾಡುತ್ತಿದೆ. ಬಹರಿ ಅಥವಾ ಬೆಹಾರಿ (ಸಮುದ್ರ ಯಾನಿ) ಎಂಬ ಪದದಿಂದ 'ಬ್ಯಾರಿ' ಎಂಬ ಶಬ್ದ ಬಳಕೆಗೆ ಬಂತೆಂಬ ಅಭಿಪ್ರಾಯವಿದೆ. ಆದರೆ ದೇಶದ ಕನ್ಯಾಕುಮಾರಿಯಿಂದ ಉತ್ತರ ಗುಜರಾತಿನವರೆಗೂ ಸಮುದ್ರ ಕಿನಾರೆಯಲ್ಲಿ ಮುಸ್ಲಿಮರು ನೆಲೆಸುತ್ತಿದ್ದು, ಅವರು ಮೂಲತಃ ಸಮುದ್ರಯಾನಿಗಳೆಂದು ಅಂದರೆ ಅರಬರೆಂದು ಒಪ್ಪಿಕೊಂಡ ಮೇಲೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಸೀಮಿತ ಕರಾವಳಿ ಪ್ರದೇಶದ ಮುಸ್ಲಿಮರಿಗೆ 'ಬ್ಯಾರಿ' ಎಂಬ ಹೆಸರು ಹೇಗೆ ಮತ್ತು ಯಾಕೆ ಬಂತು ಎಂಬ ಪ್ರಶ್ನೆ ಉದ್ಭವಿಸುವುದು ಸಹಜ.

**ತು**ಳುನಾಡು ಹಲವು ಭಾಷೆ, ಜನಾಂಗ, ಕಲೆ ಸಂಸ್ಕೃತಿಗೆ ಜನ್ಮವಿತ್ತ ನಾಡು. ಈ ನಾಡಿನ ಮಣ್ಣಲ್ಲಿ ಜನ್ಮತಾಳಿದ ಪ್ರತಿಯೊಂದು ಜನಾಂಗವೂ ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಇಲ್ಲಿನ ಜಾತಿ, ಉಪಜಾತಿ, ಜನಾಂಗ, ಭಾಷೆ ಬೇರೆಲ್ಲೂ ಕೂಡಾ ಕಾಣಸಿಗದು. ೧೯೫೬ರಲ್ಲಿ ಕರ್ನಾಟಕ ವಿಭಜನೆಗೊಳ್ಳುವವರೆಗೂ ಕಾಸರಗೋಡು ಜಿಲ್ಲೆ ತುಳುನಾಡಿಗೆ ಸೇರಿತ್ತು. ಹಾಗಾಗಿ ಅಲ್ಲೂ ಕೂಡಾ ಜಿಲ್ಲೆಯಲ್ಲಿರುವಂತೆ ಸಾಂಸ್ಕೃತಿಕ ವೈವಿಧ್ಯತೆಯನ್ನು ಕಾಣಬಹುದು. ವಿದ್ವಾಂಸರು ಈ ತುಳುನಾಡನ್ನು ಮೃದುವಾದ ನಾಡು ಎಂದು ಬಣ್ಣಿಸಿದ್ದಾರೆ.

ಇಂಥ ವಿಶಿಷ್ಟತೆ ಪಡೆದ ತುಳುನಾಡಿನ ಮೂಲವುಳ್ಳ, ಜನ್ಮತಾಳಿದ ಜನಾಂಗಗಳಲ್ಲಿ 'ಬ್ಯಾರಿ' ಜನಾಂಗವೂ ಒಂದು. ಅಂದಾಜು ೧೨೦೦ ವರ್ಷಗಳ ಇತಿಹಾಸವಿರುವ ಬ್ಯಾರಿ ಜನಾಂಗ ಭಾಷೆ, ಧಾರ್ಮಿಕ ಹಾಗೂ ಸಾಂಸ್ಕೃತಿಕ ರಂಗದಲ್ಲಿ ತನ್ನದೇ ಆದ ಛಾಪು ಬೆಳೆಸಿಕೊಂಡಿದೆ. ಒಂದು ಕಾಲಕ್ಕೆ ಅತ್ಯಂತ ವೈಭವಯುತವಾಗಿ ಮೆರೆದ ಬ್ಯಾರಿ ಜನಾಂಗ ನಂತರ ಕಾಲನ ಹೊಡೆತಕ್ಕೆ ಬಲಿಯಾಗಿ ಕ್ಷೀಣಿಸಿದರೂ ಇತ್ತೀಚೆಗೆ ಮತ್ತೆ ತನ್ನ ಭಾಷೆ, ಸಂಸ್ಕೃತಿ ಸಹಿತ ವಿವಿಧ ರಂಗಗಳಲ್ಲಿ ಅಭಿವೃದ್ಧಿ ಪಥದತ್ತ ಸಾಗುತ್ತಿದೆ.

ಬ್ಯಾರಿ ಎಂಬ ಪದ ಯಾವಾಗ, ಎಲ್ಲಿ ಹೇಗೆ ಉತ್ಪತ್ತಿಯಾಯಿತು ಎಂಬ ಪ್ರಶ್ನೆ ಇದೀಗ ಬಹುತೇಕ ಬ್ಯಾರಿಗಳಿಗೆ ಸಹಜವಾಗಿ ಕಾಡುತ್ತಿದೆ. ಬಹರಿ ಅಥವಾ ಬೆಹಾರಿ (ಸಮುದ್ರಯಾನಿ) ಎಂಬ ಪದದಿಂದ 'ಬ್ಯಾರಿ' ಎಂಬ ಶಬ್ದ ಬಳಕೆಗೆ ಬಂತೆಂಬ ಅಭಿಪ್ರಾಯವಿದೆ. ಆದರೆ ದೇಶದ ಕನ್ಯಾಕುಮಾರಿಯಿಂದ ಉತ್ತರ ಗುಜರಾತಿನವರೆಗೂ ಸಮುದ್ರ ಕಿನಾರೆಯಲ್ಲಿ ಮುಸ್ಲಿಮರು ನೆಲೆಸುತ್ತಿದ್ದು, ಅವರು ಮೂಲತಃ ಸಮುದ್ರಯಾನಿಗಳೆಂದು ಅಂದರೆ ಅರಬರೆಂದು ಒಪ್ಪಿಕೊಂಡ ಮೇಲೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಸೀಮಿತ ಕರಾವಳಿ ಪ್ರದೇಶದ ಮುಸ್ಲಿಮರಿಗೆ 'ಬ್ಯಾರಿ' ಎಂಬ ಹೆಸರು ಹೇಗೆ ಮತ್ತು ಯಾಕೆ ಬಂತು ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಕೇರಳದ ಮಲಪ್ಪುರಂ ಜಿಲ್ಲೆಯ ಉತ್ತರಕ್ಕೆ 'ಮಲಬಾರ್' ಎಂಬ ಹೆಸರಿದೆ. ಮಲಪ್ಪುರಂ, ಕಣ್ಣೂರು, ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡ ಈ ಪ್ರದೇಶವನ್ನು ಜಿಲ್ಲಾವಾರು ವಿಂಗಡಣೆಗೆ ಮುನ್ನ ಮಲಬಾರಿ ಪ್ರದೇಶ ಎಂದೇ ಗುರುತಿಸಲಾಗಿತ್ತು. ಅರಬರೂ ಕೂಡಾ ಈ ಪ್ರದೇಶವನ್ನು ಮಲಬಾರಿ ಎಂದೇ ಕರೆಯುತ್ತಿದ್ದರು. ಆದ್ದರಿಂದ ಈ ಪ್ರದೇಶಕ್ಕೆ ಹತ್ತಿರವಾಗಿರುವ ದ.ಕ.ಜಿಲ್ಲೆಗೆ ಮಲಬಾರಿನ ಮುಸಲ್ಮಾನರು ವಲಸೆಬಂದು ನೆಲೆಸಿರುವ ಸಾಧ್ಯತೆ ಇದೆ. ಹಾಗೆ ಬಂದ ಮಲಬಾರಿ ಮುಸಲ್ಮಾನರನ್ನು 'ಬ್ಯಾರಿಗಳು' ಎಂದು ತುಳುವರು ಸಂಭೋದಿಸಿರಬಹುದೆಂದು ಲೇಖಕ ಸಾಲೆತ್ತೂರು ಅಬೂಬಕರ್ ಫೈಝಿ ಅಭಿಪ್ರಾಯಪಡುತ್ತಾರೆ. ಆದರೆ ಬ್ಯಾರಿ ಎಂಬ ಪದ ಬಳಕೆಯು ಕೇವಲ ತುಳುನಾಡಿನಲ್ಲಿ ಮಾತ್ರ ಇರುವುದು ಕಂಡುಬಂದ ಕಾರಣ ಮತ್ತು 'ಬ್ಯಾರ'ವನ್ನೇ ನೆಚ್ಚಿಕೊಂಡ ಜನರನ್ನು ತುಳುವರು 'ಬ್ಯಾರಿ'ಗಳು ಎಂದು ಕರೆದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಬ್ಯಾರಿ ಭಾಷೆ ಮೂಲತಃ ಮಾಪಿಳ್ಳೆ ಮೂಲದ್ದಲ್ಲ, ಅದು ತುಳು ಮೂಲದ್ದೇ. ಮತ್ತು ಬ್ಯಾರಿಗಳು ತುಳುನಾಡಿನವರೇ ಆಗಿದ್ದಾರೆ ಎಂದು ಲೇಖಕ ಪೇರೂರು ಜಾರು ಅಭಿಪ್ರಾಯಪಡುತ್ತಾರೆ.

ಒಟ್ಟಾರೆ ಬ್ಯಾರಿ ಎಂಬ ಪದವು ತುಳು ಭಾಷೆಯದ್ದಾಗಿದ್ದು, ವ್ಯಾಪಾರಕ್ಕೆ ತುಳುವಿನಲ್ಲಿ ಬ್ಯಾರ ಮತ್ತು ವ್ಯಾಪಾರಸ್ಥನಿಗೆ ಬ್ಯಾರಿ ಎನ್ನಲಾಗುತ್ತಿದ್ದು, ವ್ಯಾಪಾರದಲ್ಲಿ ತೊಡಗಿಸಿಕೊಂಡ ಮುಸಲ್ಮಾನರಿಗೆ ತುಳುವರು ಕೊಟ್ಟ ಬಿರುದು 'ಬ್ಯಾರಿ' ಎಂಬುದಾಗಿದೆ. ಹಾಗಾಗಿಯೇ ಶತಮಾನದ ಹಿಂದಿನ ಮುಸಲ್ಮಾನರ ಹೆಸರಿನ ಮುಂದೆ ಬ್ಯಾರಿ ಮತ್ತು ಬ್ಯಾರ್ದಿ ಎಂಬ ಪದ ಬಳಕೆಯಾಗಿರುವುದು ಮತ್ತು ಸರ್ಕಾರಿ ದಾಖಲೆಪತ್ರಗಳಲ್ಲೂ ಕೂಡಾ ಹೆಸರಿನ ಮುಂದೆ ಬ್ಯಾರಿ ಎಂದು ಸೇರಿಸಲ್ಪಟ್ಟಿರುವುದು ಕಂಡುಬರುತ್ತದೆ.

ಇಸ್ಲಾಮಿನ ನಾಲ್ಕು ಖಲೀಫರ ಕಾಲದಲ್ಲೇ ತುಳುನಾಡಿಗೆ ಮುಸ್ಲಿಮರು ಆಗಮಿಸಿದ್ದರು ಎಂದು ಚರಿತ್ರೆಕಾರರು ಅಭಿಪ್ರಾಯಪಡುತ್ತಾರೆ. ಅರೇಬಿಯಾವು ಭಾರತದ ಪಶ್ಚಿಮ ಕರಾವಳಿಯೊಂದಿಗೆ ೩ ಸಾವಿರ ವರ್ಷಗಳಿಗೂ ಹಿಂದೆಯೇ ಸಾಗರ ಸಂಪರ್ಕ ಹೊಂದಿತ್ತು ಎಂದು ಇತಿಹಾಸಜ್ಞ ಕೆ. ಎಂ. ಪಣಿಕ್ಕರ್ ತಿಳಿಸುತ್ತಾರೆ.

ವ್ಯಾಪಾರ ನಿಮಿತ್ತ ತುಳುನಾಡಿಗೆ ಕಾಲಿಟ್ಟ ಅರಬರು ಇಲ್ಲಿಯ ಹಿಂದೂ ಸ್ತ್ರೀಯರನ್ನು ಮದುವೆಯಾಗಿದ್ದರು ಎಂಬುದಕ್ಕೆ ತುಳು ಮಾಪಿಳ್ಳೆಗಳು ಅರಬ್ಬೀ ತಂದೆಗೆ ಮತ್ತು ತುಳು ತಾಯಿಗೆ ಹುಟ್ಟಿದ ಮಕ್ಕಳು ಎಂಬ ಇತಿಹಾಸಜ್ಞ ಬಿ. ಎ. ಸಾಲೆತ್ತೂರು ಅವರ ಅಭಿಪ್ರಾಯ ಹೆಚ್ಚು ಪುಷ್ಟಿ ನೀಡುತ್ತದೆ. ತುಳು ಸ್ತ್ರೀಗೆ ಹುಟ್ಟಿದ ಮಕ್ಕಳು (ಬ್ಯಾರಿಗಳು) ತನ್ನ ತಂದೆಯ (ಅರಬ್ಬೀ) ಸಂಪರ್ಕವಿರುವವರೆಗೂ ಇಸ್ಲಾಮೀ ಸಂಸ್ಕೃತಿಗೆ ಮಾರು ಹೋಗುತ್ತಿದ್ದರು. ಕೇವಲ ವ್ಯಾಪಾರಕ್ಕೆ ಆಗಮಿಸುತ್ತಿದ್ದ ಅರಬ್ಬೀಗಳು ತಮ್ಮ ವ್ಯಾಪಾರ ವಹಿವಾಟು ಮುಗಿಸಿದ ಕೂಡಲೇ ಹೆಂಡತಿ ಮಕ್ಕಳನ್ನು ಇಲ್ಲೇ ಬಿಟ್ಟು ತಾಯ್ನಾಡಿಗೆ ತೆರಳುತ್ತಿದ್ದರು. ಹಾಗೇ ಹೋಗುವಾಗ ತಮ್ಮ ಮಕ್ಕಳಿಗೆ ವ್ಯಾಪಾರದ ಬಗ್ಗೆ ಹೆಚ್ಚಿನ ತಿಳುವಳಿಕೆ ಮೂಡಿಸುತ್ತಿದ್ದರು ಎಂಬುದಕ್ಕೆ ಬ್ಯಾರಿಗಳ ಚಾಕಚಕ್ಯತೆಯೇ ಸಾಕ್ಷಿಯಾಗಿದೆ. ಮುಂದೆ ತಾಯಿಯ ಆರೈಕೆಯಲ್ಲಿ ಬೆಳೆದ ಮಕ್ಕಳು ವ್ಯಾಪಾರ ಮತ್ತು ಇಸ್ಲಾಮೀ ಸಂಸ್ಕೃತಿಗೆ ಮಾರುಹೋದರೂ ಕೂಡಾ ತುಳು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದರು ಎಂಬುದಕ್ಕೆ ಬ್ಯಾರಿ ಸಂಸ್ಕೃತಿಯನ್ನು ಅವಲೋಕಿಸಿದಾಗ ಕಾಣಲು ಸಿಗುತ್ತದೆ.

ಇದೀಗ, ಬ್ಯಾರಿಗಳು ಮುಸ್ಲಿಮರೇ ? ಮುಸ್ಲಿಮೇತರರು ಬ್ಯಾರಿಗಳಲ್ಲವೇ ? ಬ್ಯಾರಿ ಎಂದು ಕರೆಸಿಕೊಳ್ಳಲು ಇರುವ ಮಾನದಂಡವಾದರೂ ಏನು ? ಎಂಬ ಜಿಜ್ಞಾಸೆ ಆರಂಭವಾಗಿದೆ. ಭಾರತದ ಬಹುತೇಕ ಕಡೆ ಅದರಲ್ಲೂ ಪೂರ್ವ, ದಕ್ಷಿಣ ಕರಾವಳಿಯಲ್ಲೂ ಅರಬರ ಸಂಪರ್ಕ ಇತ್ತು. ಹಾಗಾಗಿ ಕೇವಲ ಪಶ್ಚಿಮ ಕರಾವಳಿಯ ಅದೂ ದಕ್ಷಿಣ ಕನ್ನಡ ಜಿಲ್ಲೆಯ ಮುಸಲ್ಮಾನರು ಮಾತ್ರ ಹೇಗೆ ಬ್ಯಾರಿಗಳಾಗುತ್ತಾರೆ ? ಹನಫಿ ಮದ್‌ಹಬ್‌ನ್ನು ಅಂಗೀಕರಿಸಿದ ದ.ಕ.ಜಿಲ್ಲೆಯ ಮುಸಲ್ಮಾನರನ್ನು ಯಾಕೆ ಬ್ಯಾರಿ ಎಂದು ಗುರುತಿಸಲಾಗುತ್ತಿಲ್ಲ ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಪ್ರಯತ್ನ ಸಾಗಬೇಕಾಗಿದೆ.

ಬ್ಯಾರಿ ಎಂಬ ಪದ ಧರ್ಮಾಧಾರಿತವಾದುದೋ ಅಥವಾ ಭಾಷಾಧಾರಿತವಾದುದೋ ಎಂಬುದೂ ಕೂಡಾ ಇದೀಗ ಚರ್ಚಾ ವಿಷಯವಾಗಿದೆ. ಧರ್ಮಾಧಾರಿತವಾದರೆ, ಜಿಲ್ಲೆಯ ಹನಫಿ

**ಹಂಝ ಮಲಾರ್**

ಮದ್‌ಹಬ್ ಅಂಗೀಕರಿಸಿದ ಮುಸಲ್ಮಾನರನ್ನು-ಯಾಕೆ ಬ್ಯಾರಿ ಎಂದು ಗುರುತಿಸಲಾಗುತ್ತಿಲ್ಲ ಮತ್ತು ಭಾಷಾಧಾರಿತವಾದರೆ, ಬ್ಯಾರಿ ಭಾಷೆಯನ್ನು ಮಾತನಾಡುವವರನ್ನೆಲ್ಲಾ ಬ್ಯಾರಿ ಕಕ್ಷೆಯೊಳಗೆ ಸೇರಿಸಬಹುದೇ ಎಂಬ ಪ್ರಶ್ನೆ ಎದುರಾಗುತ್ತಿದೆ. ಒಟ್ಟಾರೆ ಬ್ಯಾರಿ ಎಂದು ಯಾರನ್ನು ಯಾವ ಆಧಾರದ ಮೇಲೆ ಗುರುತಿಸಿಕೊಳ್ಳಬೇಕು ಎಂಬುದು ಇನ್ನೂ ನಿಗೂಢವಾಗಿದೆ.

ಬ್ಯಾರಿ ಪದ ಧರ್ಮಾಧಾರಿತವಲ್ಲ, ಕಸಬು ಆಧಾರಿತವಾಗಿದೆ. ಹಾಗಾಗಿ ಬ್ಯಾರಿಗಳೆಲ್ಲಾ ಮುಸ್ಲಿಮರಾಗಿರಬೇಕೆಂಬುದಾಗಲೀ ಕರಾವಳಿಯ ಮುಸ್ಲಿಮರೆಲ್ಲಾ ಬ್ಯಾರಿಗಳಾಗಿರಬೇಕೆಂಬುದಾಗಲೀ ಇಲ್ಲ. ತುಳುನಾಡಿನ ಶೇ.೯೫ರಷ್ಟು ಮಂದಿ ಮುಸ್ಲಿಮರು ವ್ಯಾಪಾರವನ್ನೇ ಕಸುಬನ್ನಾಗಿಸಿಕೊಂಡ ಕಾರಣ 'ಬ್ಯಾರಿ' ಪದ ಮುಸ್ಲಿಮರಿಗಾಯಿತು ಎಂದು ಸಂಶೋಧಕ ಪ್ರೊ. ಬಿ. ಎಂ. ಇಚ್ಲಂಗೋಡು ಅಭಿಪ್ರಾಯಪಡುತ್ತಾರೆ.

ಒಟ್ಟಿನಲ್ಲಿ ಜಿಲ್ಲೆಯ ಶಾಫಿ ಮದ್‌ಹಬ್ ಅಂಗೀಕರಿಸಿದ ಬ್ಯಾರಿ ಭಾಷೆಯನ್ನು ಮಾತನಾಡುವ ಮುಸಲ್ಮಾನರನ್ನು ಬ್ಯಾರಿ ಎಂದು ಕರೆಯಲಾಗುತ್ತಿದೆ ಎಂಬುದು ವಾಸ್ತವ ಸತ್ಯ.

'ಮೈಕಾಲ' ಬ್ಯಾರಿಗಳ ರಾಜಧಾನಿ. ಮಂಗಳೂರನ್ನು ಬ್ಯಾರಿಗಳು ಮೈಕಾಲ ಎಂದು ಕರೆಯುತ್ತಾರೆ. ಮಹಾಕಾಳಿ ಎಂಬ ಶಬ್ದದಿಂದ 'ಮೈಕಾಲ' ಎಂಬ ಪದ ಬಳಕೆಗೆ ಬಂತು. ಅಂದರೆ ಮಹಾಕಾಳಿಯ ದೇವಾಲಯದಿಂದಾಗಿ ಮಂಗಳೂರಿಗೆ ಮೈಕಾಲ ಎಂಬ ಹೆಸರು ಬಂತೆಂಬ ಅಭಿಪ್ರಾಯವಿದೆ.



ಮದುವೆಯ ಒಂದು ದೃಶ್ಯ

ಬ್ಯಾರಿ ಭಾಷೆ ಮಲಯಾಳಂನ ಉಪಭಾಷೆ ಎಂಬ ನಂಬಿಕೆ ಹಲವರಲ್ಲಿದೆ. ಆದರೆ ಇದೊಂದು ಸ್ವತಂತ್ರ ಭಾಷೆ ಎಂದು ಆಗಲೇ ಬ್ಯಾರಿ ಭಾಷೆಯ ಬಗ್ಗೆ ಸಂಶೋಧನೆ ನಡೆಸಿರುವ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಬ್ಯಾರಿ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಾಹೋಗಿದೆ. ಜೋಕಟ್ಟೆ, ಕೃಷ್ಣಾಪುರ, ಸುರತ್ಕಲ್ ಸುತ್ತಮುತ್ತಲಿನ ಪ್ರದೇಶದವರ ಭಾಷೆ ಒಂದು ರೀತಿಯಾದರೆ, ಮಂಗಳೂರು, ಉಳ್ಳಾಲದ ಬ್ಯಾರಿಗಳ ಭಾಷೆ ಇನ್ನೊಂದು ರೀತಿಯಾಗಿದೆ. ಅದೇ ರೀತಿ ಮಂಜನಾಡಿ, ಅರ್ಕಾನದ ಬ್ಯಾರಿಗಳ ಭಾಷೆಯಲ್ಲೂ ಬದಲಾವಣೆ ಇದೆ. ಅಲ್ಲದೆ ಕಲ್ಲಡ್ಕ, ಬಂಟ್ವಾಳದ ಬ್ಯಾರಿಗಳು ಆಡುವ ಭಾಷೆಯೂ ವಿಶಿಷ್ಟವಾಗಿದೆ. ಕಲ್ಲಡ್ಕ ಪರಿಸರದಲ್ಲಿ ಬ್ಯಾರಿ ಭಾಷೆಗೆ 'ಮಾಮಾಲಿ' ಎಂದೂ ಕರೆಯುತ್ತಾರೆ. ಭಾಷೆಯನ್ನು ಮಾತನಾಡುವುದರಲ್ಲಿ ವ್ಯತ್ಯಾಸ ಕಂಡುಬಂದರೂ ಕೂಡಾ ಬ್ಯಾರಿ ಸಂಸ್ಕೃತಿಯ ಸೊಗಡು ಬ್ಯಾರಿಗಳಿಂದ ದೂರವಾಗಿಲ್ಲ. ಬ್ಯಾರಿ ಭಾಷೆಗೆ ಮೂಲ ಹಳೆಗನ್ನಡ. ಆದ್ದರಿಂದ ಹಳೆಗನ್ನಡದ ಹಲವಾರು ಪದಗಳು ಬ್ಯಾರಿ ಭಾಷೆಯಲ್ಲಿವೆ ಎಂದು ಹೇಳಲಾಗಿದೆ. ಉದಾ: ಮದ್‌ಲ್, ಸಪುರ, ಪುಲಿ, ತೋರ, ಕಡ, ರಾವು ಇತ್ಯಾದಿ ಹಳೆಗನ್ನಡದಲ್ಲಿ ಕಾಣಸಿಗುತ್ತವೆ.

ಹಿಂದೆ ಬ್ಯಾರಿ ಭಾಷೆಯನ್ನು ಮಂಜೇಶ್ವರದ ಬ್ಯಾರಿ ಭಾಷೆ ಮತ್ತು ಮೈಕಾಲ್ತೆ ಬ್ಯಾರಿ ಭಾಷೆ ಎಂದು ಎರಡು ಕವಲಾಗಿ ವಿಂಗಡಿಸಿದ್ದರು. ಮಂಜೇಶ್ವರದ ಬ್ಯಾರಿ ಭಾಷೆ ಎಂದರೆ, ಬೆಲ್ಚಡದ ಜಾತಿ ಮಂದಿ ಆಡುವ ಬ್ಯಾರಿ ಭಾಷೆ ಎಂಬ ನಂಬಿಕೆ ಇದೆ. ಆದರೆ ಈಗ ಬ್ಯಾರಿ ಭಾಷೆಯನ್ನು ಹೀಗೆ ಎರಡು ಕವಲಾಗಿ ವಿಂಗಡಿಸಿರುವುದು ಬೆಳಕಿಗೆ ಬಂದಿಲ್ಲ.

ಬ್ಯಾರಿ ಭಾಷೆಯು ತುಳು ವ್ಯಾಕರಣ ಶೈಲಿಯನ್ನೇ ಹೋಲುತ್ತದೆ. ಇದರಲ್ಲಿ ಶೇ. ೫೦ರಷ್ಟು ಪದಗಳು ತುಳುಭಾಷೆಯದ್ದೇ ಆಗಿವೆ. ಅಲ್ಲದೆ ಬ್ಯಾರಿ ಭಾಷೆಯಲ್ಲಿ ಅರಬಿ, ತೆಲುಗು, ತಮಿಳು, ಮಲೆಯಾಳಂ, ಕೊಡವ, ಉರ್ದು ಭಾಷೆಗಳ ಪದಗಳೂ ಇವೆ. ಬ್ಯಾರಿ ಭಾಷೆಯನ್ನು 'ನಕ್ಕ್‌ನಿಕ್ಕ್, ಮೈಕಾಲ್ತೆ ಭಾಷೆ, ಮಾಪ್ಲಾ ಭಾಷೆ, ಮಂಗಳೂರು ಮಲಯಾಳಂ, ಮಾಮಾಲಿ' ಇತ್ಯಾದಿಯಾಗಿ ಬ್ಯಾರಿಗಳ ಸಹಿತ ಅನ್ಯರು ಗುರುತಿಸಿದ್ದುಂಟು. ಆದರೆ ಇದೀಗ ಬ್ಯಾರಿಗಳು ತಮ್ಮ ಭಾಷೆಯನ್ನು ಬ್ಯಾರಿ ಭಾಷೆ ಎಂದು ಗುರುತಿಸುತ್ತಾರಲ್ಲದೆ, ಬ್ಯಾರಿಗಳು ಎಂದು ಕರೆಯಲು ಹೆಮ್ಮೆ ಪಡುತ್ತಾರೆ. ಇಷ್ಟೆಲ್ಲಾ ಹಿರಿಮೆ, ಗೌರವ ಇರುವ ಬ್ಯಾರಿ ಭಾಷೆಗೆ ಲಿಪಿ ಇಲ್ಲ ಎಂದು ಹೇಳಲಾಗುತ್ತಿದೆ.

ಆದರೆ ಹಿಂದೆ 'ಒಟ್ಟೆಳ್‌ತ್' ಎಂಬ ಲಿಪಿ ಇತ್ತು. ತುಳು ಮತ್ತು ಅರಬಿ ಲಿಪಿಯನ್ನು ಹೋಲುವ ಇದು ಬ್ಯಾರಿ ಭಾಷೆಯ ಲಿಪಿ ಎಂಬ ಅಭಿಪ್ರಾಯವೂ ಇದೆ. ಕೆಲವರು ಒಟ್ಟೆಳ್‌ತ್ ಎಂಬುದು ಬ್ಯಾರಿ ಲಿಪಿ ಅಲ್ಲ ಎಂದು ವಾದಿಸುತ್ತಾರೆ. ಒಟ್ಟಿನಲ್ಲಿ ಅದರ ಬಗ್ಗೆ ಆಳವಾದ ಸಂಶೋಧನೆ ನಡೆಯಲಿಲ್ಲ. ಅದಲ್ಲದೆ ಹೊಸ ಲಿಪಿ ಶೋಧದಿಂದ ಭಾಷೆಯ ಅಭಿವೃದ್ಧಿ ಅಸಾಧ್ಯ ಎಂದು ಮನಗಂಡ ಹಿನ್ನೆಲೆಯಲ್ಲಿ ಇದೀಗ ಕನ್ನಡ ಲಿಪಿ ಬಳಸಿ ಬ್ಯಾರಿ ಭಾಷೆಯಲ್ಲಿ ಸಂಪರ್ಕ ಸಾಧಿಸುತ್ತಾರೆ. ಬ್ಯಾರಿ ಭಾಷೆಯಲ್ಲಿ ಲಿಪಿ ಇಲ್ಲ ಎಂದು ಮನಗಂಡು ಬ್ಯಾರಿ ಭಾಷಾ ಪ್ರೇಮಿ, ಕುರ್‌ಆನ್‌ನನ್ನು ಬ್ಯಾರಿ ಭಾಷೆಯಲ್ಲಿ ಅನುವಾದಿಸುವುದರಲ್ಲಿ ಹೆಚ್ಚು ಆಸಕ್ತಿ ತಾಳಿರುವ ಮಂಗಳೂರಿನ ಮುಹಮ್ಮದ್ ಅಲಿ ಎಂಬವರು 'ಲೆಂಗಲ್' ಎಂಬ ಹೆಸರಿನ ಬ್ಯಾರಿ ಲಿಪಿಯನ್ನು ೧೯೫೭ರಲ್ಲಿ ಕಂಡುಹಿಡಿದಿದ್ದರು. ಆದರೆ ಅವರು ಆ ನಿಟ್ಟಿನಲ್ಲಿ ಮುಂದುವರೆಯಲಾಗಲಿಲ್ಲ. ಬ್ಯಾರಿ ಭಾಷೆಯಲ್ಲಿ ಪುಸ್ತಕ, ಕ್ಯಾಸೆಟ್ ಇತ್ಯಾದಿ ಈಗ ಬರುತ್ತಿದ್ದು ಆದರೆ ಅದು ನಿರೀಕ್ಷಿತ ಪ್ರಮಾಣದಲ್ಲಿ ಬಂದಿಲ್ಲ.

ಬ್ಯಾರಿಗಳು ಇಸ್ಲಾಮ್ ಧರ್ಮಾವಲಂಬಿಗಳಾಗಿದ್ದರೂ ಕೂಡಾ ಅವರ ಸಂಸ್ಕೃತಿಯಲ್ಲಿ ತುಳು ಸಂಸ್ಕೃತಿ ಎದ್ದು ಕಾಣುತ್ತದೆ. ಕೆಲವು ಆಚಾರ ವಿಚಾರಗಳು ಧರ್ಮಕ್ಕೆ ವಿರುದ್ಧವಾಗಿದ್ದರೂ ಕೂಡಾ ಅದನ್ನು ತಮ್ಮ ಸಂಸ್ಕೃತಿ ಎಂದು ಸ್ವೀಕರಿಸಿರುವುದು ಕಂಡುಬರುತ್ತದೆ.

ಆರಂಭದಲ್ಲಿ ಬ್ಯಾರಿಗಳು ಕಂಡುಬರುತ್ತಿದ್ದ ತುಳು ಸಂಸ್ಕೃತಿ ನಂತರ ತುಳುನಾಡಿನುದ್ದಕ್ಕೂ ಸೂಫಿ ಸಂತರಾದ ಬಾಬಾ ಫಕ್ರುದ್ದೀನ್ ವಲಿ, ಶರೀಫುಲ್ ಮದನಿ, ಶೈಖ್ ಸಿದ್ದೀಖ್ ಯೂಸುಫ್ ವಲಿಯುಲ್ಲಾಹಿ, ಶೈಖ್ ಅಸ್ರಾರುದ್ದೀನ್ ವಲಿ, ಮಾಲಿಕ್ ದಿನಾರ್ ಮುಂತಾದವರು ಇಸ್ಲಾಮಿನ ಪ್ರಚಾರ ನಡೆಸಿದುದರ ಫಲವಾಗಿ ಮಾಯವಾಯಿತಲ್ಲದೆ, ಬ್ಯಾರಿಗಳಲ್ಲಿ ಧಾರ್ಮಿಕ ಜಾಗೃತಿ ಉಂಟಾಯಿತು. ಬ್ಯಾರಿಗಳು ಇರುವ ಕಡೆ ಮಸ್ಜಿದ್, ಮದ್ರಸ, ದರ್ಗಾ ಮುಂತಾದ ಧಾರ್ಮಿಕ ಕೇಂದ್ರಗಳು ತಲೆ ಎತ್ತಿದವು. ಆದರೂ ಕೂಡಾ ಬ್ಯಾರಿಗಳ ಕೆಲವೊಂದು ಆಚಾರ ವಿಚಾರಗಳು ಇಂದಿಗೂ ತುಳುವರ ಆಚಾರವನ್ನೇ ಅನುಕರಿಸುತ್ತಿವೆ.

೧೨೦೦ ವರ್ಷಗಳ ಇತಿಹಾಸವಿರುವ ಬ್ಯಾರಿ ಜನಾಂಗ ಹಿಂದೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಎಂಬುದಕ್ಕೆ ಹಲವಾರು ನಿದರ್ಶನಗಳು ಸಾಕ್ಷಿಯಾಗುತ್ತಿವೆ. ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಅವಿಭಜಿತ ಜಿಲ್ಲೆಯ ಹಲವಾರು ಬ್ಯಾರಿಗಳು ಅವಿರತ ಹೋರಾಟ ನಡೆಸಿದ್ದರು. ಬಂಟ್ವಾಳ ತಾಲೂಕಿನ ಕರಿಂಗಾನದ (ನರಿಂಗಾನ) ಮೋನು ಬ್ಯಾರಿ ಮತ್ತು ಕಾರ್ಲೆಯ ಅದುಂಞಿ ಬ್ಯಾರಿ ಎಂಬುವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಜೈಲುವಾಸ ಸೇರಿ ಅಲ್ಲೇ ಅಸುನೀಗಿದ್ದರು ಎಂದು ಹಿರಿಯ ಬ್ಯಾರಿ ಸಾಹಿತಿ ಬಿ. ಎಂ. ಇದಿನಬ್ಬ ಅಭಿಪ್ರಾಯಪಡುತ್ತಾರೆ.

ಅವಿಭಜಿತ ದ.ಕ. ಜಿಲ್ಲೆಯ ಮುಸ್ಲಿಮರ ಪೈಕಿ ಶೇ. ೯೦ರಷ್ಟು ಮಂದಿ ಬ್ಯಾರಿಗಳು ಮತ್ತು ಒಟ್ಟಾರೆ ಸುಮಾರು ೯೦ ಸಾವಿರ ಬ್ಯಾರಿಗಳ ಮನೆ ಇವೆ ಎಂಬ ಅಂಕಿ ಅಂಶವನ್ನು ದಿ ಬ್ಯಾರೀಸ್ ವೆಲ್ಫೇರ್ ಎಸೋಸಿಯೇಶನ್‌ನವರು ೧೯೯೭ರಲ್ಲಿ ನೀಡಿದ ವರದಿ ತಿಳಿಸುತ್ತದೆ. ಅಂದರೆ ಇದೀಗ ಬ್ಯಾರಿಗಳ ಸಂಖ್ಯಾವಾರಿನಲ್ಲಿ ಹೆಚ್ಚಳ ಕಂಡುಬಂದಿದ್ದು, ೧೦ ಲಕ್ಷಕ್ಕೂ ಅಧಿಕ ಬ್ಯಾರಿಗಳು ಇದ್ದಾರೆ ಎಂದು ಅಂದಾಜಿಸಲಾಗುತ್ತಿದೆ. ಮಂಗಳೂರು ತಾಲೂಕಿನಲ್ಲಿ ೩೦ ಸಾವಿರಕ್ಕೂ ಅಧಿಕ ಬ್ಯಾರಿಗಳ ಮನೆಗಳಿವೆ. ಅದಲ್ಲದೆ, ಚಿಕ್ಕಮಗಳೂರು, ಕೊಡಗು, ಶಿವಮೊಗ್ಗ ಹಾಸನ, ಬೆಂಗಳೂರು, ಮುಂಬೈ ಮುಂತಾದ ಕಡೆಯೂ ಇದೀಗ ಬ್ಯಾರಿಗಳು ತಳವೂರಿದ್ದಾರೆ. ಮಂಗಳೂರಲ್ಲಿ ಶೇ. ೩೮.೫, ಬಂಟ್ವಾಳದಲ್ಲಿ ಶೇ. ೨೨, ಬೆಳ್ತಂಗಡಿಯಲ್ಲಿ ಶೇ. ೧೨.೫, ಪುತ್ತೂರಿನಲ್ಲಿ ಶೇ. ೧೫, ಉಡುಪಿಯಲ್ಲಿ ಶೇ. ೫.೫, ಕಾರ್ಕಳ ಮತ್ತು ಸುಳ್ಯದಲ್ಲಿ ಶೇ. ೨.೫, ಕುಂದಾಪುರದಲ್ಲಿ ಶೇ. ೧.೫ ಬ್ಯಾರಿಗಳು ನೆಲೆಸಿದ್ದಾರೆ. ಮಂಗಳೂರಲ್ಲಿ ಅತ್ಯಧಿಕ ಅಂದರೆ ೩೦,೩೫೦ ಮನೆಗಳು ಮತ್ತು ೧,೯೩,೦೦೦ ಬ್ಯಾರಿಗಳು ನೆಲೆಸಿದ್ದಾರೆ, ಕುಂದಾಪುರದಲ್ಲಿ ೧೦೮೪ ಮನೆ ಮತ್ತು ೭,೫೦೦ ಜನರಿದ್ದಾರೆ. ಇದು ಅತೀ ಕಡಿಮೆ ಮನೆ ಮತ್ತು ಜನರಿರುವ ತಾಲೂಕಾಗಿದೆ ಎಂದು ಪ್ರೊ. ಇಬ್ರಾಹಿಂ ಬ್ಯಾರಿ ಅಭಿಪ್ರಾಯಪಡುತ್ತಾರೆ. ಬ್ಯಾರಿಗಳ ಮೂಲ ತುಳುನಾಡು ಆದರೂ ಕೂಡಾ ಉದ್ಯೋಗ ನಿಮಿತ್ತ ಇದೀಗ ವಿಶ್ವದಾದ್ಯಂತ ಹರಡಿದ್ದಾರೆ. ಗಲ್ಫ್ ರಾಷ್ಟ್ರಗಳಲ್ಲಿ

೨೨,೦೦೦ ಬ್ಯಾರಿಗಳು ಉದ್ಯೋಗ ಮಾಡುತ್ತಿದ್ದಾರೆ. ಅದೇ ರೀತಿ ಇನ್ನೂ ಹಲವಾರು ರಾಷ್ಟ್ರಗಳಲ್ಲಿ ಬ್ಯಾರಿಗಳು ನೆಲೆಯೂರಿದ್ದಾರೆ.

ಬ್ಯಾರಿ ಅಂದರೆ, ವ್ಯಾಪಾರವು ಬ್ಯಾರಿಗಳ ನಾಡಿನರಗಳಲ್ಲಿ ಕರಗತ ಮಾಡಿಕೊಂಡು ಬಂದದ್ದಾಗಿದೆ. ಪ್ರಾಚೀನ ಕಾಲದಿಂದಲೇ ಜಿಲ್ಲೆಯ ಬ್ಯಾರಿ ಮುಸ್ಲಿಮರು ಕಟ್ಲೆರಿ ಅಥವಾ ಜಿನಸು ಅಂಗಡಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ಹಂದಿ ಮತ್ತು ಶೇಂದಿ ಈ ಎರಡು ಆದಾಯ ಮೂಲಗಳನ್ನು ತಮ್ಮ ವ್ಯಾಪಾರದ ಕಕ್ಷೆಯೊಳಗೆ ಸೇರಿಸದ ಬ್ಯಾರಿಗಳು ಮಿಕ್ಕುಳಿದ ಎಲ್ಲಾ ಕಸಬುಗಳಲ್ಲಿ ನಿರತರಾಗಿರುವುದು ಕಂಡುಬರುತ್ತದೆ.

ಕಳೆದ ಹತ್ತು ವರ್ಷಗಳಿಂದ ಬ್ಯಾರಿಗಳು ಲೌಕಿಕ ಶಿಕ್ಷಣ ರಂಗದತ್ತ ಆಸಕ್ತಿ ವಹಿಸುತ್ತಿರುವುದು ಕಂಡುಬರುತ್ತದೆ. ಆದರೆ ನಿರೀಕ್ಷಿತ ಸುಧಾರಣೆಯಾಗಿಲ್ಲ. ಶಿಕ್ಷಣದ ಬಗ್ಗೆ ಇರುವ ಭಯಾವೃತ ಮನೋಭಾವವೇ ಬ್ಯಾರಿಗಳು ಶಿಕ್ಷಣದಿಂದ ಹಿಂದುಳಿಯಲು ಮೂಲ ಕಾರಣವಾಗಿದೆ.

ಉಳ್ಳಾಲದಲ್ಲಿ ಸೈಯ್ಯದ್ ಮದನಿ ಸಂಸ್ಥೆ, ತುಂಬೆಯಲ್ಲಿ ಮುಹಿಯ್ಯುದ್ದೀನ್ ಎಜುಕೇಶನಲ್ ಸಂಸ್ಥೆ, ಪುತ್ತೂರಿನಲ್ಲಿ ಅನ್ಸಾರುದ್ದೀನ್ ಎಜುಕೇಶನಲ್ ಸಂಸ್ಥೆ, ಮಂಗಳೂರಿನಲ್ಲಿ ಮುಸ್ಲಿಮ್ ಎಜುಕೇಶನಲ್ ಮತ್ತು ಜಮೀಯತುಲ್ ಫಲಾಹ್ ಸಂಸ್ಥೆ, ಉಳ್ಳಾಲದಲ್ಲಿ ಇಸ್ಲಾಹಿ ಎಜುಕೇಶನ್ ಸೊಸೈಟಿ, ಮುಂತಾದವು ಬ್ಯಾರಿಗಳ ಅಧೀನದಲ್ಲಿ ಇರುವ ಶಿಕ್ಷಣ ಸಂಸ್ಥೆಗಳಾಗಿವೆ. ಉಡುಪಿ ಮತ್ತು ಉಳ್ಳಾಲದಲ್ಲಿ ಬ್ಯಾರಿ ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶಿಕ್ಷಣ ಸಂಸ್ಥೆ ಇವೆ.

## ಸದ್ಯದ ಸಮಯ

ಕಣ್ಣೀರ ಹನಿ ಮಿನುಗುತ್ತಿವೆ
ಸಮಯದ ರೆಪ್ಪೆಗಳ ಮೇಲೆ
ಅವು ಅಲುಗಾಡಬಹುದು ಆದರೆ
ಗಲ್ಲದ ಮೇಲಿಳಿಯಲಾರವು.

ಹರೆಯದ ಬಿಸಿ ರಕ್ತವಿದೆ
ಬದುಕಿನ ಹಳೆಯ ಧಮನಿಗಳಲ್ಲಿ
ಅದು ಹರಿಯಬಹುದು ಆದರೆ
ಮೊಗದ ಮೇಲೆ ಹೊಳೆಯಲಾರದು.

ಬ್ರಿಟನ್ನಿನ ಕಿರೀಟದಲ್ಲಿ
ವಜ್ರ, ಸೂರ್ಯನಂತೆ ಕಾಣುತ್ತದೆ
ಆದರೆ ಬೆಳಕಿಲ್ಲದ ಭಾರತದ ಹಣೆಯ
ಮೇಲದು ಹೊಳೆಯಲಾರದು.

ಆಧುನಿಕ ಯುಗದ ಕೆಂಪು ಗುಲಾಬಿ
ನಿಧಾನವಾಗಿ ಆದರೆ ಖಚಿತವಾಗಿ ಅರಳುತ್ತದೆ
ಅದು ರಹಸ್ಯವಾಗಿ ನಗಬಹುದು
ಆದರೆ ಗಾಳಿಯಲ್ಲಿ ಸುಗಂಧವ ಬೀರಲಾರದು.

ಬದುಕಿನ ಬೂದಿಯೊಳಗೊಂದು
ಕಿಡಿ ಅಡಗಿದೆ
ಅದು ಬೂದಿಯ ಕೆಳಗೆ ಸುಡಬಲ್ಲುದೆ
ವಿನಃ ಭುಗಿಲೇಳಲಾರದು.



ಮೂಲ : ಅಲಿ ಸರ್ದಾರ ಜಾಫ್ರಿ
ಕನ್ನಡಕ್ಕೆ : ವಿಭಾ

ಒಂದು ಕಾಲಕ್ಕೆ ಪತ್ರಿಕೆ ಎಂದರೆ ಬ್ಯಾರಿಗಳು ಆದಷ್ಟು ದೂರ ಸರಿಯುತ್ತಿದ್ದರು. ಆದರೆ ಇದೀಗ ಪತ್ರಿಕೆ ಓದುವುದರಿಂದ ಹಿಡಿದು ಸಂಪೂರ್ಣ ಪತ್ರಿಕೋದ್ಯಮದತ್ತ ಹೆಚ್ಚು ಆಸಕ್ತಿ ವಹಿಸುತ್ತಿರುವುದು ಕಂಡುಬರುತ್ತದೆ. ಬ್ಯಾರಿಗಳು ಕೇವಲ ಬ್ಯಾರಿ ಭಾಷೆಯಲ್ಲಿ ಮಾತ್ರ ಪತ್ರಿಕೆ ಹೊರಡಿಸಿಲ್ಲ. ಬದಲಾಗಿ ಕನ್ನಡದಲ್ಲೂ ಹಲವಾರು ಪತ್ರಿಕೆಗಳನ್ನು ಹೊರತಂದಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಮತ್ತು ಕನ್ನಡ ಪತ್ರಿಕೋದ್ಯಮಕ್ಕೆ ಬ್ಯಾರಿಗಳು ನೀಡಿದ ಸೇವೆ ಅಮೋಘ. ಅದರ ಜತೆಗೆ ಇಂಗ್ಲಿಷ್ ಪತ್ರಿಕೆಗಳಲ್ಲೂ ಬ್ಯಾರಿಗಳು ಕಾಣಿಸಿಕೊಂಡಿದ್ದಾರೆ. ಬ್ಯಾರಿಗಳು ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಹೆಸರುವಾಸಿಯಾದ ಪತ್ರಿಕೆಗಳಲ್ಲಿ ದುಡಿದಿದ್ದಾರಲ್ಲದೆ, ತಮ್ಮದೇ ಆದ ಸಂಪಾದಕತ್ವ ಮತ್ತು ಪ್ರಕಾಶಕ, ಮಾಲಕತ್ವ ಪತ್ರಿಕೆಗಳನ್ನೂ ಹೊರತಂದಿದ್ದಾರೆ.

ಸಾಂಸ್ಕೃತಿಕ ಕಲೆಗಳಾದ ನಾಟಕ, ಯಕ್ಷಗಾನ ಮುಂತಾದವುಗಳ ರಚನೆ, ನಟನೆಯನ್ನು ಇಸ್ಲಾಮ್ ಸಮ್ಮತಿಸುವುದಿಲ್ಲ. ಹಾಗಾಗಿ ಈ ಕ್ಷೇತ್ರಕ್ಕೆ ಸಂಬಂಧಿಸಿದ ಪ್ರತಿಭೆ ಅವರಲ್ಲಿದ್ದರೂ ಕೂಡಾ ವಿರೋಧದ ಹಿನ್ನೆಲೆಯಲ್ಲಿ ಪ್ರದರ್ಶಿಸಲು ಮುಂದಾಗುವುದಿಲ್ಲ. ಆದರೂ ಕೂಡಾ ಕೆಲವೊಂದು ಬ್ಯಾರಿಗಳು ನಾಟಕ, ಕಲೆ, ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ರಾಜಕೀಯ ಕ್ಷೇತ್ರದಲ್ಲೂ ಬ್ಯಾರಿಗಳು ತಮ್ಮದೇ ಆದ ಛಾಪು ಬೆಳೆಸಿದ್ದಾರೆ. ಜಿಲ್ಲೆಯ ಉಳ್ಳಾಲ ಮತ್ತು ವಿಟ್ಲ ವಿಧಾನಸಭಾ ಕ್ಷೇತ್ರದಲ್ಲಿ ಅತ್ಯಧಿಕ ಬ್ಯಾರಿಗಳು ನೆಲೆಸಿದ್ದಾರೆ. ಶಾಸಕರಾಗಿ, ಸಚಿವರಾಗಿ ಹಲವಾರು ಮಂದಿ ಪಕ್ಷದ ವಿವಿಧ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಬ್ಯಾರಿಗಳು ಬ್ರಿಟಿಷ್ ಸರ್ಕಾರವಿದ್ದಾಗಲೇ ಸರ್ಕಾರಿ ಕ್ಷೇತ್ರದಲ್ಲಿ ಹೆಸರು ಗಳಿಸಿದ್ದಾರೆ. ಸರ್ಕಾರದ ವಿವಿಧ ಇಲಾಖೆಗಳಲ್ಲಿ ದುಡಿದ ಅನುಭವ ಬ್ಯಾರಿಗಳಿಗಿದೆ. ಈಗಲೂ ಕೇಂದ್ರ ಮತ್ತು ರಾಜ್ಯ ಸರ್ಕಾರದ ಹಲವಾರು ಇಲಾಖೆಗಳಲ್ಲಿ ಬ್ಯಾರಿಗಳು ಸೇವೆ ಸಲ್ಲಿಸುತ್ತಿದ್ದಾರೆ.

ಬ್ಯಾರಿ ಸಂಸ್ಕೃತಿಗೂ ತುಳು ಸಂಸ್ಕೃತಿಗೂ ಉತ್ತಮ ಸಂಬಂಧವಿದೆ. ಆದರೂ ಕೂಡಾ ಬ್ಯಾರಿಗಳ ಜನನ, ಮುಂಜಿ, ಹೆಣ್ಣು ಮಗಳು ನೆರೆಯುವುದು ಮುಂತಾದ ಕೆಲವು ಪದ್ಧತಿಗಳು ಕೊಡವ ಜನಾಂಗದ ಜೀವನ ಶೈಲಿಯನ್ನೇ ಹೋಲುತ್ತಿವೆ. ಬ್ಯಾರಿಗಳು ಎಲ್ಲೇ ನೆಲೆಸಲಿ, ಅಲ್ಲಿನ ಭಾಷೆಯ ಜತೆಗೆ ಬ್ಯಾರಿ ಭಾಷೆಯನ್ನು ಆಡುತ್ತಾರೆ. ಗಲ್ಫ್ ರಾಷ್ಟ್ರಗಳಿಗೆ ಉದ್ಯೋಗ ನಿಮಿತ್ತ ಹೋದರೂ ಕೂಡಾ ಬ್ಯಾರಿಗಳು ತಮ್ಮ ಭಾಷೆಯ ಮೇಲೆ ಹಿಡಿತ ಸಾಧಿಸುತ್ತಾರೆ. ಆದರೆ ವಿದ್ಯಾಭ್ಯಾಸ, ಉದ್ಯೋಗ ಮತ್ತಿತ್ಯಾದಿ ಕಾರಣಕ್ಕಾಗಿ ಕೇರಳದ ಕಡೆಗೆ ಹೋದ ಕೆಲವು ಬ್ಯಾರಿಗಳು ತಮ್ಮ ಬ್ಯಾರಿ ಭಾಷೆಯನ್ನು ದೂರ ಸರಿಸುತ್ತಿರುವುದು ಕಂಡುಬರುತ್ತದೆ.

ಸಂಘಟನಾ ಕ್ಷೇತ್ರದಲ್ಲಿ ಬ್ಯಾರಿಗಳ ಪಾತ್ರ ಹಿರಿದು. ಬ್ಯಾರಿಗಳು ಎಲ್ಲೇ ಇರಲಿ, ಧರ್ಮದ ಆಧಾರದ ಮೇಲೆಯಾದರೂ ಒಗ್ಗೂಡುತ್ತಾರೆ. ಐಕ್ಯತೆ ಸಾಧಿಸಲು ಆಗಾಗ ಒಗ್ಗೂಡುತ್ತಲೇ ಇರುವುದು ಕಂಡುಬರುತ್ತದೆ. ಹಾಗಾಗಿಯೇ ಬ್ಯಾರಿಗಳು ಇರುವ ಮಸೀದಿ ಅಥವಾ ಜಮಾತ್ ವ್ಯಾಪ್ತಿಯಲ್ಲಿ ಹಲವಾರು ಸಂಘ ಸಂಸ್ಥೆಗಳು ರಚನೆಗೊಂಡಿರುವುದು ಕಂಡುಬರುತ್ತದೆ.

'ಜಮಾತ್' ಎಂಬುದು ಬ್ಯಾರಿಗಳ ಬಲಿಷ್ಠ ಸಂಘಟನೆಗಳಲ್ಲಿ ಒಂದಾಗಿದೆ. ಜಮಾತ್‌ನನ್ನು ನಿಯಂತ್ರಿಸಲು 'ಜಮಾತ್ ಕಮಿಟಿ'ಯನ್ನೂ ರಚಿಸಲಾಗಿದೆ. ಇದಕ್ಕೆ ಅಧ್ಯಕ್ಷರು ಮತ್ತಿತರ ಪದಾಧಿಕಾರಿಗಳು, ಸದಸ್ಯರನ್ನು ಚುನಾವಣೆ ಅಥವಾ ಅವಿರೋಧವಾಗಿ ಆಯ್ಕೆ ಮಾಡಲಾಗುತ್ತದೆ.

ಬ್ಯಾರಿ ಭಾಷೆ, ಸಂಸ್ಕೃತಿ, ಕಲೆಯ ಬೆಳವಣಿಗೆಗಾಗಿ ಕೆಲವು ಸಂಘಗಳು ರಚನೆಗೊಂಡಿವೆ. ಬೆಂಗಳೂರಿನಲ್ಲಿ ಬ್ಯಾರೀಸ್ ವೆಲ್ಫೇರ್ ಎಸೋಸಿಯೇಶನ್, ಮಂಗಳೂರಿನಲ್ಲಿ ಕೇಂದ್ರ ಬ್ಯಾರಿ ಸಾಹಿತ್ಯ ಪರಿಷತ್, ಬ್ಯಾರಿ ಭಾಷಾ ಅಧ್ಯಯನ ಕೇಂದ್ರ, ಬ್ಯಾರಿ ಕಲಾರಂಗ ಮೈಕಾಲ, ಬ್ಯಾರಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘಗಳು ಸ್ಥಾಪನೆಗೊಂಡಿದ್ದವು. ಅದಲ್ಲದೆ ಮರ್ಕಝ್‌ನ ಅರೆಬಿಕ್ ಕಾಲೇಜ್‌ನಲ್ಲಿ ವ್ಯಾಸಂಗ ಮಾಡುವ ಬ್ಯಾರಿ ವಿದ್ಯಾರ್ಥಿಗಳು 'ಬ್ಯಾರಿ ಸ್ಟೂಡೆಂಟ್ ಫೆಡರೇಶನ್' ಎಂಬ ಸಂಸ್ಥೆಯನ್ನು ರಚಿಸಿದ್ದರು. ಇದೀಗ ಇವುಗಳಲ್ಲಿ ಕೇವಲ ಒಂದೆರೆಡು ಮಾತ್ರ ಚುರುಕಾಗಿ ಕಾರ್ಯ ನಿರ್ವಹಿಸುತ್ತಿವೆ. ಈಗಾಗಲೇ ಒಂದು ಬ್ಯಾರಿ ಸಮ್ಮೇಳನ ಮತ್ತು ಎರಡು ಸಾಹಿತ್ಯ ಸಮ್ಮೇಳನ ನಡೆದಿದ್ದು, ಬ್ಯಾರಿ ಭಾಷೆಗೆ ಪ್ರತ್ಯೇಕ ಸಾಹಿತ್ಯ ಅಕಾಡೆಮಿ ರಚನೆಯ ಅಗತ್ಯವಿದೆ.

ಇಂಥ ವಿಶಿಷ್ಟ ರೂಪ ಪಡೆದ ಬ್ಯಾರಿಗಳು ಇಂದು ವ್ಯಾಪಾರವಲ್ಲದೆ, ಇತರ ಕ್ಷೇತ್ರಗಳಲ್ಲಿ ಮುಂದುವರಿದಿದ್ದರೂ ಕೂಡಾ 'ಬ್ಯಾರಿ' ಎಂಬ ಹೆಗ್ಗಳಿಕೆಯಿಂದ ದೂರವಾಗಿಲ್ಲ. ಅದುವೇ ಬ್ಯಾರಿಗಳ ವೈಶಿಷ್ಟ್ಯತೆಗೆ ಸಾಕ್ಷಿ.

ಹಂಝ ಮಲಾರ್
ಅರಸ್ಥಾನ, ಅಂಚೆ : ಪಾವೂರು – ೫೭೪ ೧೮೨, ಮಂಗಳೂರು ತಾಲೂಕು

# ಹಂಗು ನೋಡಾ ಹಂಗಿನ ಶಬ್ದ ನೋಡಾ

ಶ್ರೀಛಿವು

ನಡೆದರೆ ಎಡೆಗೆಟ್ಟ ನಡೆಯ ನಡೆವುದಯ್ಯ
ನುಡಿದರೆ ಪಡಿಗೆಟ್ಟ ನುಡಿಯ ನುಡಿವುದಯ್ಯ
ಮಾಡಿದರೆ ಮರಹುಗೆಟ್ಟ ಮಾಟವ ಮಾಡುವುದಯ್ಯ
ಕೂಡಿದರೆ ಕುರುಹುಗೆಟ್ಟ ಕೂಟವ ಕೂಡುವುದಯ್ಯ
ಗುಹೇಶ್ವರಾ, ನಿಮ್ಮ ಶರಣನ ನಿಜಪಥವಿದಯ್ಯ

ಶರಣನ 'ನಿಜ' ಪಥವನ್ನು ಕುರಿತ ಈ ವಚನ ಧ್ಯಾನಕ್ಕೆ ಮಾತ್ರ ಪ್ರವೇಶ ನೀಡುತ್ತದೆಂದು ನನ್ನ ಅನಿಸಿಕೆ. ಮಾತು, ಬರಹ, ವ್ಯಾಖ್ಯಾನ, ಸಂಕಥನಗಳ ಮೂಲಕ ಪ್ರತಿಷ್ಠಾಪಿಸಬೇಕಾದ್ದು ಇಲ್ಲಿ ಏನೂ ಇಲ್ಲ. ಏನಾದರೂ ಉಳಿದುದನ್ನು ಅಳೆಯುವ, ಅಳೆದು ಸುರಿಯುವ ಈ ಪಡಿಗಳು ತಮ್ಮಲ್ಲಿ ತುಂಬಿಕೊಳ್ಳಲು, ತಮ್ಮ ಸಾಮರ್ಥ್ಯವನ್ನು ಸ್ಥಾಪಿಸಲು, ಎಲ್ಲವೂ ಇದ್ದು ಅಳತೆಗೆ ಸಿಗಬೇಕೆಂದು ಬಯಸುತ್ತವೆ. ಕೊಕ್ಕರೆಯ ಕೊಕ್ಕನ್ನು, ಅದರ ನಾಲಗೆಯ ಉದ್ದಗಲಗಳನ್ನು ಇನ್ಯಾವುದರ ಬಾಲವನ್ನೋ, ಮತ್ತೇನನ್ನೋ ಅಳೆಯಬಾರದ್ದನ್ನೆಲ್ಲ ಅಳೆಯುವ ಅಂಗುಲ ಹುಳುವಿನಂತೆ ಅಳೆಯುವ ಸಂಭ್ರಮ ಅವಕ್ಕೆ. ಅಳೆಯುವ ಉದ್ಯೋಗ ಸ್ಥಿರವಾಗಬೇಕಾದರೆ ಅಳಿಸಿಕೊಳ್ಳುವುದು ಸ್ಥಿರವಾಗಿರಬೇಕು. ಕೋಗಿಲೆಯ ಹಾಡಿನಂತೆ, ಗಂಧದ ಪರಿಮಳದಂತೆ ಅಳೆಯಲಾಗದ್ದನ್ನು ಕಂಡರೆ ಭಯ ಅದಕ್ಕೆ. ಅಂಥಾದ್ದು ಎದುರಾದರೆ ಈ ಅಳೆಯುವ ಪ್ರಾಣಿ ದಿಕ್ಕು ತೋಚದೆ ಕಾಡು ಸೇರಿ ಕರಗಿಹೋಗಿಬಿಡುತ್ತದೆ.

ಆಡಿದ ಮಾತು ಅಳತೆಗೆ ಸಿಕ್ಕರೆ ಸಂಕಥನವಾಗುತ್ತದೆ. ಅಂತಹ ನುಡಿ ಅಧಿಕಾರವನ್ನು ಸೃಷ್ಟಿಸಿಕೊಳ್ಳುವ ಉದ್ಯೋಗದಲ್ಲಿ ತೊಡಗುತ್ತದೆ. ಅದು ನಿಜವನ್ನು ನುಡಿಯಲಾರದು. ನಿಜವೆಂಬುದು ತಾತ್ಕಾಲಿಕವಾದುದು. ಮುಂದಿನ ಕ್ಷಣಕ್ಕೆ ಮತ್ತೇನನ್ನೂ ಉಳಿಸುವ ಹಂಬಲವಿಲ್ಲದ್ದು. ಅದು ಅದರ ಗುಣ. ನುಡಿಯುವುದೇ ಆದರೆ, ಅಳತೆಗೆ ಸಿಗದ್ದನ್ನು ಅಳೆಯುವುದೇ ಆದರೆ ಅಳತೆಯೆಂಬ ನಿರ್ದಿಷ್ಟತೆಯನ್ನು, ಶಾಶ್ವತತೆಯನ್ನು ಭಂಗಗೊಳಿಸಿ ನುಡಿಯಬೇಕೆನ್ನುತ್ತಾನೆ ಅಲ್ಲಮಪ್ರಭು.

ವಸ್ತುಗಳಿಲ್ಲದ ಪ್ರಪಂಚವನ್ನು ನಾವು ಕಲ್ಪಿಸಿಕೊಳ್ಳಲಾರೆವು. ನಮ್ಮ ನಡೆಗೊಂದು ಭದ್ರ ಬುನಾದಿಯನ್ನು ಹಾಕಿಕೊಂಡೇ ಬಾಳಿ ಅಭ್ಯಾಸವಿರುವವರು ನಾವು. ನಿಲ್ಲಲು, ನಡೆಯಲು ನಿಲುವೊಂದು, ಜಾಗವೊಂದು ಇರಲೇಬೇಕು. ಸಿದ್ಧವಾದ ದಾರಿಯೊಂದಿರಬೇಕು. ಅದಿಲ್ಲದಿದ್ದರೆ ದಾರಿಯೊಂದನ್ನು ಸಿದ್ಧಮಾಡಿ 'ಹೀಗೆ ಬನ್ನಿ' ಎನ್ನುವವರು ನಾವು. ಜಾಗವಿಲ್ಲದ ಕಡೆ ನಾವು ನಿಲ್ಲಲಾರೆವು. ಸಾಮಾನ್ಯ ತಾರ್ಕಿಕ ಲೋಕದ ರೀತಿಗೆ ಇದುವೇ ಕ್ರಮ. ವಿಜ್ಞಾನವೂ ಹೀಗೆ ತಾನು ತೋರಿಸಿಕೊಡುವ ಸತ್ಯ ಭದ್ರ ಬುನಾದಿಯ ಮೇಲೆ ನಿಲ್ಲಬೇಕೆಂದು ಬಯಸುತ್ತದೆ. ಆದರೆ ತಾನು ನಿಂತ ನೆಲ, ಹಾಕಿಕೊಂಡ ಭದ್ರ ಬುನಾದಿಗಳು ಆಗಾಗ ಜರುಗಿ ಹೋಗಿ, ನಿಲ್ಲಲು ತಾವಿಲ್ಲದಂತಾಗುವ ಅನುಭವಗಳು ವಿಜ್ಞಾನಕ್ಕೆ ಆಗಾಗ್ಗೆ ಸಂಭವಿಸುತ್ತಲೇ ಇವೆ ಎನ್ನುತ್ತಾನೆ ವಿಜ್ಞಾನಿ ಐನ್‌ಸ್ಟೀನ್.

ನಾವು ನಡೆದ ದಾರಿ, ಅದು ಕೇವಲ ನಮ್ಮ ಸಂಕಥನ. ಲೋಕ ಅದಕ್ಕೇ ಜೋತುಬೀಳಬೇಕಾಗಿಲ್ಲ. ಹಾಗಾಗಿ ನಾವು ಬಿಟ್ಟುಹೋಗಬೇಕಾದ 'ಮಾದರಿ ದಾರಿ' ಎಂಬುದೇನೂ ಇಲ್ಲ.

ಮಾಡಿದ ಮಾಟ, ಅದಿರುವಷ್ಟು ಕಾಲ ವಿಸ್ಮೃತಿಯನ್ನು ದೂರ ಮಾಡುತ್ತಿರಬೇಕು. ಅದು ಒಂದು ಸಂರಚನೆಯಾಗಿ ಸ್ಥಾಪಿತವಾಗಬಾರದು. ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಬೇಕು. ಅದು ಹಾದಿಯೊಳಗಣ ಜ್ಯೋತಿ, ಬೀದಿಯೊಳಗಣ ಜ್ಯೋತಿ, ಅಂಗೈಯೊಳಗಣ ಜ್ಯೋತಿಯಂತೆ ಮಾಟವೆಂಬುದು 'ನಿರನ್ವಯೋತ್ಪತ್ತಿ ವಿನಾಶ'ದ ಪ್ರಕ್ರಿಯೆ. ಹಿಂದಿನಿಂದ ಏನನ್ನೂ ತರದೆ ಮುಂದಕ್ಕೆ ಏನನ್ನೂ ಉಳಿಸದೆ ಹೋಗುವ ಮಾಟ. ಐಕ್ಯದ ನಂತರವೂ ಏನಾದರೂ ಭಿನ್ನವಾಗಿ ಉಳಿದರೆ ಅದನ್ನು ಐಕ್ಯವೆನ್ನಲಾಗದು. ಮತ್ತೇನೂ ಉಳಿಯದ ಯೋಗ ಮಹಾಕೂಟವದು.

ಕೊನೆಯದಾಗಿ ಇದು ಪಥವೇ ಹೊರತು ನಿಲುವಲ್ಲ. ಇಡೀ ವಚನ ಮಾರ್ಗಿಯೊಬ್ಬನ ಗಮನವನ್ನು ಸೂಚಿಸುತ್ತಿದೆಯೇ ಹೊರತು ಗಮಿಸಿದ್ದನ್ನಾಗಲೀ, ಗಮಿಸಬೇಕಾದ್ದನ್ನಾಗಲೀ, ಗಮಿಸುತ್ತಿರುವವನನ್ನಾಗಲೀ ಅಲ್ಲ. ಈ ನಿಜ ಪಥದಲ್ಲಿ ಪ್ರಭುವಿನಂತಹ ದಾರ್ಶನಿಕರು, ಸಾಧಕರು ಸುಮ್ಮನೆ ಸಾಗುತ್ತಿರಬಹುದು. ಶ್ರೀ ಗುರು ನಾಗಾರ್ಜುನನಂತಹ ತಾತ್ವಿಕರು ಅದರ ಬಗೆಗಿನ ನಿಜವನ್ನು ನುಡಿಯುತ್ತಿರಬಹುದು, ಡೆರಿಡಾನಂತಹ ಭಾಷಿಕರು ಅಲ್ಲಲ್ಲಿ ನಿಂತಿರಬಹುದು. ಅಲ್ಲಮನಂತಹ ಸಾಧಕರು ಯಾರಿಂದಲೂ ಪಡೆದುಕೊಳ್ಳಬೇಕಾದ್ದು ಏನೂ ಇಲ್ಲ. ಯಾರಿಗೂ ಏನನ್ನೂ ಬಿಟ್ಟು ಹೋಗಲೂ ಬಯಸುವುದಿಲ್ಲ. ಅವರಿಗೆ ಯಾರನ್ನೂ ಸ್ಮರಿಸಿಕೊಳ್ಳಬೇಕಾದ ಹಂಗೂ ಇಲ್ಲ. ಆದರೆ ತಾತ್ವಿಕರು ಮತ್ತು ಭಾಷಿಕರಿಗೆ ಇದು ಹಂಗು ನೋಡಾ, ಹಂಗಿನ ಶಬ್ದ ನೋಡಾ.

ಎಸ್. ನಟರಾಜ ಬೂದಾಳು
'ಗೌರಿ', ಸಪ್ತಗಿರಿ ಬಡಾವಣೆ, ತುಮಕೂರು - ೫೭೨ ೧೦೨.

## ಸ್ವ ಪರಿಚಯ ಪತ್ರ



ನೀವು ಮಾಡಬೇಕಾದದ್ದೇನು ?
ಅರ್ಜಿಯೊಂದನ್ನು ಸಲ್ಲಿಸಿ
ಅದರೊಂದಿಗೆ ನಿಮ್ಮ ವಿವರಗಳನ್ನು ಇರಿಸಿ

ಬದುಕು ಎಷ್ಟೇ ಉದ್ದವಾಗಿರಲಿ
ಪರಿಚಯ ಮಾತ್ರ ಚಿಕ್ಕದಾಗಿರಲಿ
ಸಂಕ್ಷಿಪ್ತವಾಗಿರಲಿ ವಿವರಗಳು

ಮಾಹಿತಿಗಳನ್ನು ಆಯ್ಕೆ ಮಾಡಿರಿ
ಸುಂದರ ಪ್ರದೇಶಗಳು ಬರೀ ವಿಳಾಸಗಳಾಗಲಿ
ಹಳೆಯ ನೆನಪುಗಳು ಬರೀ ದಿನಾಂಕಗಳಾಗಲಿ

ನಿಮ್ಮೆಲ್ಲ ಪ್ರೇಮ ವ್ಯವಹಾರಗಳನ್ನು ಬಿಟ್ಟು
ಬರೀ ವಿವಾಹ ವಿವರಗಳನ್ನು ತುಂಬಿ
ಇನ್ನು ಮಕ್ಕಳು – ಅಧಿಕೃತ ಮಾತ್ರ
ನಿಮ್ಮ ಪರಿಚಯ ಯಾರಿಗಿದೆ
ಎನ್ನುವುದು ಮುಖ್ಯ
ನಿಮಗೆ ಯಾರು ಪರಿಚಿತರು ಎಂಬುದು ಮುಖ್ಯವಲ್ಲ
ಪ್ರಯಾಣಗಳು – ವಿದೇಶಗಳ ವಿವರ ಮಾತ್ರ
ಸಂಯೋಜನೆ – ಯಾವುದರೊಂದಿಗೆ, ಏತಕ್ಕಾಗಿ ಅಲ್ಲ
ಪ್ರಶಸ್ತಿಗಳು – ಯಾವುದಕ್ಕಾಗಿ ಎಂಬುದು ಬೇಕಿಲ್ಲ
ನೀವು ನಿಮ್ಮೊಂದಿಗೆ ಎಂದೂ ಮಾತನಾಡಿಲ್ಲ

ಎಂಬಂತೆ ಬರೆಯಿರಿ
ನಿಮ್ಮನ್ನು ನೀವು ದೂರದಿಂದ ನೋಡಿದ ಹಾಗೆ
ನಿಮ್ಮ ಪುಟ್ಟ ನಾಯಿ, ಬೆಕ್ಕು ಹಕ್ಕಿಗಳನ್ನು
ಬದುಕಿನ ಸುಂದರ ನೆನಪುಗಳನ್ನು
ಸ್ನೇಹಿತರನ್ನು, ಕನಸುಗಳನ್ನು ಬಿಡಿ

ವಸ್ತುವಿನ ಬೆಲೆ ಹೇಳಿ, ಮೌಲ್ಯಗಳನ್ನಲ್ಲ
ತಲೆಬರಹ ಮಾತ್ರ ಸಾಕು – ವಿಚಾರಗಳಲ್ಲ
ನಿಮ್ಮ ಬೂಟಿನ ಸಂಖ್ಯೆ ಸಾಕು
ಅದರೊಂದಿಗೆ ನೀವು ಎಲ್ಲಿ ಹೋಗುವಿರಿ
ಎಂಬುದು ಬೇಕಿಲ್ಲ
ನೀವು ಏನಾಗಿರಬೇಕೆಂದು
ಬಯಸಲಾಗಿದೆಯೋ
ಅದು ಮಾತ್ರ ಆಗಿರಿ
ಒಂದು ಕಿವಿ ಮಾತ್ರ ಕಾಣುವ ಹಾಗೆ
ನಿಮ್ಮ ಭಾವಚಿತ್ರವಿರಲಿ
ಅದು ಏನನ್ನು ಕೇಳಿಸಿಕೊಳ್ಳುತ್ತದೆ
ಎಂಬುದು ಬೇಕಿಲ್ಲ
ಅದು ಏನನ್ನು ಕೇಳಿಸಿಕೊಂಡೀತು ?
ಕಾಗದ ಅರೆಯುವ ಮಿಷೀನಿನ
ಕುಟ್ಟುವ ಶಬ್ದ

ಮೂಲ : ಜಿಂಬೋರ್‌ಸ್ಕಾ ವಿಸ್ಲೋವಾ (ಪೋಲಿಷ್ ಕವಿತ)
ಕನ್ನಡಕ್ಕೆ : ಎನ್. ವೆಂಕಟಕೃಷ್ಣ
ನಂ. ೧೮೭೭, ವೇಣುಗೋಪಾಲಸ್ವಾಮಿ ಗುಡಿ ಬೀದಿ, ಕಠಾರಿಪಾಳ್ಯ
ಕೋಲಾರ - ೫೬೩ ೧೦೧

**HOSATHU** Kannada Monthly / November 2004 Rs. 10 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna